ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ
राष्ट्रीय ग्रामीण स्वास्थ्य मिशन
(2005-2012)

# ವಿಶ್ವ ಜನಸಂಖ್ಯಾ ದಿನಾಚರಣೆ

ಕರ್ನಾಟಕ ಸರ್ಕಾರ

World Health Organization



ದಿನಾಂಕ 11-7-1987 ವಿಶ್ವದ ಜನಸಂಖ್ಯೆಯು 500 ಕೋಟಿಯನ್ನು ದಾಟಿ ಅಪಾಯದ ಅಂಚಿಗೆ ತಲುಪಿದ ದಿನ. ಅಂದಿನಿಂದ ಪ್ರತಿವರ್ಷ ಜನಸಂಖ್ಯಾ ಹೆಚ್ಚಳದಿಂದ ಉಂಟಾಗುವ ಸಮಸ್ಯೆಗಳ ಬಗ್ಗೆ ಅರಿವು ಮೂಡಿಸುವ ಉದ್ದೇಶದಿಂದ ವಿಶ್ವ ಜನಸಂಖ್ಯಾ ದಿನಾಚರಣೆಯನ್ನು ಆಚರಿಸಲಾಗುತ್ತಿದೆ.

**ವಿಶ್ವ/ರಾಷ್ಟ್ರ ಮತ್ತು ರಾಜ್ಯದಲ್ಲಿ ಜನಸಂಖ್ಯೆ ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿದೆ. ಅದರ ಒಂದು ಪಕ್ಷಿನೋಟ**

| ವರ್ಷ | ವಿಶ್ವ ಜನಸಂಖ್ಯೆ | ಭಾರತದ ಜನಸಂಖ್ಯೆ | ಕರ್ನಾಟಕ ರಾಜ್ಯದ ಜನಸಂಖ್ಯೆ |
|---|---|---|---|
| 1951ರಲ್ಲಿ | 259 ಕೋಟಿ | 36 ಕೋಟಿ | 1 ಕೋಟಿ 94 ಲಕ್ಷ |
| 1991ರಲ್ಲಿ | 536 ಕೋಟಿ | 84 ಕೋಟಿ | 4 ಕೋಟಿ 49 ಲಕ್ಷ |
| 2001ರಲ್ಲಿ | 615 ಕೋಟಿ | 102 ಕೋಟಿ | 5 ಕೋಟಿ 27 ಲಕ್ಷ |
| 2008 ಜುಲೈ (ಅಂದಾಜು) | 668 ಕೋಟಿ | 114.79 ಕೋಟಿ | 5 ಕೋಟಿ 92 ಲಕ್ಷ |

### ಜನಸಂಖ್ಯಾ ಸ್ಫೋಟದಿಂದ ಆಗುವ ಸಮಸ್ಯೆಗಳು

1. ಆಹಾರ, ನೀರು, ಬಟ್ಟೆ, ನೆಲ, ವಸತಿ ಹಾಗೂ ಖನಿಜಗಳ ಕೊರತೆ ; 2. ಅರಣ್ಯ ನಾಶ; 3. ನಿರುದ್ಯೋಗ, ಬಡತನ ಹೆಚ್ಚಳ; 4. ಶಿಕ್ಷಣ, ಆರೋಗ್ಯ ಸೇವೆಗಳು ಹಾಗೂ ಸಂಪನ್ಮೂಲಗಳ ಕೊರತೆ; 5. ವಾಯು, ಜಲ, ಶಬ್ದಮಾಲಿನ್ಯಗಳಲ್ಲಿ ಹೆಚ್ಚಳ; 6. ಸಾಮಾಜಿಕ ಅಸಮಾನತೆ; 7. ನಗರ ವ್ಯಾಪ್ತಿಯ ಕೊಳಚೆ ಪ್ರದೇಶಗಳ ಉಲ್ಬಣ, ವಸತಿ ಮತ್ತು ಸಾರಿಗೆ ವ್ಯವಸ್ಥೆಯ ಮೇಲೆ ಒತ್ತಡ; 8. ಸಾಂಕ್ರಾಮಿಕ ರೋಗಗಳು, ಏಡ್ಸ್ ಇತ್ಯಾದಿಗಳ ಹೆಚ್ಚಳ.

### ಜನಸಂಖ್ಯಾ ನಿಯಂತ್ರಣಕ್ಕೆ ಸೂತ್ರಗಳು

1. ಸೂಕ್ತ ವಯಸ್ಸಿಗೆ ಮದುವೆ ಆಗುವುದು. ಕನಿಷ್ಠ ಗಂಡಿಗೆ 21 ವರ್ಷ, ಹೆಣ್ಣಿಗೆ 18 ವರ್ಷ ತುಂಬಿರಬೇಕು; 2. ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಕಾರ್ಯಕ್ರಮದ ಬಗ್ಗೆ ಸರಿಯಾದ ಮಾಹಿತಿಯ ತಿಳುವಳಿಕೆ ; 3. ಪುರುಷರು ಹೆಚ್ಚಿನ ಸಂಖ್ಯೆಯಲ್ಲಿ ಸಂತಾನ ನಿಯಂತ್ರಣ ಶಸ್ತ್ರ ಚಿಕಿತ್ಸೆ ಮಾಡಿಸಿಕೊಳ್ಳುವುದು ; 4. ಜನನಗಳ ನಡುವೆ ಅಂತರವಿರ ಬೇಕು. ಮದುವೆಯಾದ ನಂತರ ಕನಿಷ್ಠ ಮೂರು ವರ್ಷ ಮೊದಲನೆಯ ಮಗುವನ್ನು ಪಡೆಯಬಾರದು ; 5. ಎಲ್ಲಾ ಅರ್ಹ ದಂಪತಿಗಳು ಕುಟುಂಬ ಕಲ್ಯಾಣದ ವಿಧಾನಗಳನ್ನು ಅನುಸರಿಸಿ ಚಿಕ್ಕ ಕುಟುಂಬವನ್ನು ರೂಪಿಸಿ ಕೊಳ್ಳುವುದು ; 6. ಹೆಣ್ಣುಮಕ್ಕಳ ಶಿಕ್ಷಣಕ್ಕೆ ಹೆಚ್ಚು ಉತ್ತೇಜನ ನೀಡುವುದು.

(ಹೆಚ್ಚಿನ ವಿವರಗಳಿಗೆ ಹತ್ತಿರದ ಆರೋಗ್ಯ ಕೇಂದ್ರವನ್ನು ಸಂಪರ್ಕಿಸಿ)

**ಬಡತನ ನಿವಾರಿಸಿ, ಸಮಾನತೆ ಸಾಧಿಸಿ ಹಾಗೂ ಗರ್ಭಿಣಿ - ತಾಯಂದಿರ ಮರಣ ತಪ್ಪಿಸಿ**

ಪ್ರಕಟಣೆ : ಮಾಹಿತಿ ಶಿಕ್ಷಣ ಮತ್ತು ಸಂಪರ್ಕ ವಿಭಾಗ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು - 560 009

# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ ...




ಚಿತ್ರಗಳು : ಆಚಾರ್ಯ, ಶ್ರೀಹರಿ, ರಾಂಚಂದ್ರ ಕೊಪ್ಪಲು, ಬಿ. ವಿಲ್ಸನ್,
ಕಮಲಂ ಅರಸು

ಮುಖಚಿತ್ರ : ರಂಗಕರ್ಮಿ ಹಬೀಬ್ ತನ್ವೀರ್

ವಿನ್ಯಾಸ : ನವಕರ್ನಾಟಕ ವಿನ್ಯಾಸ

ಕಚೇರಿ ಸಹಕಾರ : ಜಿ. ವಿ. ತೇಜೋವತಿ


## ಈ ತಿಂಗಳು

''ಸಂಸ್ಕೃತ ಮತ್ತು ವೇದ ವಿಶ್ವವಿದ್ಯಾಲಯ''ವೊಂದನ್ನು ಸ್ಥಾಪಿಸಲು ಕರ್ನಾಟಕ ಸರ್ಕಾರವು ತೀರ್ಮಾನಿಸಿದೆ. ಹಾಗೆ ತೀರ್ಮಾನಿಸುವ ಮುನ್ನ ಸರ್ಕಾರದ ಸರ್ವಜ್ಞ ಮಂಡಲಿಯು ಯಾವ ಮೇಧಾವಿಗಳ ಸಲಹೆ ಪಡೆಯಿತೆಂಬುದನ್ನು ಬಹಿರಂಗಪಡಿಸಿಲ್ಲ. ವಿಶ್ವವಿದ್ಯಾನಿಲಯ ಧನಸಹಾಯ ಆಯೋಗದ ಅನುಮತಿಯಂತೂ ದೊರೆತಿಲ್ಲವೆಂಬುದು ಖಚಿತ; ಏಕೆಂದರೆ ಸರ್ಕಾರವು ಯು.ಜಿ.ಸಿ.ಯನ್ನು ಈ ಬಗ್ಗೆ ಸಂಪರ್ಕಿಸಿಯೂ ಇಲ್ಲ. ವಿದ್ಯೆಯ ಬಗೆಗಿನ ಪಕ್ಷಪಾತಕ್ಕಿಂತಲೂ ಭಾರತೀಯ ಜನತಾ ಪಕ್ಷದ ''ಸಂಸ್ಕೃತಿ ಕಾಳಜಿ'' ಹೆಚ್ಚು ನಿರ್ಣಾಯಕ ಪಾತ್ರ ವಹಿಸಿರುವುದು ಮೇಲ್ನೋಟಕ್ಕೆ ಸಹ ಗೊತ್ತಾಗುತ್ತದೆ. ಜ್ಯೋತಿಷ್ಯವನ್ನೂ ಒಂದು ಪದವಿಗಾಗಿ ಅಧ್ಯಯನ ಮಾಡಲು ಅವಕಾಶ ಕಲ್ಪಿಸಿರುವ ಸಂಸ್ಕೃತ ಕಾಲೇಜುಗಳೆಲ್ಲಾ ಈ ನೂತನ ವಿಶ್ವವಿದ್ಯಾನಿಲಯದ ಪರಿಧಿಗೆ ಸೇರುತ್ತವಂತೆ. ಸ್ಥಾನಿಕವಾದ ಮೌಢ್ಯವನ್ನು ವಿಶ್ವವ್ಯಾಪಿಯನ್ನಾಗಿಸಲು ಸರ್ಕಾರಕ್ಕೆ ಅನುಮತಿ ಇತ್ತವರಾರು? ಜ್ಯೋತಿಷ್ಯದಂತಹ ಆಧಾರರಹಿತ ಶಿಸ್ತನ್ನು ವಿಶ್ವವಿದ್ಯಾನಿಲಯದೊಳಕ್ಕೆ ತೂರಿಸುವ ಯೋಜನೆಯು ಸ್ವಾಗತಾರ್ಹವಲ್ಲ. ರಾಜ್ಯದಲ್ಲಿ ಇರುವ ಎಲ್ಲ ವಿಶ್ವವಿದ್ಯಾನಿಲಯಗಳಲ್ಲೂ ಸಂಸ್ಕೃತ ವಿಭಾಗಗಳಿವೆ. ವಿದ್ಯಾರ್ಥಿಗಳ ಸಂಸ್ಕೃತ ಪ್ರೀತಿ ಎಷ್ಟಿದೆಯೆಂದರೆ ಅಲ್ಲೆಲ್ಲಾ ಒಬ್ಬೊಬ್ಬ ವಿದ್ಯಾರ್ಥಿಗೆ ಸರಾಸರಿ ಮೂರರಂತೆ ಗುರುಗಳಿದ್ದಾರೆ. ಈ ವಿಭಾಗಗಳಲ್ಲಿ ಸಂಶೋಧನೆಯ ಆಳ-ಅಗಲುಗಳು ಲೋಕವಿಖ್ಯಾತವಾಗಿವೆ. ಆಳ ಅರ್ಧ ಅಡಿ, ಅಗಲ ಮುಕ್ಕಾಲಡಿ ಎಂಬ ಪ್ರತೀತಿ ಇದೆ. ವೈಚಾರಿಕತೆಯ ಸೋಂಕು ಎಳ್ಳಷ್ಟೂ ಇಲ್ಲದೆ ಸಂಶೋಧನೆ ನಡೆಸುತ್ತವೆನ್ನಲಾದ ವಿಶ್ವವಿದ್ಯಾನಿಲಯದ ವಿಭಾಗಗಳು ಸೊರಗುತ್ತಿರುವಾಗ ಸಂಸ್ಕೃತಕ್ಕೆಂದೇ ಒಂದು ವಿಶ್ವವಿದ್ಯಾನಿಲಯ ಸ್ಥಾಪಿಸುವುದು ಧೀರಲಕ್ಷಣವೇ ಇರಬೇಕು. ಆಡಳಿತಾಧಿಕಾರಿಯಾಗಿ ಡಾ|| ಮಲ್ಲೇಪುರಂ ಜಿ. ವೆಂಕಟೇಶ್ ಅವರು ಮುಂಬರುವ ವಿಶ್ವವಿದ್ಯಾನಿಲಯದ ರೂಪುರೇಷೆಗಳನ್ನು ಸದ್ಯದಲ್ಲೇ ರಾಜ್ಯದ ಜನತೆಯ ಮುಂದಿಡಲಿದ್ದಾರೆಂದು ಹೇಳಲಾಗಿದೆ. ಮಾನ್ಯ ಡಾ|| ಮಲ್ಲೇಪುರಂ ಅವರಿಗೆ ಈ ವಿಶ್ವವಿದ್ಯಾನಿಲಯದ ಅಗತ್ಯದ ಬಗ್ಗೆ ಏನು ಅಭಿಪ್ರಾಯವಿರಬಹುದೆಂದು ಕ್ರಮೇಣ ತಿಳಿದುಬರುತ್ತದೆಂಬ ವಿಶ್ವಾಸವಿದೆ. ಸಾರ್ವಜನಿಕರ ಪ್ರತಿನಿಧಿಗಳೋ ಎಂಬಂತೆ ಕೆಲವು 'ಶ್ರೇಷ್ಠ' ವಿದ್ವಾಂಸರನ್ನು ಬೆಂಗಳೂರಿನ ಪೇಜಾವರ ಮಠವಾದ ವಿದ್ಯಾಪೀಠದಲ್ಲಿ ಸೇರಿಸಲಾಗಿತ್ತೆಂದು ವರದಿಯಾಗಿತ್ತು. ಇವರೆಲ್ಲಾ ಯಾವ ''ಸರ್ವರ'' ಭಾವನೆಗಳನ್ನು ಪ್ರತಿಫಲಿಸಿದರೋ ತಿಳಿಯದು. ಪ್ರಸ್ತುತ ಲೇಖಕನಿಗೆ ಅಲ್ಲೆಲ್ಲಾ ಪ್ರವೇಶ ದೊರೆಯಲು ಅಗತ್ಯವಾದ ಹಿನ್ನೆಲೆ ಮತ್ತು ಪಾಂಡಿತ್ಯವಿಲ್ಲದಿರುವುದು ವಿಷಾದನೀಯ. ಅಲ್ಲಿ ಹಿನ್ನೆಲೆ ಪ್ರಮುಖ ಮತ್ತು ಪಾಂಡಿತ್ಯ ಗೌಣವೆಂಬ ಮಾತು ಕೇಳಿಬಂತು. ಅದು ಯಥಾರ್ಥವೋ ಕುಚೋದ್ಯವೋ ಬಲ್ಲವರಾರು! ನಮ್ಮ ಹಿನ್ನೆಲೆಯು ಮಠದ ಮುನ್ನೆಲೆಯಲ್ಲಿ ಶೋಭಿಸುವುದಿಲ್ಲವೆಂಬುದಂತೂ ನಿಜ. ವಿಶ್ವೇಶ್ವರತೀರ್ಥರು ಪಡೆದಿರುವ ವ್ಯಕ್ತಿತ್ವವನ್ನು ಸಾವಿರಾರು ಮಂದಿಗೆ ತುಂಬಿಕೊಡುವುದು ಉದ್ದೇಶವಾದರೆ ಖಂಡಿತ ಸಂಸ್ಕೃತ ವಿಶ್ವವಿದ್ಯಾನಿಲಯವು ಬೇಡವೆನಿಸುತ್ತದೆ.

ವಿಶ್ವವಿದ್ಯಾನಿಲಯದ ಸ್ಥಾಪನೆ ಬೇಕೋ, ಬೇಡವೋ ಎಂದು ವಿಪುಲವಾದ ಚರ್ಚೆ ನಡೆಯುತ್ತಿದೆ. ಅದರಲ್ಲಿ ಬೆಳಕಿಗಿಂತಲೂ ಬೆಂಕಿ ಜಾಸ್ತಿ ಇರುವಂತೆ ಕಂಡುಬಂತು. ಅತುಲೋತ್ಸಾಹದಿಂದ ಮಹನೀಯರೊಬ್ಬರು ಅಪ್ಪಣೆ ಕೊಡಿಸಿದ್ದಾರೆ: ''ಸಂಸ್ಕೃತವಿಲ್ಲದೆ ವೇದವಿಲ್ಲ ಮತ್ತು ವೇದವಿಲ್ಲದೆ ಸಂಸ್ಕೃತವಿಲ್ಲ'' ಎಂದು. ಇದರ ಗಹನಾರ್ಥ ಮತ್ತು ಗೂಢಾರ್ಥ ಪಾಮರರಿಗೆ ತಿಳಿಯುವುದಿಲ್ಲವೇನೋ! ವೇದವು ಜಗತ್ತಿನ ಪ್ರಾಚೀನ ಸಾಹಿತ್ಯದ ಕ್ಷೇತ್ರದಲ್ಲಿ ಅಳಿಯದೆ ಉಳಿದಿರುವ ಪ್ರಥಮ ಸಾಹಿತ್ಯರಾಶಿ. ಅದರ ಭಾಷೆಯು ವಾಲ್ಮೀಕಿ-ಕಾಲಿದಾಸರ ಸಂಸ್ಕೃತಕ್ಕಿಂತಲೂ ಬಹಳ ಮುಂಚಿನದು, ಭಿನ್ನವಾದುದು. ಅದನ್ನು ''ಪ್ರಾಚೀನ ಇಂಡೋ-ಆರ್ಯನ್ ಭಾಷೆ'' ಎಂದು ಕರೆಯುವುದು ವಾಡಿಕೆ. ವೈದಿಕ ಸಾಹಿತ್ಯದ ಭಾಷೆಯು ಪ್ರಾಚೀನ ಪರ್ಷಿಯಾದ ''ಅವೆಸ್ತಾ'' ಗ್ರಂಥದ ಭಾಷೆಗೆ ಸಾಕಷ್ಟು ಹತ್ತಿರದ್ದು.

ಏನೇ ಇರಲಿ, ವೇದದ ಭಾಷೆಯನ್ನು ಪ್ರಾಚೀನ ಸಂಸ್ಕೃತವೆನ್ನಲು ಅಡ್ಡಿಯಿಲ್ಲ. ಪಾಣಿನಿಯು ತನ್ನ ''ಅಷ್ಟಾಧ್ಯಾಯೀ'' ಎಂಬ ವ್ಯಾಕರಣಶಾಸ್ತ್ರದ ಉದ್ಗ್ರಂಥದಲ್ಲಿ ವೈದಿಕ ಸಂಸ್ಕೃತದ ವ್ಯಾಕರಣವನ್ನೂ ನಿರೂಪಿಸಿದ್ದಾನೆ. – ಆದ್ದರಿಂದ, ''ಸಂಸ್ಕೃತವಿಲ್ಲದೆ ವೇದವಿಲ್ಲ''ವೆಂಬ ಮಾತು ಅಂಗೀಕಾರಯೋಗ್ಯವಾಗಿದೆ. ಆದರೆ ''ವೇದವಿಲ್ಲದೆ ಸಂಸ್ಕೃತವಿಲ್ಲ''ವೆಂಬ ಮಾತು ಬಹಳ ಪೊಳ್ಳಾದ್ದು. ಏಕೆಂದರೆ ''ಬೆಟ್ಟ-ನದಿ-ಸಮುದ್ರ ಇರುವಷ್ಟು ಕಾಲವೂ ಚಿರಸ್ಥಾಯಿಯಾಗಿ ಉಳಿಯುತ್ತದೆ'' ಎಂದು ಶ್ಲಾಘಿಸಲಾದ ರಾಮಾಯಣ, ''ಇಲ್ಲಿರುವುದೆಲ್ಲಾ ಬೇರೆಡೆಯೂ ಇರಬಹುದು, ಆದರೆ ಇಲ್ಲಿ ಇಲ್ಲದ್ದು ಬೇರೆಲ್ಲಿಯೂ ಇರಲು ಶಕ್ಯವಿಲ್ಲ''ವೆಂಬ ಗೌರವಕ್ಕೆ ಪಾತ್ರವಾಗಿರುವ ಮಹಾಭಾರತ, ''ಇವನಿಗೆ ಸರಿಸಾಟಿಯೆನಿಸಿಕೊಳ್ಳಲು


(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೦ ಸಂಚಿಕೆ - ೧೨ ಜುಲೈ ೨೦೦೯





**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
e-mail : navakarnataka@dataone.in
hosathu@gmail.com
website : www.navakarnataka.com
http://navakarnataka.blogspot.com
http://hosathu.blogspot.com


# ಮತ್ತೊಮ್ಮೆ ಚುನಾವಣೆಯತ್ತ ಒಂದು ದೃಷ್ಟಿ

**ಸಂಪಾದಕೀಯ**

**ಹೊ**ಸ ಲೋಕಸಭೆಯು ಅಸ್ತಿತ್ವಕ್ಕೆ ಬಂದು ಕಾರ್ಯಪ್ರವೃತ್ತವಾಗುತ್ತಿದೆ. ಇನ್ನೊಂದು ಸ್ಥಾನವೂ ಖಾಲಿಯಿಲ್ಲವೆಂಬಂತೆ ಮಂತ್ರಿಗಳ ದಂಡು ರಚನೆಯಾಗಿದೆ. ಬೇರೆಬೇರೆ ಖಾತೆಗಳ ಸಚಿವರು ತಮ್ಮ ತಮ್ಮ ಕಾರ್ಯಸೂಚಿಯನ್ನು ಆಡಂಬರದಿಂದ ಪ್ರಚಾರ ಮಾಡಿದ್ದಾರೆ. ಪ್ರಧಾನಿಯವರು ಅರ್ಥಸಚಿವರಿಗೆ ತಿಳುವಳಿಕೆ ನೀಡಿ ದೇಶದ ಜನಸಾಮಾನ್ಯರ ಹಿತವನ್ನು ಮರೆಯದಿರುವಂತೆ ಈ ವರ್ಷದ ಆಯವ್ಯಯ ಪಟ್ಟಿ ಸಿದ್ಧಗೊಳಿಸಲು ಸೂಚಿಸಿದ್ದಾರೆ. ಅಭಿವೃದ್ಧಿಯ ಹಾದಿಯಲ್ಲಿ ಕಲ್ಲು-ಮುಳ್ಳು ಬಾರದಿರುವಂತೆ ಕಟ್ಟೆಚ್ಚರ ವಹಿಸುವುದಾಗಿ ಹೇಳುವುದರ ಜೊತೆಗೆ, ಇನ್ನೊಂದು ಹೆಜ್ಜೆ ಮುಂದೆ ಹೋಗಿ ಪ್ರಧಾನಿಯವರು ಪಾಶ್ಚಿಮಾತ್ಯ ದೇಶಗಳಲ್ಲಿ ಉದ್ಭವಿಸಿರುವ ಆರ್ಥಿಕ ಹಿಂಜರಿತದ ಪೆಟ್ಟನ್ನು ಸುಧಾರಿಸಲು ಭಾರತವು ತನ್ನ ಹೆಗಲನ್ನು ಕೊಡಲು ಸಿದ್ಧವಿದೆಯೆಂದು ಘೋಷಿಸಿದ್ದಾರೆ. ಬಂಡವಾಳಶಾಹಿಯ ಸ್ಮಶಾನಯಾತ್ರೆಯ ಸಂದರ್ಭದಲ್ಲಾಗಿದ್ದರೆ ಹೆಗಲು ಕೊಡುವುದು ಔಚಿತ್ಯಪೂರ್ಣವಾಗಿರುತ್ತಿತ್ತು. ಆದರೆ ಈಗ ಆಗುತ್ತಿರುವುದು ಅದಲ್ಲ. ಅಭಿವೃದ್ಧಿಶೀಲ ರಾಷ್ಟ್ರಗಳ ಸಂಪತ್ತನ್ನು ದೋಚಿ, ಸುಖಾನುಭವದಿಂದ ಮತ್ತರಾಗಿ, ಹಾಸಿಗೆಯನ್ನು ಮೀರಿ ಕಾಲುಚಾಚಲು ಹೇಸದಿದ್ದ ಪಾಶ್ಚಿಮಾತ್ಯ ದೇಶಗಳ ಒಡೆಯರು ಬ್ಯಾಂಕುಗಳು ದಿವಾಳಿಯಾದುದನ್ನು ಕಾಣುತ್ತಿದ್ದಾರೆ, ಜನರಲ್ ಮೋಟಾರ್ಸ್‌ನಂತಹ ಕಂಪನಿಗಳು ಮುಳುಗಿಹೋದುದನ್ನು ಕಂಡು ಜಂಘಾಬಲ ಉಡುಗಿಸಿಕೊಂಡು ತತ್ತರಿಸಿಹೋಗುತ್ತಿದ್ದಾರೆ. ಬೇರೆ ಸಂದರ್ಭಗಳಲ್ಲಿ 'ಮಾಡಿದ್ದುಣ್ಣೋ ಮಹರಾಯ' ಎಂಬ ತತ್ತ್ವವನ್ನು ಬೋಧಿಸುವ ನಮ್ಮ ದೇಶದ ಮುತ್ಸದ್ದಿಗಳು ಈಗ ಒಬಾಮಾ ಕಂಪನಿಗಳಿಗೆ ಹೆಗಲು ಕೊಡಲು ಹೆಣಗುತ್ತಿದ್ದಾರೆ. ಇದು ಸಾಮಾನ್ಯ ವಿಷಯವಲ್ಲ. ಆದ್ದರಿಂದ ಇದರ ಹಿನ್ನೆಲೆ ಮತ್ತು ಆಗುಹೋಗುಗಳನ್ನು ಖಚಿತವಾಗಿ ತಿಳಿಯಬೇಕು.

ಚುನಾವಣೆಯ ಫಲಿತಾಂಶ ಹೊರಬಂದ ತರುವಾಯದಲ್ಲಿ ಎರಡು ಗಮನಾರ್ಹ ಹೇಳಿಕೆಗಳು ಬಂದವು. ಒಂದು, ಅದ್ವಾನಿಯವರದು; ಇನ್ನೊಂದು, ದೇಶದ ವಾಣಿಜ್ಯ ಮತ್ತು ಔದ್ಯಮಿಕ ಸಂಸ್ಥೆಗಳ ಒಕ್ಕೂಟದ ಅಧ್ಯಕ್ಷರದು. (ಈ ಒಕ್ಕೂಟವನ್ನು 'ಫಿಕ್ಕಿ' ಎಂದು ಕರೆಯುವುದು ವಾಡಿಕೆ). ತಮ್ಮ ಪಕ್ಷ ಸೋತಿದ್ದರೂ ಸರಿಯೇ, ಚುನಾವಣಾ ಫಲಿತಾಂಶವು ದೇಶವನ್ನು ಎರಡೇ ಪಕ್ಷಗಳ ರಾಜಕೀಯದತ್ತ ಕೊಂಡೊಯ್ಯುವುದರ ಸೂಚನೆಯಾಗಿದೆ ಎಂದರು ಅದ್ವಾನಿ. ಅಂದರೆ, ನಾನೊಮ್ಮೆ ನುಂಗುತ್ತೇನೆ – ನೀನೊಮ್ಮೆ ನುಂಗು, ಎಂಬ ತತ್ತ್ವವು ಕೈ-ಕಮಲಗಳೆರಡಕ್ಕೆ ಮಾತ್ರವೇ ಅನ್ವಯವಾಗುತ್ತದೆಂಬ ಸಂತಸದ ಕುರುಹು. ಫಿಕ್ಕಿ ಅಧ್ಯಕ್ಷರು ಹೇಳಿದರು: ಸರ್ಕಾರವು ಸಮಾಜ ಕಲ್ಯಾಣ ಇತ್ಯಾದಿ ಮಾತನಾಡುವುದು ಅಬದ್ಧ; ಸರ್ಕಾರದ ಒಂದೇ ಕೆಲಸವೆಂದರೆ ಮೂಲಭೂತ ಸೌಕರ್ಯಗಳ ವಿಸ್ತರಣೆಗೆ ಶ್ರಮಿಸುವುದು, ಎಂದು. ಇದರರ್ಥ ಇಷ್ಟೆ: ಸೌಕರ್ಯಗಳ ರಚನೆ (ರಸ್ತೆ, ಸಾರಿಗೆ, ಕಚ್ಚಾ ಪದಾರ್ಥ, ವಿದ್ಯುತ್ತು, ಇತ್ಯಾದಿ) ಸರ್ಕಾರ ಮಾಡಲಿ, ಲಾಭದಾಯಕ ಉತ್ಪಾದನೆಯನ್ನು ಖಾಸಗಿಯವರಿಗೆ ಬಿಟ್ಟುಬಿಡಿ. ಇದನ್ನೇ ಒಂದು ಇಂಗ್ಲಿಷ್ ದೈನಿಕವು ದಪ್ಪಕ್ಷರಗಳ ತಲೆಬರಹದಲ್ಲಿ ಸೂಚಿಸಿತ್ತು: ದೇಶದ ಚಿಲ್ಲರೆ ವ್ಯಾಪಾರದ ಕ್ಷೇತ್ರದಲ್ಲಿ ಹೂಡಿಕೆಯಾಗಲಿದ್ದ ಒಂದು ಬಿಲಿಯನ್ ಡಾಲರುಗಳ ವಿದೇಶಿ ಬಂಡವಾಳ ಕೈತಪ್ಪಿಹೋಯಿತು ಎಂದು. ಅಯ್ಯೋ ಪಾಪ, ಎಂತಹ ಘೋರ ಅನ್ಯಾಯ! ಲಕ್ಷಗಟ್ಟಲೆ ಸಣ್ಣ ವ್ಯಾಪಾರಿಗಳು ದಿವಾಳಿಯಾಗಿ ರಸ್ತೆಯ ಮೇಲೆ ಬಿದ್ದುಹೋಗುವಂತಹ ಅಪೂರ್ವ ಅವಕಾಶ ಕಳೆದುಹೋಯಿತಲ್ಲಾ!! ಇದು ನಮ್ಮ ದೊಡ್ಡ ಬಂಡವಳಿಗರ ಪರಿತಾಪ, ದೇಶದ ಬಗೆಗಿನ ಅಚಲವಾದ ಭಕ್ತಿ ಮತ್ತು ಜನರ ಬಗೆಗಿನ ಪ್ರೀತಿ-ವಿಶ್ವಾಸ. ದುರಂತವೆಂದರೆ ಅದ್ವಾನಿ ಮತ್ತು ಫಿಕ್ಕಿ ಅಧ್ಯಕ್ಷರ ಆಶಯಗಳನ್ನು ಕಾರ್ಯಗತಗೊಳಿಸುವುದೇ ತಮ್ಮ ಕರ್ತವ್ಯವೆಂದು ಬಗೆದಿರುವ ಪ್ರಧಾನಿ ಮನಮೋಹನ ಸಿಂಗ್ ಅನುಸರಿಸುವ ಆರ್ಥಿಕ ನೀತಿ.

ನಮ್ಮ ದೇಶದ ಆಳುವ ವರ್ಗವು ಯಾವುದೋ ಒಂದು ಪಕ್ಷದಲ್ಲಿಲ್ಲ; ಹಲವು ಪಕ್ಷಗಳಲ್ಲಿ ಅದರ ಪ್ರತಿನಿಧಿಗಳಿದ್ದಾರೆ. ಅವರೆಲ್ಲಾ ಬೇರೆ ಬೇರೆ ಪಕ್ಷಗಳಲ್ಲಿದ್ದರೂ ಅವರ ಗುರಿ ಒಂದೇ; ಅದನ್ನು ಸಾಧಿಸಲು ಬೇಕಾದ ಆರ್ಥಿಕ ನೀತಿಯನ್ನು ಆ ಎಲ್ಲ ಪಕ್ಷಗಳವರೂ ಬೆಂಬಲಿಸುತ್ತಾರೆ. ಅವರಲ್ಲಿ ಪರಸ್ಪರ ಭಿನ್ನತೆಯ ಸೂಕ್ಷ್ಮಾಂಶಗಳು ಹಲವಿದ್ದರೂ ಏಕತೆಯ ಸ್ಥೂಲಾಂಶ ಒಂದೇ. ಅದೆಂದರೆ ದೇಶದ ಸಂಪತ್ತನ್ನು ತನ್ನದಾಗಿಸಿಕೊಳ್ಳುವುದು ಮತ್ತು ಜನಸಾಮಾನ್ಯರನ್ನು ಕಿತ್ತುತಿನ್ನಲು ಹೇಸದಿರುವುದು. ೪೫ ಕೋಟಿ ರೂಪಾಯಿಗಳ ವಜ್ರ ಕಿರೀಟವನ್ನು ತಿರಿದು ತಿನ್ನುವ ತಿಮ್ಮಪ್ಪನಿಗೆ ಅರ್ಪಿಸಿ ಅದರ ಹತ್ತರಷ್ಟನ್ನು, ನೂರರಷ್ಟನ್ನು, ದೇಶದ ಸಂಪನ್ಮೂಲಗಳ ರೂಪದಲ್ಲಿ ದೋಚುವುದು ಈ ಆಳುವ ವರ್ಗದ ಘನತೆ ಮತ್ತು ನೈತಿಕತೆ. ಆ ಲಕ್ಷಣಗಳು ಸಿಂಗ್, ಅದ್ವಾನಿ, ಇಬ್ಬರಿಗೂ ಶ್ರೇಯಸ್ಕರವೆಂದು ಗೋಚರಿಸುತ್ತವೆ. ತಮ್ಮ ತಮ್ಮ ಸರ್ಕಾರಗಳ ಮೂಲಕ ಅವರಿಬ್ಬರೂ ಕಾರ್ಯಗತಗೊಳಿಸುವುದು ಒಂದೇ ತೆರನಾದ ಆರ್ಥಿಕ ನೀತಿಗಳನ್ನು. ಎಡಪಕ್ಷಗಳ ಬೆಂಬಲ ಅನಗತ್ಯವಾಗಿರುವುದನ್ನು ಇಬ್ಬರೂ ಏಕಕಂಠದಿಂದ ಸ್ವಾಗತಿಸುವುದು ಇದೇ ಕಾರಣಕ್ಕೆ. ದೇಶದ ದುಡಿಯುವ ಜನರ ನಿವೃತ್ತಿಯ ಸಂದರ್ಭದ ಹಣದ ಗಂಟು, ವಿಮಾ ಕ್ಷೇತ್ರದಲ್ಲಿ ಹಾಗೂ ಭವಿಷ್ಯ ನಿಧಿ ಸಂಸ್ಥೆಯಲ್ಲಿ ಇದೇ ದುಡಿಯುವ ಜನ ಶೇಖರಿಸಿಟ್ಟಿರುವ ಉಳಿತಾಯದ ಹಣ, ಎಲ್ಲವನ್ನೂ ಖಾಸಗಿಯವರಿಗೆ ಹಸ್ತಾಂತರಿಸಬೇಕೆಂದು ಇಬ್ಬರ ಪಕ್ಷಗಳೂ ಆಗ್ರಹಿಸುತ್ತವೆ. ಅದನ್ನು ಖಾಸಗಿಯವರು ಸಟ್ಟಾ ವ್ಯಾಪಾರದಲ್ಲಿ ತೊಡಗಿಸಿ ಇಡಗಂಟು ಮಾಡಿಕೊಳ್ಳುತ್ತಾರೆ ಇಲ್ಲವೆ ದುಡಿಯುವ ಜನಕ್ಕೆ ಪಂಗನಾಮ ಹಾಕುತ್ತಾರೆ. ಬಂಡವಾಳಶಾಹಿಯ ಇಂತಹ ಜನದ್ರೋಹ ಆರ್ಥಿಕ ನೀತಿಯನ್ನು ಎರಡು ಪಕ್ಷಗಳೂ ಬೆಂಬಲಿಸುತ್ತವೆ, ಕಾರ್ಯಗತಗೊಳಿಸುತ್ತವೆ. ಆದ್ದರಿಂದ ಇಂಥವರನ್ನೆಲ್ಲಾ ಒಟ್ಟುಗೂಡಿಸಿ, ನಮ್ಮಲ್ಲಿ ಒಂದೇ ಆಳುವ ವರ್ಗವಿದೆಯೆಂಬುದನ್ನು ಗ್ರಹಿಸಬಹುದು, ಸಮರ್ಥಿಸಬಹುದು.

ಈಚಿನ ಚುನಾವಣೆಯ ನಂತರ ಅಧಿಕಾರಕ್ಕೆ ಬಂದ ಸರ್ಕಾರದ ಮಂತ್ರಿಗಳು ಮೊದಲ ನೂರು ದಿನಗಳಲ್ಲಿ ಆದ್ಯತೆಯ ಪ್ರಕಾರ ಅಳವಡಿಸಲಿಚ್ಛಿಸುವ ನೀತಿಗಳನ್ನು ಬಹಿರಂಗಗೊಳಿಸಿದ್ದಾರೆ. ಎಲ್ಲರೂ ಬಹುರಾಷ್ಟ್ರೀಯ ಕಂಪನಿಗಳ ಪರ, ಕಾರ್ಪೊರೇಟ್ ಸಂಸ್ಥೆಗಳ ಪರ, ಇರುವಂತಹ ನೀತಿಗಳನ್ನೇ ಉಚ್ಚರಿಸಿದ್ದಾರೆ. ಉದಾಹರಣೆಗೆ, ದೂರಸಂಪರ್ಕ ಮಂತ್ರಿ (ಆತನನ್ನು ಖಂಡಿತ ಕಂತ್ರಿ ಮಂತ್ರಿ ಎನ್ನಲಡ್ಡಿಯಿಲ್ಲ) ರಾಜ ಮೊದಲಿಗೆ ಬ್ಯಾಂಡ್ ಹರಾಜಿಗೆ ಒತ್ತುಕೊಟ್ಟಿದ್ದಾರೆ. ಇದು ಮೂರು ಬ್ಯಾಂಡಿನದಂತೆ. ಎರಡು ಬ್ಯಾಂಡಿನದು ಹರಾಜಾದಾಗ ಈ ವ್ಯಕ್ತಿ ಸುಮಾರು ಒಂದು ಲಕ್ಷ ಕೋಟಿಯಷ್ಟು ಹಣವನ್ನು ಸರ್ಕಾರಕ್ಕೆ ನಷ್ಟ ಮಾಡಿದ. ಅದರಲ್ಲಿ ಸಾಕಷ್ಟು ಆತನ ಮತ್ತು ಕರುಣಾನಿಧಿಯ ಜೇಬಿಗೆ ಹೋಗಿರುವುದು ಸುಳ್ಳಲ್ಲವೆನ್ನುತ್ತಾರೆ. ಮಾನವ ಸಂಪನ್ಮೂಲ ಮಂತ್ರಿ ಕಪಿಲ್ ಸಿಬಲ್‌ಗೆ ಆದ್ಯತೆ ಇರುವುದು ವಿದೇಶಿ ವಿಶ್ವವಿದ್ಯಾನಿಲಯಗಳನ್ನು ಭಾರತಕ್ಕೆ ಬರಮಾಡಿಕೊಳ್ಳುವುದರಲ್ಲಿ; ಇರುವುವನ್ನು ಪೋಷಿಸಿ ಉತ್ತಮಗೊಳಿಸುವುದರಲ್ಲಿ ಅಲ್ಲ. ಜೊತೆಗೆ, ಸರ್ಕಾರಿ-ಖಾಸಗಿ ಸಹಭಾಗಿತ್ವದಲ್ಲಿ ಶಿಕ್ಷಣ ಸಂಸ್ಥೆಗಳನ್ನು

ಆರಂಭಿಸುತ್ತಾರಂತೆ. ನ್ಯೂಯಾರ್ಕಿನಲ್ಲಿ ವಕೀಲನಾಗಿದ್ದು ಭಾರತಕ್ಕೆ ಹಿಂದಿರುಗಿದ ಈತನಿಗೆ ಇಂತಹ ನೀತಿಯು ಸಹಜವೆಂದು ತೋರುತ್ತದೆ. ಆದರೆ ಅದು ಸಾರ್ವಜನಿಕ ಹಣವನ್ನು ಖಾಸಗಿ ಆಡಳಿತಗಾರರಿಗೆ ಧಾರೆಯೆರೆಯುವ ಕುತಂತ್ರದ ಕ್ರಮ. ಇನ್ನು ಎಸ್. ಎಂ. ಕೃಷ್ಣ ಮತ್ತು ಶಶಿ ತರೂರರ ವಿದೇಶಾಂಗ (ಅ)ವ್ಯವಹಾರಗಳ ಮಾತೇ ಬೇಡ. ಏಕೆಂದರೆ, ಇಬ್ಬರೂ ಅಮೆರಿಕಾದ ಪರ ವಕಾಲತ್ತು ಹಾಕುವವರು ಮತ್ತು ಅಮೆರಿಕಾದ ನೆಚ್ಚಿನ ಆಪ್ತರು. ಅಲ್ಲದೆ, ಬರ್ನ್ಸ್ ಎಂಬ ಅಮೆರಿಕಾದ ಉಪಮುಖ್ಯಮಂತ್ರಿ ಇತ್ತೀಚೆಗೆ ಬಂದಿದ್ದಾಗ ''ಅಮೆರಿಕಾದ ವಿದೇಶಾಂಗ ನೀತಿಯಲ್ಲಿ ಭಾರತಕ್ಕೆ ವಿಶಿಷ್ಟ ಸ್ಥಾನವಿದೆ'' ಎಂದಿದ್ದ (ಅಂದರೆ, ನಾಳೆ ಭಾರತವು ಅಫ್ಘಾನಿಸ್ತಾನದ ಗೋಜಲು ರಾಜಕೀಯದಲ್ಲಿ ಭಾಗಿಯಾಗಬೇಕು, ಎಂದರ್ಥ).

ಗಮನಾರ್ಹವಾದ ಸಂಗತಿಯೆಂದರೆ ಭಾರತೀಯ ಜನತಾ ಪಕ್ಷವು ಈ ಯಾವ ಕ್ರಮಗಳನ್ನೂ ಟೀಕಿಸಿಲ್ಲ, ವಿರೋಧಿಸುವುದಿಲ್ಲ. ಒಂದೇ ಆಳುವ ವರ್ಗದ ಎರಡು ಗೊನೆಗಳಾಗಿರುವುದರಿಂದ ಆ ಎರಡು ಪಕ್ಷಗಳ ನಡುವೆ ಹೇಳಿಕೊಳ್ಳಬಹುದಾದ ಭಿನ್ನಾಭಿಪ್ರಾಯ ಬರುವುದಿಲ್ಲ. ಅವೆರಡೂ ಒಂದಾಗಿ, ಉಳಿದ ಪಕ್ಷಗಳೆಲ್ಲಾ ಒಟ್ಟಾದರೆ ಬಹುಶಃ ಕಾಂಗ್ರೆಸ್-ಭಾಜಪ ಸಮರ್ಥಿಸುವ ವರ್ಗದ ಹಿಡಿತವನ್ನು ನಿಯಂತ್ರಿಸಲು ಸಾಧ್ಯವಾಗುತ್ತದೆ. ಅಂದರೆ, ಪ್ರಾದೇಶಿಕ ಪಕ್ಷಗಳು, ಎಡಪಕ್ಷಗಳು, ಬಹುಜನ ಸಮಾಜ ಪಕ್ಷ ಹೊಂದಾಣಿಕೆಯ ಹೋರಾಟಗಳಲ್ಲಿ ಒಟ್ಟಾಗಿ ಭಾಗವಹಿಸಬೇಕು. ಪ್ರಾದೇಶಿಕ ಪಕ್ಷಗಳು ಸಹ ಒಂದೇ ತೆರನಾದುವಲ್ಲ. ಅವೆಲ್ಲವೂ ಒಂದಲ್ಲ ಒಂದು ವೇಳೆ ಭಾಜಪದೊಡನೆ ಸರ್ಕಾರಗಳಲ್ಲಿ ಭಾಗವಹಿಸಿದ್ದವೇ ಆಗಿವೆ : ತೆಲುಗು ದೇಶಂ, ಕರುಣಾನಿಧಿ ಡಿಎಂಕೆ, ಜಯಲಲಿತಾ ಡಿಎಂಕೆ, ಇತ್ಯಾದಿ. ಕಪ್ಪು ಕನ್ನಡಕದ ಕರುಣಾನಿಧಿಗೆ ಕಾಣುವುದು ಕೇವಲ ತನ್ನ ಕುಟುಂಬದ ಮತ್ತು ಕೆಲವೊಮ್ಮೆ ತನ್ನ ರಾಜ್ಯದ, ಏಳಿಗೆ. ಜಯಲಲಿತಾಗೆ ತನ್ನ ಹೊಟ್ಟೆ ಮತ್ತು ಬೀರುವಿನಾಚೆ ಏನೂ ಕಾಣುವುದಿಲ್ಲ. ಇದೆಲ್ಲದರ ಪರಿಣಾಮವಾಗಿ ಕಾಂಗ್ರೆಸ್-ಭಾಜಪಗಳ ಐಕ್ಯ ಆರ್ಥಿಕ ನೀತಿಗಳಿಗೆ ಪರ್ಯಾಯವನ್ನು ರಚಿಸುವ ನಿಟ್ಟಿನಲ್ಲಿ ವಿರೋಧ ಪಕ್ಷಗಳ ಐಕ್ಯ ಹೋರಾಟವು ಸಿದ್ಧಿಸುತ್ತಿಲ್ಲ.

ಚುನಾವಣಾ ಫಲಿತಾಂಶವನ್ನು ಇನ್ನೊಂದು ರೀತಿಯಲ್ಲೂ ವಿಶ್ಲೇಷಿಸಲಾಗುತ್ತಿದೆ: ಶ್ರೀರಾಮಸೇನೆಯಂತಹ ಶಕ್ತಿಗಳಿಗೆ ಭವಿಷ್ಯವಿಲ್ಲ, ಏಕೆಂದರೆ ಜನತೆ ಅವನ್ನು ನಿರಾಕರಿಸಿದೆ. ಆದ್ದರಿಂದ ಅವುಗಳ ಮತೀಯತೆ-ಗೂಂಡಾಗಿರಿಗಳು ಅಲ್ಪ ಕಾಲ ಮಾತ್ರವೇ ಬಾಳುವಂಥವು. ಅಲ್ಲದೆ, ಭಾಜಪದ ಸೋಲಿನಿಂದಾಗಿ ಅವುಗಳ ರಾಜಕೀಯ ಪೋಷಣೆಗೆ ಧಕ್ಕೆಯುಂಟಾಗಿದೆ. ಭಾಜಪಕ್ಕೆ ಸಹ ಕಾರ್ಯಸೂಚಿಯು ಖಾಲಿಯಾಗಿದೆ : ರಾಮಜನ್ಮಭೂಮಿ - ಇಟ್ಟಿಗೆ - ರಥಯಾತ್ರೆ - ಮಸೀದಿ - ಮಂದಿರ - ಹಿಂದುತ್ವ, ಹೀಗೆ ಬತ್ತಳಿಕೆಯ ಅಸ್ತ್ರಗಳೆಲ್ಲಾ ಬರಿದಾಗಿವೆ. ಮೋದಿ ಮಾದರಿಯ ''ಕಾರ್ಯದಕ್ಷತೆ''ಯನ್ನು ಸಹ ಜನತೆ ನಿರಾಕರಿಸಿದೆ. ಹೀಗಾಗಿ ಭಾಜಪವು ಹಳೆಯದಾಗಿ ಹೋಗಿದೆ, ಸೋತಿದೆ. ಆದ್ದರಿಂದ ಅಲ್ಪಸಂಖ್ಯಾತರ ಮೇಲಿನ ದ್ವೇಷ, ಮತೀಯ ರಾಜಕಾರಣ, ಮುಂತಾದವು ಭಾಜಪಕ್ಕೆ ಇನ್ನು ಮುಂದೆ ಬಂಡವಾಳವಾಗಲಾರವು. ಹೀಗಿರುವಾಗ, ಕೋಮುವಾದಿ ರಾಜಕಾರಣದ ವಿರೋಧವೆನ್ನುವುದು ಅಪ್ರಸ್ತುತವಾಗುತ್ತಿದೆ.

ಇಂತಹ ವಿಶ್ಲೇಷಣೆಯನ್ನು ಮುಂದುಮಾಡುವವರು ಭಾಜಪದ ಸೋಲಿನ ಅಂತರವನ್ನು ಪ್ರಮುಖವಾಗಿ ಗಮನಿಸುತ್ತಾರೆ ಮತ್ತು ಪಕ್ಷದ ತಥಾಕಥಿತ ಆಂತರಿಕ ಪ್ರಕ್ಷೋಭೆಯನ್ನು ಪ್ರಸ್ತಾಪಿಸುತ್ತಾರೆ. ಸಾಚಾರ್ ವರದಿಯನ್ನು ಸಾರಾಸಗಟು ತಳ್ಳಿಹಾಕುವುದು ಸರಿಯಲ್ಲವೆಂದು ಭಾಜಪದೊಳಗೇ ಹೊಸ ಅಭಿಪ್ರಾಯ ಮೂಡುತ್ತಿದೆ ಎಂಬ ಮಿಥ್ಯಾ ಕಲ್ಪನೆಯೂ ಪ್ರಚಾರಕ್ಕೆ ಬಂದಿದೆ. ಜನತೆಯು ಎಡಪಕ್ಷಗಳನ್ನು ತಿರಸ್ಕರಿಸಿದ್ದು ಕೇಂದ್ರದಲ್ಲಿ ಸುಭದ್ರ ಸರ್ಕಾರ ನೀಡುವುದಕ್ಕೋಸ್ಕರ ಮತ್ತು ಹಾಗೆ ಮಾಡುವಾಗ ಜನತೆಯು ಮತೀಯತೆಯ ಪಿಡುಗನ್ನು ಅಸ್ತಿತ್ವದಲ್ಲಿಲ್ಲದ, ಅಥವಾ ಇನ್ನು ಮುಂದೆ ಇರಲಾಗದ, ಸಂಗತಿಯೆಂದು ಸರಿಯಾಗಿಯೇ ಗ್ರಹಿಸಿದೆ, ಎಂಬ ಮಾತನ್ನು ಈ ಬಣವು ಹೇಳುತ್ತಿದೆ.

ಈ ವಿಶ್ಲೇಷಣೆಯು ಎಷ್ಟರಮಟ್ಟಿಗೆ ಮಾನ್ಯತೆ ಪಡೆಯಬೇಕು ಎಂಬುದು ಇಂದಿನ ಮಹತ್ವದ ಪ್ರಶ್ನೆ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ಭಾಜಪದ ಗೆಲುವು ಜಾತಿ ಮತ್ತು ಹಣವನ್ನು ಆಧರಿಸಿದ್ದು ಎಂಬುದು ಬಹುಮಟ್ಟಿಗೆ ನಿಜವೇ ಇರಬಹುದು. ಆದಾಗ್ಯೂ, ಪ್ರಜಾಪ್ರಭುತ್ವ ಶಕ್ತಿಗಳು ಸಂಘಪರಿವಾರದ ಭೀತಿ ಇನ್ನಿಲ್ಲವಾಗಿದೆಯೆಂದು ಭ್ರಮಿಸಿ ಕಾಂಗ್ರೆಸ್ ಪಕ್ಷದ ಆರ್ಥಿಕನೀತಿ ಗಳನ್ನಷ್ಟೆ ಎದುರಿಸಿದರೆ ಸಾಕೆ ? ಶಿಕ್ಷಣ, ಮಾಧ್ಯಮ, ಸಂಸ್ಕೃತಿ, ಮುಂತಾದ ವಿಭಾಗಗಳಲ್ಲಿ ಸ್ವತಃ ಕಾಂಗ್ರೆಸ್ ಸಹ ಭಾಜಪದಂತೆ ಸಾಂಪ್ರದಾಯಿಕ ಅವೈಚಾರಿಕತೆಯನ್ನು ಪೋಷಿಸುತ್ತಿದೆ. ಗುಜರಾತ್, ಒರಿಸ್ಸಾ, ಮಂಗಳೂರು, ಬಾಬಾಬುಡನ್ ಗಿರಿ, ಮುಂತಾದ ಪ್ರಸಂಗಗಳಲ್ಲಿ ಕಾಂಗ್ರೆಸ್ ಪಕ್ಷವು ಭಾಜಪದ ವಿರುದ್ಧ ಯಾವ ತೀವ್ರ ಕ್ರಮಗಳನ್ನೂ ತೆಗೆದುಕೊಂಡಿಲ್ಲ, ಪರಿಣಾಮಕಾರಿ ಮಧ್ಯಪ್ರವೇಶ ಮಾಡಿಲ್ಲ. ಚುನಾವಣೆಗಳಲ್ಲಿ ಮತೀಯ ಸಂಖ್ಯಾ ಒತ್ತಡವು ಇದಕ್ಕೆ ಒಂದು ಕಾರಣವೆಂದು ಹೇಳಲಾಗುತ್ತದೆ. ಆದರೆ ಸೈದ್ಧಾಂತಿಕವಾಗಿ ಕಾಂಗ್ರೆಸ್ ಪಕ್ಷವು ಕೋಮುವಾದವನ್ನು ನಿಷ್ಠೆಯಿಂದ, ಪ್ರಾಯೋಗಿಕವಾಗಿ, ನಿರಾಕರಿಸುತ್ತದೆಯೆ ?

ಹಾಗಿದ್ದರೆ, ನಮ್ಮ ಇಂದಿನ ರಾಜಕೀಯ ವಾಸ್ತವತೆ ಏನು ? ಅಂತರರಾಷ್ಟ್ರೀಯ ಆರ್ಥಿಕ ಹಿಂಜರಿತದ ಮತ್ತು ಆಂತರಿಕ ಮತೀಯ ರಾಜಕಾರಣದ ಹಿನ್ನೆಲೆಯಲ್ಲಿ ಫ್ಯಾಸಿಸ್ಟ್ ದುಷ್ಟಶಕ್ತಿಗಳು ತಲೆಯೆತ್ತುವ ಸಾಧ್ಯತೆಯನ್ನು ತಳ್ಳಿಹಾಕಲಾಗುವುದಿಲ್ಲ. ಫ್ಯಾಸಿಸಂ ಎನ್ನುವುದು ಕೇವಲ ಮನೋವೈಕಲ್ಯದ ಪರಿಣಾಮವಲ್ಲ. ಅಲ್ಲದೆ, ಅದು ಯಾವಾಗಲೂ ಹಿಟ್ಲರ್ ಮಾದರಿಯಲ್ಲೇ ಅನುಷ್ಠಾನಕ್ಕೆ ಬರಬೇಕಾಗಿಲ್ಲ. ಜಾಗತಿಕವಾಗಿ ನೆಲೆ ಕಳೆದುಕೊಳ್ಳುತ್ತಿರುವ ಬಂಡವಾಳಶಾಹಿಯ ಆಳುವ ವರ್ಗವು ಪ್ರತೀಕಾರ ರೂಪದಲ್ಲಿ ಸಹ ಫ್ಯಾಸಿಸ್ಟ್ ವಿಧಾನವನ್ನು ಬಳಸಿಕೊಳ್ಳುವ ಸಾಧ್ಯತೆಯಿದೆ. ಅಲ್ಪಸಂಖ್ಯಾತರ ಮೇಲೆ ಪ್ರಚೋದಿಸಲಾಗಿರುವ ದ್ವೇಷ, ಮುಂಬರಲಿರುವ ಹೆಚ್ಚಿದ ನಿರುದ್ಯೋಗ, ಸಂವಿಧಾನಬಾಹಿರ ಕ್ರಮಗಳಿಗೆ ಆತುಕೊಳ್ಳುವ ಪ್ರವೃತ್ತಿ, ಔದ್ಯಮಿಕ ಕ್ಷೇತ್ರದ ಉತ್ಪಾದನೆಯಲ್ಲಿ ಕುಸಿತ, ಸೇನ್‌ಗುಪ್ತ ವರದಿಯು ವಸ್ತುನಿಷ್ಠವಾಗಿ ತೋರಿಸಿಕೊಟ್ಟಿರುವ ಅಸಮಾನ ವರಮಾನದ ಭೀಕರತೆ, ಇವೆಲ್ಲಾ ತೀವ್ರ ಬಿಕ್ಕಟ್ಟುಗಳ ಆಗರವೆಂಬುದನ್ನು ಮರೆಯಲಾಗದು. ಅಂತಹ ಸನ್ನಿವೇಶದಲ್ಲಿ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷ ಬಹುಮಟ್ಟಿಗೆ ಸಮಾನ ದೃಷ್ಟಿಕೋನವನ್ನು ಹೊಂದುವುದು ಅಸಂಭವವಲ್ಲ. ಅದಕ್ಕೆ ಅಮೆರಿಕಾದ ಸ್ಪಷ್ಟ ಬೆಂಬಲವೂ ಇರುತ್ತದೆ.

ಒಟ್ಟಿನಲ್ಲಿ ಹೇಳುವುದಾದರೆ, ನಾಳಿನ ಅಪಾಯಕಾರಿ ಸಾಧ್ಯತೆಗಳನ್ನೆದುರಿಸಲು ದುಡಿಯುವ ಜನ ಸನ್ನದ್ಧರಾಗಬೇಕೆಂದು ಈಗಿನ ಚುನಾವಣಾ ಫಲಿತಾಂಶವು ನಿರ್ದೇಶಿಸುತ್ತಿದೆ. ಗಂಡಾಂತರದಿಂದ ಪಾರಾಗಬೇಕೆನ್ನುವ ಆಕಾಂಕ್ಷೆಯಿದ್ದರೆ ನಾವು ಈ ನಿರ್ದೇಶನ ವನ್ನು ಹಗುರವಾಗಿ ಪರಿಗಣಿಸುವಂತಿಲ್ಲ. ದುಡಿಯುವ ವರ್ಗಕ್ಕೆ ಕೇಳುವ ಕಿವಿ ಮತ್ತು ಮಾಡುವ ಕೈ ಹಿಂದೆಂದಿಗಿಂತಲೂ ಇಂದು ಪ್ರಶಸ್ತವಾದ ಸಾಧನಗಳಾಗಬೇಕಿವೆ.


ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

*ಈ ತಿಂಗಳು (೩ ನೇ ಪುಟದಿಂದ)*

ಅರ್ಹನಾದ ಬೇರಾರೂ ಇಲ್ಲ'' ಎಂಬ ಖ್ಯಾತಿಗೆ ಪಾತ್ರನಾದ ಕಾಲಿದಾಸ ಮುಂತಾದವರಿರುವಾಗ ವೇದವಿಲ್ಲದಿದ್ದರೂ ಸಂಸ್ಕೃತ ಇದೆ, ಇರಬಲ್ಲದು. ಸಂಸ್ಕೃತ ಭಾಷೆಯಲ್ಲಿ ಎಲ್ಲ ಜ್ಞಾನಪ್ರಕಾರಗಳಿಗೂ ಸಂಬಂಧಿಸಿದ ಒಂದು ಸಾಹಿತ್ಯ ಸಮುದ್ರವೇ ಇದೆ. ವೇದವಿರುವುದು ನಮ್ಮ ಹೆಮ್ಮೆ, ಆದರೆ ಅದಿಲ್ಲದಿದ್ದರೂ ಸಂಸ್ಕೃತವು ಹೆಣವಾಗಿ ಬಿದ್ದಿರುವುದಿಲ್ಲ. ವೇದವನ್ನು ಓದದೆಯೇ ಅದರ ಘನತೆಯನ್ನು ಸಾರುವವರು ನಮ್ಮಲ್ಲಿ ಕಾಸಿಗೊಬ್ಬರು, ಕೊಸರಿಗೆ ನೂರು ಜನ ದೊರೆಯುತ್ತಾರೆ. ಅದರಲ್ಲಿ ಪರಮಾಣು ವಿಜ್ಞಾನ, ವೈಮಾನಿಕ ಶಾಸ್ತ್ರ, ಅದ್ವೈತ ವೇದಾಂತ, ಜೈನಧರ್ಮ, ಐನ್‌ಸ್ಟೈನನ ಸಾಪೇಕ್ಷ ಸಿದ್ಧಾಂತ, ಎಲ್ಲವೂ ಇದೆಯೆಂದು ಹೇಳುತ್ತಾ ಗಂಭೀರ ವದನರಾಗುವ ಸಾವಿರಾರು ಪಂಡಿತಂಮನ್ಯರು (ಅಂದರೆ, ತಮ್ಮನ್ನು ತಾವು ಪಂಡಿತರೆಂದು ಕರೆದುಕೊಳ್ಳುವ ಅಲ್ಪಮತಿಗಳು) ನಮ್ಮಲ್ಲಿದ್ದಾರೆ. ಇವೆಲ್ಲಾ ವೇದದಲ್ಲಿಲ್ಲ ದಿದ್ದರೆ ಅದಕ್ಕೆ ಬೆಲೆ ಇಳಿದುಹೋಗುತ್ತದೆಂದು ಭ್ರಮಿಸುವ ಮೂರ್ಖರೆಂದರೆ ಇವರೇ. ವೇದಕಾಲದ ನಾಗರಿಕತೆ ಮತ್ತು ಸಂಸ್ಕೃತಿಗಳು ಬುಡಕಟ್ಟು ಸಮಾಜದವು ಎಂಬ ಪ್ರಾಥಮಿಕ ಜ್ಞಾನವು ಇವರಿಗೆ ವರ್ಜ್ಯ. ಋಗ್ವೇದದ ಸಾಹಿತ್ಯವು ಎಷ್ಟು ಸುಂದರವಾದುದೆಂಬ ತಿಳುವಳಿಕೆ ಇವರಿಗೆ ಬಾರದು; ಏಕೆಂದರೆ, ಅವರು ಅದನ್ನು ಓದಲಾರರು, ಅರ್ಥ ಮಾಡಿಕೊಳ್ಳಲಾರರು. ಮಹಾಭಾರತದ ಕರ್ತೃ ಒಂದೆಡೆ ಹೇಳುವಂತೆ ''ಅಲ್ಪಜ್ಞಾನವುಳ್ಳವನು ತನ್ನನ್ನು ಕೊಂದುಹಾಕುತ್ತಾನಲ್ಲಾ ಎಂದು ವೇದಕ್ಕೆ ಬಹಳ ಭಯ.'' ನಮ್ಮ ಸಮಕಾಲೀನ ಮಹಾಮಹಿಮರನ್ನು ಕಾಣುವ ಮೊದಲೇ ಅದನ್ನು ಹೇಳಿದ್ದು ಸ್ವಾರಸ್ಯದ ವಿಷಯ.

ಇನ್ನು ಕೆಲವರು ತಮ್ಮ ವಾದದಲ್ಲಿ ''ಸಂಸ್ಕೃತವಿಲ್ಲದೆ ಭಾರತೀಯ ಸಂಸ್ಕೃತಿ ಇಲ್ಲ'' ಎಂಬರ್ಥ ಬರುವ ಬಾಲಿಶ ಮಾತನ್ನಾಡಿದ್ದಾರೆ. ಅದನ್ನು ಪ್ರಸ್ತಾಪಿಸಿ ಹಲವು ದಶಕಗಳ ಹಿಂದೆ ಬಿ. ಎಂ. ಶ್ರೀಕಂಠಯ್ಯ ಅವರು ಒಂದು ಮಾತು ಹೇಳಿದ್ದರು : ''ಸಂಸ್ಕೃತಿ ಎಂಬುದು ಸಂಸ್ಕೃತ ಎಂಬುದರ ಸ್ತ್ರೀಲಿಂಗ ರೂಪವಲ್ಲ'' ಎಂದು. ಅಂದರೆ, ಸಂಸ್ಕೃತಿಯು ಸಂಸ್ಕೃತದ ಹೆಂಡತಿಯಲ್ಲ ಎಂದರ್ಥ. ನಮ್ಮ ಸಮಾಜದ ಹಲವು ಪಂಗಡಗಳಿಗೆ, ಗುಡ್ಡಗಾಡಿನವರಿಗೆ, ಅರಣ್ಯವಾಸಿ ಗಳಿಗೆ ಸಂಸ್ಕೃತದ ಸಂಪರ್ಕವಿಲ್ಲ, ಆದರೆ ಅವರಿಗೆ ಸಂಸ್ಕೃತಿ ಇಲ್ಲವೆ ? ಸಂಸ್ಕೃತದ ಬಗೆಗಿನ ಅಭಿಮಾನ ಆರೋಗ್ಯಕರ, ಆದರೆ ದುರಭಿಮಾನವು ಖಂಡನೀಯ. ಅದು ದುರಹಂಕಾರದ ಸೂಚನೆ.

ಏನೇ ಇರಲಿ, ಸಂಸ್ಕೃತದಲ್ಲಿ ಅನೇಕ ಮಹತ್ವದ ಸಂಗತಿಗಳನ್ನು ಸಂವಹನ ಮಾಡಲಾಗಿದೆಯೆಂಬುದು ಸಂಸ್ಕೃತ ವಿಶ್ವವಿದ್ಯಾನಿಲಯವೊಂದರ ಅಗತ್ಯಕ್ಕೆ ಸಮರ್ಥನೆ ಹೇಗಾಗುತ್ತದೆ ? ಎರಡನೆಯದಾಗಿ, ಸಂಸ್ಕೃತದಲ್ಲಿರುವ ಗ್ರಂಥಗಳನ್ನು ಅಧ್ಯಯನ ಮಾಡಬೇಕಾದ ರೀತಿ ಯಾವುದು ? ವಿಶ್ವೇಶ್ವರತೀರ್ಥರ ರೀತಿಯಲ್ಲೇ ? ಅವರಿಗೆ ವೇದವು ಅಪೌರುಷೇಯ. ಅದರಲ್ಲಿರುವುದೆಲ್ಲಾ ಶ್ರೇಷ್ಠ, ಗೂಢ. (ಅಂದರೆ, ಅವರಿಗೆ ಅರ್ಥವಾಗದ್ದು ಎಂಬರ್ಥವೇ ?) ಋಗ್ವೇದದಲ್ಲಿ ಒಂದು ಜನಾಂಗದವರನ್ನು ''ಶಿಶ್ನದೇವಾಃ'' (ಅಂದರೆ ಗಂಡಸಿನ ಲಿಂಗವನ್ನು ಪೂಜಿಸು ವಂಥವರು) ಎಂದು ಕರೆಯಲಾಗಿದೆ. ಇದರಲ್ಲಿ ಗೂಢ ವಾದ್ದೇನೂ ಇಲ್ಲ, ಗಾಢವಾದ್ದೂ ಇಲ್ಲದಿರಬಹುದು. ಇಂದ್ರನು ಸೋಮರಸವನ್ನು ಹೀರಿ ತನ್ನ ವೀರ್ಯ ಸ್ಖಲನದ ವೃದ್ಧಿಯನ್ನು ಅಪಾರವಾಗಿ ಮಾಡಿಕೊಂಡಿದ್ದಾನೆ, ಎಂಬ ಮಾತು ಬೇರೆಡೆ ಋಗ್ವೇದದಲ್ಲಿದೆ. ಇದರಲ್ಲಿ ಗಾಢ-ಗೂಢ ಏನೂ ಇಲ್ಲ; ವಯಾಗ್ರಾದ ಪೂರ್ವರೂಪ ಇದೆ, ಅಷ್ಟೆ. ಇನ್ನೊಂದೆಡೆ, ಪಣಿಗಳು ಎಂಬ ಬುಡಕಟ್ಟು ಜನರನ್ನು ದೂಷಿಸುತ್ತಾ ''ಅವರು ಚಿರಕಾಲ ಕತ್ತಲಲ್ಲಿ ಬಿದ್ದಿರಲಿ'' ಎಂಬರ್ಥ ಬರುವ ಮಾತನ್ನು ಋಗ್ವೇದದಲ್ಲಿ ಕಾಣಬಹುದು (ಅಚಿತ್ರೇ ಅಂತಃ ಪಣಯಃ ಸಸಂತು। ಅಬುಧ್ಯಮಾನಾ ತಮಸೋ ವಿ ಮಧ್ಯೇ॥). ಯಡಿಯೂರಪ್ಪ - ಪೇಜಾವರಸ್ವಾಮಿಯವರ ಆಶೀರ್ವಾದದಿಂದ ಕಂಗೊಳಿ ಸಲಿರುವ ವೇದ ವಿಶ್ವವಿದ್ಯಾನಿಲಯದಲ್ಲಿ ಇವನ್ನೆಲ್ಲಾ ಗಮನಿಸಲು ಸಾವಧಾನಚಿತ್ತದವರು ಇರುತ್ತಾರೆಯೆ ? ಅವರು ಅದಕ್ಕೆಲ್ಲಾ ಚಾರಿತ್ರಿಕವಾಗಿ ಸಮಂಜಸವಾದ ಅರ್ಥವನ್ನು ನೀಡುತ್ತಾರೆಯೆ ? ಅಥವಾ, ಸುಮ್ಮನೆ ಬುಡುಬುಡಿಕೆ ವ್ಯಾಸಂಗವನ್ನು ವಿದ್ಯಾರ್ಥಿಗಳ ಮೇಲೆ ಹೇರುತ್ತಾರೆಯೆ ? ಸಂಸ್ಕೃತದಲ್ಲಿರುವ ಅನರ್ಘ್ಯ ರತ್ನಗಳನ್ನು ಹೆಕ್ಕಿ ತೆಗೆಯಲು ಇವರಿಗೆ ಆಸಕ್ತಿ ಇರುವುದಿಲ್ಲ. ಸಂಸ್ಕೃತವು ಹೆಚ್ಚೆಂದರೆ ಅವರಿಗೆ ಸುಭಾಷಿತದ ಸ್ವರೂಪ ವನ್ನು ಪರಿಚಯ ಮಾಡಿಕೊಡುವಂಥದು. ಅದು ಅತ್ಯಂತ ಕಳಪೆ ಮಟ್ಟದ ಅಧ್ಯಯನ. ಅದಕ್ಕೆ ವಿಶ್ವವಿದ್ಯಾನಿಲಯವು ಬೇಕಿಲ್ಲ, ಬೊಗಳೆ ಪಂಡಿತರಲ್ಲಿ ವ್ಯರ್ಥ ಶಿಷ್ಯತ್ವ ಸಾಕು.

ಉದ್ದಾಲಕ ಆರುಣಿ, ಚರಕ, ಆರ್ಯಭಟ, ಬ್ರಹ್ಮಗುಪ್ತ, ಯಶೋಧರ, ಕಣಾದ, ಕಪಿಲ, ಗೌತಮ, ಲೋಕಾಯತ, ಕೌಟಿಲ್ಯ, ಹೀಗೆ ನೂರಾರು ಶ್ರೇಷ್ಠ ತಜ್ಞರ ಹೆಸರುಗಳನ್ನು ಸಂಸ್ಕೃತ ವಾಙ್ಮಯದಲ್ಲಿ ಕಾಣುತ್ತೇವೆ. ಅವರ ಧೀಮಂತಿಕೆಯನ್ನು ಚಾರಿತ್ರಿಕವಾಗಿ, ವೈಜ್ಞಾನಿಕವಾಗಿ, ಮಾಪನ ಮಾಡುವ ಸದಭಿಲಾಷೆಯ ಅಭಾವದಲ್ಲಿ ಸಂಸ್ಕೃತ ವಿಶ್ವವಿದ್ಯಾನಿಲಯವು ಶುಷ್ಕವಾಗಿಬಿಡುತ್ತದೆ, ಅನಗತ್ಯವಾದ ಹೊರೆಯಾಗುತ್ತದೆ. ಮೊದಲು, ಅಧ್ಯಯನಗಳಿಗೆ ವೈಜ್ಞಾನಿಕ ವಿಧಾನದ ಶಿಸ್ತನ್ನು ಕ್ಲುಪ್ತವಾಗಿ ರೂಢಿಸಿಕೊಳ್ಳಬೇಕು. ಅದನ್ನು ಪೇಜಾವರ ಸಂತತಿ ಖಂಡಿತ ಮಾಡುವುದಿಲ್ಲ. ಆ ಸಂತತಿಯವರಿಗೆ ವೈಜ್ಞಾನಿಕ ಪದ್ಧತಿಯ ಶಿರಚ್ಛೇದನ ಮಾಡುವುದಷ್ಟೇ ತಿಳಿದಿದೆ. ಅದು ವಿಶ್ವವಿದ್ಯಾನಿಲಯಕ್ಕೆ ಶೋಭೆ ತರುವುದಿಲ್ಲ. ಅಂತಹ ಸಂಸ್ಕೃತ ವಿಶ್ವವಿದ್ಯಾ ನಿಲಯದ ಪರವಾಗಿ ಅಥವಾ ವಿರೋಧವಾಗಿ ವಾದ ಮಂಡಿಸುವವರು ಇದನ್ನು ಮನನ ಮಾಡಿಕೊಳ್ಳುವುದು ಬಹಳ ಉಚಿತವಾಗಿರುತ್ತದೆ. ಪೇಜಾವರ ತೀರ್ಥರು ಮಾಡದಿರುವುದನ್ನು ಶೃಂಗೇರಿ ಸ್ವಾಮಿಗಳೋ, ಪರಕಾಲ ಮಠಾಧೀಶರೋ ಮಾಡುತ್ತಾರೆಂಬ ಸೂಚನೆ ಅನರ್ಥಕ್ಕೆ ಹಾದಿ. ಇವರೆಲ್ಲಾ ಬೇರೆಬೇರೆ ಮಠಗಳಲ್ಲಿ ರಂಜಿಸುವ ಒಂದೇ ಮಠದ ನೇತಾರರು. ಅವೈಜ್ಞಾನಿಕತೆಯು ಪೇಜಾವರರ ಏಕಸ್ವಾಮ್ಯದಲ್ಲಿಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಮೂಲತಃ ವಿಶ್ವವಿದ್ಯಾನಿಲಯದಲ್ಲಿ ಡಂಭಾಚಾರ, ಭಾವೋದ್ರೇಕ ಮತ್ತು ಬೌದ್ಧಿಕ ಮೊಂಡುತನಕ್ಕೆ ಸ್ಥಾನವಿರಕೂಡದು. ಉದಾರವಾದಿ ಮನೋಭಾವವು ವಿಶ್ವವಿದ್ಯಾನಿಲಯದ ಜೀವಾಳವಾಗಬೇಕು. ನಮ್ಮ ದುಃಖದ ಸನ್ನಿವೇಶ ಏನೆಂದರೆ ಸಂಸ್ಕೃತ ವಿಶ್ವವಿದ್ಯಾ ನಿಲಯದ ಸ್ಥಾಪನೆಯನ್ನು ಸಮರ್ಥಿಸುತ್ತಿರುವವರು ಬಹುಮಟ್ಟಿಗೆ ಈ ಅತ್ಯಗತ್ಯ ಮನೋಭಾವಕ್ಕೆ ಹೊರತಾದವರಾಗಿ ವಿಜೃಂಭಿಸುತ್ತಿದ್ದಾರೆ. ನಮ್ಮ ಸಾಂಸ್ಕೃತಿಕ ವಾತಾವರಣವು ಹೀಗಿರಕೂಡದು.

* * *

ಕಾಶ್ಮೀರದಲ್ಲಿ ಮತ್ತೆ ಪರಿಸ್ಥಿತಿ ಉದ್ವಿಗ್ನಗೊಂಡಿದೆ. ಹಿಂದೆ ಹಲವು ಬಾರಿ ಘಟಿಸಿರುವಂತಹ ಮತ್ತೊಂದು ಘಟನೆಯೇ ಅದಕ್ಕೆ ಮೂಲಕಾರಣ. ಇಂತಹ ಪರಿಸ್ಥಿತಿ ಉದ್ಭವಿಸಿದಾಗ ಅದರ ದುರುಪಯೋಗಪಡಿಸಿಕೊಳ್ಳುವ ಶಕ್ತಿಗಳು ನಮ್ಮೆಲ್ಲ ರಾಜ್ಯಗಳಲ್ಲೂ ಇವೆ. ಆದರೆ ಇಂತಹ ಅವಮಾನಕರ ಸಂಗತಿಗಳು ಕಾಶ್ಮೀರದಲ್ಲಿ ಪದೇ ಪದೇ ವಾತಾವರಣವನ್ನು ಕಲಕುವುದೇಕೆಂಬುದರ ವಿಶ್ಲೇಷಣೆಯನ್ನು ವಸ್ತುನಿಷ್ಠವಾಗಿ ಮಾಡಬೇಕಾಗಿದೆ. ಯಥಾಪ್ರಕಾರ ಮಹಿಳೆಯರ ಮೇಲೆ ಅತ್ಯಾಚಾರ, ನಂತರ ಅದರ ವಿರುದ್ಧ ಪ್ರತಿಭಟಿಸಿದವರಿಗೆ ಹೊಡೆತ, ಆಮೇಲೆ ಅಂತಹ ದುರ್ಘಟನೆ ಸಂಭವಿಸಿಯೇ ಇಲ್ಲವೆಂಬ ಅಪ್ಪಟ ಸುಳ್ಳಿನ ಹೇಳಿಕೆಗಳು. ಸಾಲದ್ದಕ್ಕೆ ಇದನ್ನು ಖಂಡಿಸದೆ ಮುಚ್ಚಿಡಲು ಯತ್ನಿಸುವ ಪೊಲೀಸ್ ಮತ್ತು ಸೈನ್ಯದ ಅಧಿಕಾರಿಗಳು. ನಮ್ಮ ದೇಶದ ನಾಗರಿಕರನ್ನು ನಡೆಸಿಕೊಳ್ಳುವ ರೀತಿಯೇ ಇದು ? ಕಾಶ್ಮೀರಿಗಳಿಗೆ ದೇಶಭಕ್ತಿಯ ಪಾಠ ಹೇಳುವ ಮಂದಿ ಇದಕ್ಕೆ ನೇರ ಉತ್ತರ ಕಂಡುಕೊಳ್ಳಬೇಕು.

* * *

ಯಾರಿಗೂ ಯಾವಾಗಲೂ ವಾಸ್ತವಿಕವಾಗಿ ತೊಂದರೆ ಉಂಟುಮಾಡುವುದು ಅಥವಾ ಶಿಕ್ಷೆ ವಿಧಿಸುವುದು ಸಾಧ್ಯ ವಿಲ್ಲದ ನಮ್ಮ ರಾಜ್ಯದ ಲೋಕಾಯುಕ್ತರು ಸಮಾಚಾರದ ಅಲೆಗಳನ್ನೆಬ್ಬಿಸುತ್ತಿರುತ್ತಾರೆ. ಅವರ ಉದ್ದೇಶ ಘನವಾದ್ದೇ ಇರಬೇಕು, ಆದರೆ ಫಲಿತಾಂಶ ಮಾತ್ರ ನಗಣ್ಯ. ದಿನನಿತ್ಯ ಪತ್ರಿಕೆಗಳಲ್ಲಿ ಅವರನ್ನು ನೋಡುವುದು, ಅವರ ಹೇಳಿಕೆ ಗಳನ್ನು ಓದುವುದು ಮತ್ತು ಅವರು ನಿವೇದಿಸುವ ಘೋರ ಪಾತಕದ ಕತೆಗಳನ್ನು ಕೇಳುವುದು ಹೇಯವಲ್ಲ, ಬೇಸರದ ವಿಷಯವಲ್ಲ. ಅಲ್ಲಿಂದ ಒಂದು ಹೆಜ್ಜೆಯೂ ಮುಂದಕ್ಕೆ ಹೋಗಲಾರೆವಲ್ಲಾ ಎಂಬುದು ವೇದನೆ. ಅವರು ಕಂಡುಹಿಡಿದ ಅಕ್ರಮ ಸಂಪಾದನೆಯು ಕೋಟಿಗಟ್ಟಲೆ ಮತ್ತು ಸಿಕ್ಕಿಹಾಕಿಕೊಂಡ ಖದೀಮರು ನೂರಾರು. ಆದರೆ ಅವರಾರೂ ಒಂದು ಬಿಡಿಗಾಸನ್ನೂ ಕಳೆದುಕೊಳ್ಳುವುದಿಲ್ಲ ವೆಂಬುದು ವಾಸ್ತವ. ಇತ್ತೀಚೆಗೆ ಲೋಕಾಯುಕ್ತ ಹೆಗ್ಡೆಯವರು ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರನ್ನು ಕಟುವಾಗಿ ಟೀಕಿಸಿದರು ಮತ್ತು ಅದಕ್ಕೆ ಪ್ರತಿಯಾಗಿ ಅಂದಿನ ಆಯುಕ್ತ ಸುಬ್ರಹ್ಮಣ್ಯ ಅವರು ಲೋಕಾಯುಕ್ತರ ವಿರುದ್ಧ ಮಾನನಷ್ಟ ಮೊಕದ್ದಮೆಯನ್ನು ದಾಖಲಿಸಿದರು. ಮುಖ್ಯ ಮಂತ್ರಿಗಳ ಆದೇಶದಂತೆ ಅದನ್ನು ಹಿಂತೆಗೆದುಕೊಂಡು ನಂತರ ಮಹಾನಗರ ಪಾಲಿಕೆಯಿಂದ ನಿರ್ಗಮಿಸಿದರು. ಬಹುಶಃ ಎಂದೂ ಪರಿಹರಿಸಲಾಗದ ಮಹಾನಗರಪಾಲಿಕೆಯ ಭ್ರಷ್ಟ ಪೀಡೆಯಿಂದ ಮುಕ್ತರಾಗಿದ್ದು ಅವರಿಗೆ ಸಮಾಧಾನ ತಂದಿರಬಹುದು. ಇಡೀ ಪ್ರಸಂಗದಲ್ಲಿ ಒಂದೆರಡು ಸರಳ ಪ್ರಶ್ನೆಗಳಿವೆ. ಜನಸಾಮಾನ್ಯರನ್ನು ನಿಕೃಷ್ಟವಾಗಿ ಕಂಡು, ಅವರಲ್ಲಿ ಕೆಲವರನ್ನು ಚರಂಡಿಗಳಲ್ಲಿ ಕೊಚ್ಚಿಹೋಗುವಂತೆ ಮಾಡುವವರು ನೇರವಾಗಿ ಆಯುಕ್ತರಲ್ಲ. ಅದಕ್ಕೆ ಜವಾಬ್ದಾರಿ ಹೊರಬೇಕಾದವರನ್ನು ನಿಯಂತ್ರಿಸಲು ಸುಬ್ರಹ್ಮಣ್ಯಂ ಆಗಲಿ, ಮೀನ ಆಗಲಿ ವಿಮುಖರಲ್ಲ; ಆದರೆ ಜಡ್ಡುಗಟ್ಟಿದ ವ್ಯವಸ್ಥೆಯಲ್ಲಿ ನಿಯತ್ತಿನಿಂದ ಕೆಲಸ ಮಾಡುವ ಪ್ರವೃತ್ತಿ ಮಾಯವಾದಾಗ ಅವರು ಅಶಕ್ತ

ರಾಗುತ್ತಾರೆ. ಚರಂಡಿಯಲ್ಲಿ ಕೊಚ್ಚಿಹೋದ ಬಾಲಕನ ಮನೆಗೆ ತೆರಳಿ ಆಯುಕ್ತರು ತಂದೆ-ತಾಯಿಯವರಿಗೆ ಸಾಂತ್ವನ ಹೇಳುವುದು ಕೃತಕವಾಗಿ ಕಾಣುತ್ತದೆ. ಮಂತ್ರಿಗಳು ಮತ್ತು ಶಾಸಕರು ಅದನ್ನು ಛಾಯಾಚಿತ್ರಗಾರರ ಸಮ್ಮುಖದಲ್ಲಿ ಗೆಲುವಿನಿಂದ ಮಾಡಿಬಿಡುತ್ತಾರೆ. ಕಪಾಳಮೋಕ್ಷ ಮಾಡಿ ಅವರನ್ನು ಹೊರತಳ್ಳುವುದು ವ್ಯಥೆಯಲ್ಲಿ ಮುಳುಗಿದ ಕುಟುಂಬಗಳಿಗೆ ಸಾಧ್ಯವಾಗುವುದಿಲ್ಲ. ಮನೆಗೆ ತೆರಳಿ ಸಾಂತ್ವನ ಹೇಳುವ ನಾಟಕ ಮಾಡುವುದಕ್ಕಿಂತ ಬಾಲಕನು ಬಿದ್ದ ಚರಂಡಿಯ ರಿಪೇರಿ ಮತ್ತು ನೊಂದವರಿಗೆ ಸ್ವಲ್ಪ ಪರಿಹಾರ ನೀಡುವುದು ಹೆಚ್ಚು ಉಪಯುಕ್ತ. ಆದ್ದರಿಂದ ಲೋಕಾಯುಕ್ತರು ಸುಬ್ರಹ್ಮಣ್ಯಂ ಅವರನ್ನು ಅಷ್ಟು ಕರ್ಕಶವಾಗಿ ನಿಂದಿಸಬೇಕಾಗಿರಲಿಲ್ಲ. ಹೋಗಲಿ, ಲೋಕಾಯುಕ್ತರು ನೊಂದವರನ್ನು ಭೇಟಿಮಾಡಿ ಬಂದರಲ್ಲ, ಅದರಿಂದೇನಾಯಿತೆಂದು ಯಾರಾದರೂ ಕೇಳಿದರೆ ಏನುತ್ತರ ಹೇಳಿಯಾರು! ದಿನನಿತ್ಯ ಒಂದಲ್ಲ ಒಂದು ಕುಟುಂಬಕ್ಕೆ ಸಾಂತ್ವನ ಹೇಳಬೇಕಾಗಿ ಬರುವ ರೀತಿಯಲ್ಲಿ ನಮ್ಮ ನಾಗರಿಕ ಸೌಲಭ್ಯಗಳು ಕೆಟ್ಟುಕೂತಿವೆ. ಹಾಗಿರುವಾಗ ಅಧಿಕಾರವು ನೀಡುವ ಅವಕಾಶದಿಂದಾಗಿ ಆಯುಕ್ತರನ್ನು ಲೋಕಾಯುಕ್ತರು ನಿಂದಿಸಬೇಕಾಗಿತ್ತೆ? ಅಧಿಕಾರದಲ್ಲಿರುವವರು ತಮ್ಮ ಸ್ಥಾನಕ್ಕೆ ತಕ್ಕಂತೆ ವರ್ತಿಸಬೇಕು. ಅದನ್ನು ಬಿಟ್ಟು ಲಂಗು-ಲಗಾಮಿಲ್ಲದೆ ನಾಲಿಗೆಯನ್ನು ಹರಿಯಬಿಡುವುದು ಸೂಕ್ತವಲ್ಲ. ಲೋಕಾಯುಕ್ತರಿಗಿಂತಲೂ ಮೇಲಿರುವ ನಾಗರಿಕ ಸಮಾಜವು ಲೋಕಾಯುಕ್ತರನ್ನು ತರಾಟೆಗೆ ತೆಗೆದುಕೊಂಡರೆ ಹೇಗಿರುತ್ತದೆ?

* * *

ಇತ್ತೀಚೆಗೆ ಪ್ರಧಾನಿಯವರೊಂದು ಆಣಿಮುತ್ತನ್ನು ಸುರಿಸಿದ್ದಾರೆ. ನಮ್ಮ ದೇಶದಲ್ಲಿ ಅಪಾರ ಸಂಪತ್ತಾದ ಖನಿಜಗಳು ವಿಪುಲವಾಗಿ ಲಭ್ಯವಾಗುವೆಡೆಗಳಲ್ಲಿ ತೀವ್ರಗಾಮಿ ನಕ್ಸಲರು ಪ್ರಬಲವಾಗಿರುವುದರಿಂದ ಖನಿಜಗಳನ್ನು ಹೊರತೆಗೆದು ''ಅಭಿವೃದ್ಧಿ''ಗೆ ಕೊಡುಗೆ ನೀಡಬಲ್ಲ ವಿದೇಶಿ ಬಂಡವಳಿಗರು ಹಣ ಹೂಡಲು ಹಿಂಜರಿಯುತ್ತಿದ್ದಾರಂತೆ. ಇದು ನಿಜವೆಂದೇ ಭಾವಿಸಿದರೆ ನಾವೇನು ತೀರ್ಮಾನಕ್ಕೆ ಬರಬೇಕು? ಅಯ್ಯೋ, ನಮ್ಮ ಸಂಪತ್ತನ್ನು ದೋಚುವ ಮಹದುಪಕಾರ ಮಾಡಲು ತುದಿಗಾಲಲ್ಲಿ ನಿಂತಿರುವ ವಿದೇಶಿ ಬಂಡವಾಳದ ಹೂಡಿಕೆದಾರರಿಗೆ ಹೀಗೆ ನಿರಾಸೆಯುಂಟುಮಾಡುತ್ತಿರುವ ನಕ್ಸಲರು ಮಹಾಪಾಪಿಗಳು ಎಂದು ವ್ಯಾಕುಲರಾಗಬೇಕೇ? ಅಥವಾ, ಸದ್ಯ, ಹೀಗಾದರೂ ಸ್ವಲ್ಪಮಟ್ಟಿಗೆ ನಮ್ಮ ಖನಿಜಸಂಪತ್ತಿಗೆ ಸರ್ಪಗಾವಲಿನಂತೆ ನಿಂತಿರುವ ನಕ್ಸಲರು ಎಷ್ಟು ಜನಪ್ರೇಮಿಗಳು ಎಂದು ಹಿಗ್ಗಬೇಕೆ? ಪ್ರಧಾನಿಯು ದೇಶದ ಸಂಪತ್ತನ್ನು ಜನಗಳಿಗಾಗಿ ಸಂರಕ್ಷಿಸಬೇಕು; ಆ ಕೆಲಸವನ್ನು ನಕ್ಸಲರಿಗೇಕೆ ವಹಿಸಿಕೊಡಬೇಕಾಗಿತ್ತು! ಈ ಕ್ಷೇತ್ರಕ್ಕೆ ವಿದೇಶಿ ಬಂಡವಾಳದ ಹೂಡಿಕೆ ಸಾಧ್ಯವಾಗದಿದ್ದರೆ ಅದು ಸ್ವಾಗತಾರ್ಹ ಬೆಳವಣಿಗೆ. ಮುಂದಿನ ಪೀಳಿಗೆಯವರು ಅದಕ್ಕಾಗಿ ನಮಗೆ ಕೃತಜ್ಞರಾಗಿರುತ್ತಾರಲ್ಲವೆ? ಖನಿಜಗಳು ಕೊಳೆತುಹೋಗುವುದಿಲ್ಲ, ಪ್ರಧಾನಿಗಳೇ.

* * *

ಉತ್ಕೃಷ್ಟ ಕ್ರೀಡೆಯೆಂದು ಪ್ರಚಾರಕ್ಕೆ ಬಂದಿರುವ ಕ್ರಿಕೆಟ್ಟಿನ ಧೋನಿ ದಂಡು ಇಂಗ್ಲೆಂಡಿನಲ್ಲಿ ಮುಖಕ್ಕೆ ಮಸಿ ಬಳಿಸಿಕೊಂಡು, ತಲೆಯ ಮೇಲೆ ಗುಬುರುಹಾಕಿಕೊಂಡು, ಸ್ವದೇಶಕ್ಕೆ ಮರಳುವ ಮಹತ್ಕೃಪೆ ತೋರಿತೆಂದು ವರದಿಯಾಗಿದೆ. ಕ್ರಿಕೆಟ್ ಪಟುಗಳ ಜಾಹಿರಾತು ಬೆಲೆ ಕುಸಿಯಬಹುದೆಂಬ ಆತಂಕವು ಕೆಲವರನ್ನು ಆವರಿಸಿರಬಹುದು. ಅದಕ್ಕೆ ನಾವೇನೂ ವ್ಯಥೆಪಡಬೇಕಾಗಿಲ್ಲ. ದಂಡಿನ ಧಣಿಯಾದ ಧೋನಿ ''ಭಾರತದ ಕೋಟಿಗಟ್ಟಲೆ ಜನರಿಗೆ ನಿರಾಸೆಯುಂಟುಮಾಡಿದ್ದಕ್ಕೆ ಕ್ಷಮೆ'' ಕೇಳಿದ್ದಾರಂತೆ. ಈ ಕೋಟಿಗಟ್ಟಲೆ ಜನರ ಹೃದಯದ ಬಡಿತ ನಿಂತು ಹೋಗಿದೆಯಂತೆ, ವೀರ ದಂಡು ಸೋತುಬಿಟ್ಟಿತಲ್ಲಾ, ಎಂದು. ಇದು ಕೋಟಿ-ಕೋಟಿ ಜನರಿಗೆ ಮಂಕು ಕವಿಸಿದೆಯಂತೆ. ಹೀಗೆ ಇನ್ನೂ ಏನೇನನ್ನೋ ನಮ್ಮ ಅನ್ಯ ಕೆಲಸವಿಲ್ಲದ ಮಾಧ್ಯಮಗಳು ಹೇಳುತ್ತಾ ಕಾಲಹರಣ ಮಾಡುತ್ತಿವೆ. ದಂಡದ ಧೋನಿ ದಂಡಿಗೆ ನಾವು ಹೇಳಬೇಕಾದದ್ದಿಷ್ಟೆ: ''ಮಹಾತ್ಮರೆ, ಅಷ್ಟೊಂದು ದುಃಖಿಸಬೇಡಿ. ನಮಗೇನೂ ನಿರಾಸೆಯಿಲ್ಲ. ನೀವು ತವಕದಿಂದ ಸ್ಮರಿಸುವ ಕೋಟಿ-ಕೋಟಿ ಜನರಲ್ಲಿ ನಾವು ಸೇರಿಲ್ಲ. ನಮ್ಮ ಹೃದಯಗಳು ಯಾವ ಆತಂಕವೂ ಇಲ್ಲದೆ ಯಥಾಪ್ರಕಾರ ಬಡಿದುಕೊಳ್ಳುತ್ತಿವೆ. ನಿಮ್ಮಿಂದ ನಾವು ಕಿರೀಟ ತೊಡಿಸಿಕೊಳ್ಳಲು ಕಾತುರರಾಗಿಲ್ಲ. ಗೆದ್ದರೂ ನೀವು ನಮ್ಮ ದೇಶಕ್ಕೆ ಮರಳಬಹುದು. ಸೋತರೂ ಅದನ್ನೇ ಮಾಡಬಹುದು. ಅನಗತ್ಯವಾಗಿ ಅರ್ಥರಹಿತವಾದ ಹೆಮ್ಮೆ ಪ್ರದರ್ಶಿಸಲು ನೀವು ಬೀಗಬೇಕಾಗಿಲ್ಲ, ಮೂರ್ಖರಾಗಬೇಕಾಗಿಲ್ಲ''

* * *

ನಮ್ಮ ದೇಶದಲ್ಲಿ ಭವಿಷ್ಯದ ಮ್ಯಾನೇಜ್‌ಮೆಂಟ್ ಗುರುಗಳಿಗೆ ಎಲ್ಲಿಲ್ಲದ ಆದರವಿದೆ. ಅವರ ''ಬ್ಯುಸಿನೆಸ್ ಸ್ಕೂಲ್''ಗಳೇನು, ಅವರ ''ಮ್ಯಾನೇಜ್‌ಮೆಂಟ್ ಇನ್‌ಸ್ಟಿಟ್ಯೂಟ್''ಗಳೇನು, ಅದರಲ್ಲಿ ಪ್ರವೇಶ ಪಡೆದವರು ಸುರಿಯುವ ಹಣದ ಹೊಳೆಯೇನು, ನಾಳೆ ಅವರು ಗಳಿಸುವ ಕೂಲಿಯ ಪ್ರಮಾಣವೇನು! ಎಲ್ಲಾ ಅದ್ಭುತವೇ. ಅವು ಖಾಸಗಿ ಸಂಸ್ಥೆಗಳಾದರೆ ಇನ್ನೂ ಹೆಚ್ಚಿನ ಕಳೆ. ಈ ಕಳೆಯ ಮಧ್ಯೆ ಒಂದು ಅಗಾಧ ಕೊಳೆ ಈ ವರ್ಷ ತುಂಬಿಕೊಂಡಿದೆ. ಅದೇನೆಂದರೆ, ಈ ನಮ್ಮ ಭಾವೀ ಮ್ಯಾನೇಜ್‌ಮೆಂಟ್ ಗುರುಗಳು, ಬ್ಯುಸಿನೆಸ್ ಚತುರರು, ತಮ್ಮ ಪಠ್ಯದ ಭಾಗವಾಗಿ ಜರ್ಮನಿಯ ''ಪ್ರಭಾವಿ ನಾಯಕ'' ಅಡಾಲ್ಫ್ ಹಿಟ್ಲರನ ''ಮಾಯಿನ್ ಕಾಂಪ್ಫ್'' ಎಂಬ ಉದಾತ್ತ ಚರಿತೆಯನ್ನು ಆಕರಗ್ರಂಥವಾಗಿ ವ್ಯಾಸಂಗ ಮಾಡುತ್ತಾರೆ! ಅದರಿಂದಾಗಿ ಈ ಪುಸ್ತಕದ ಸಾವಿರ ಪ್ರತಿಗಳು ಮುಂಬೈ ಒಂದರಲ್ಲೇ ಮಾರಾಟವಾಗಿವೆಯಂತೆ. ಹಿಟ್ಲರನ ''ಮ್ಯಾನೇಜ್‌ಮೆಂಟ್ ಟೆಕ್ನೀಕ್ಸ್'' ಮತ್ತು ''ಬ್ಯುಸಿನೆಸ್ ಟ್ಯಾಕ್ಟಿಕ್ಸ್'' ತಿಳಿಯಲು ಆ ಗ್ರಂಥ ಸಹಾಯಕವಂತೆ. ಮುಂದೆ ಅವೇ ''ಟೆಕ್ನೀಕ್ಸ್'' ಮತ್ತು ''ಟ್ಯಾಕ್ಟಿಕ್ಸ್'' ಬಳಸಿ ನಮ್ಮನ್ನು ಈ ಮ್ಯಾನೇಜ್‌ಮೆಂಟ್ ಗುರುಗಳು ಉದ್ಧಾರ ಮಾಡುತ್ತಾರೆ; ಆದ್ದರಿಂದ ಸದ್ಯಕ್ಕೆ ನಾವು ನಿಸೂರಾಗಿ ಉಸಿರಾಡಬಹುದು! ನಮ್ಮ ದೇಶದ ವ್ಯಥೆಯ ಕಥೆಗೆ ಇದೊಂದು ಕಡಿಮೆಯಾಗಿತ್ತು, ಅಷ್ಟೆ. ಅಲ್ಲವೆ? ನಾಚಿಕೆಯ ತುಂಡು ಇನ್ನೂ ಏನಾದರೂ ನಮ್ಮಲ್ಲಿ ತೂಗಾಡುತ್ತಿದೆಯೆ? ಪರೀಕ್ಷಿಸಿಕೊಳ್ಳೋಣ.



**ಕವನಗಳಿಗಾಗಿ ಆಹ್ವಾನ**

ಯಳಂದೂರಿನ ಅಂಬಾ ಪ್ರಕಾಶನವು ಹಿರಿಯ-ಕಿರಿಯ ಬರಹಗಾರರ ಕವನಗಳಿರುವ ಸಂಪಾದಿತ ಕವನ ಸಂಕಲನವೊಂದನ್ನು ಹೊರತರಲಿದೆ. ಇದಕ್ಕಾಗಿ ರಾಜ್ಯ ಮತ್ತು ಹೊರ ರಾಜ್ಯದಲ್ಲಿರುವ ಕನ್ನಡ ಬರಹಗಾರರಿಂದ ಕವನಗಳನ್ನು ಆಹ್ವಾನಿಸಿದೆ. ಆಸಕ್ತರು ತಮ್ಮ ೨ ಕವನಗಳನ್ನು ಸ್ವವಿವರ ಹಾಗೂ ಇತ್ತೀಚಿನ ಭಾವಚಿತ್ರದೊಂದಿಗೆ ಸ್ಪಷ್ಟವಾದ ಬರವಣಿಗೆ ಅಥವಾ ಟೈಪ್‌ಮಾಡಿ ಕಳುಹಿಸಲು ಕೋರಲಾಗಿದೆ. ಕವನ ಪ್ರಕಟಣೆಗೆ ಯಾವುದೇ ರೀತಿಯ ಪ್ರವೇಶ ಶುಲ್ಕ ಇರುವುದಿಲ್ಲ. ಸಂಪಾದಿತ ಕವನ ಸಂಕಲನವನ್ನು ಪ್ರಕಾಶನದ ವಾರ್ಷಿಕೋತ್ಸವ ಹಾಗೂ ವಿವಿಧ ಪ್ರಶಸ್ತಿಗಳ ಪ್ರದಾನ ಸಮಾರಂಭದಲ್ಲಿ ಬಿಡುಗಡೆ ಮಾಡಲಾಗುವುದು.

ಕವನಗಳನ್ನು ದಿನಾಂಕ ೨೫-೭-೨೦೦೮ರ ಒಳಗೆ ಈ ಕೆಳಕಂಡ ವಿಳಾಸಕ್ಕೆ ಕಳುಹಿಸಲು ಕೋರಲಾಗಿದೆ.

**ಯ. ಮ. ಹೇಮಂತ ಕುಮಾರ್**
ಅಂಬಾ ಪ್ರಕಾಶನ, ಎ. ಕೆ. ರಸ್ತೆ
ಯಳಂದೂರು -೫೭೧ ೪೪೧
ಚಾಮರಾಜನಗರ ಜಿಲ್ಲೆ




**ಹೊಸತು** ಸೊಗಸಾದ ಪತ್ರಿಕೆಯಾಗಿದ್ದು ಹತ್ತನೇ ವರ್ಷದಲ್ಲಿ ಮುನ್ನಡೆದು ಸಾಗುತ್ತಿರುವುದು ಪತ್ರಿಕೆಯ ಹಿತೈಷಿಗಳಾದ ನನ್ನಂಥವರಿಗೆ ಅತೀವ ಸಂತೋಷ ವನ್ನುಂಟುಮಾಡಿದೆ. ಸಂಪಾದಕ ವರ್ಗದವರಿಗೆಲ್ಲಾ ನನ್ನ ಅಭಿನಂದನೆ ಹಾಗೂ ಶುಭಾಶಯಗಳು.

*ಬೆಂಗಳೂರು* **ಎಚ್. ಜಿ. ಸೋಮಶೇಖರರಾವ್**

### ಜೂನ್ ಸಂಚಿಕೆ

'ವರ್ಣಾವಲಕ್ಷಣಂ' ಎಂಬ ಕಥೆ ಜಾತ್ಯತೀತ ವ್ಯವಸ್ಥೆ ಯೊಳಗೇ ಕೊಳೆತು ನಾರುತ್ತಿರುವ ಮನೋಭಾವಗಳನ್ನು ಅತ್ಯಂತ ಹೃದಯಂಗಮವಾಗಿ ಕಣ್ಮುಂದೆ ಕಟ್ಟಿಕೊಟ್ಟಿದೆ ಎನ್ನಿಸಿತು. ಆದರೆ ಲೇಖಕರು ಕಥೆಯ ಶೀರ್ಷಿಕೆಯನ್ನು ಸಾಮಾನ್ಯವಾಗಿ 'ಜಾತಿವಾದಿಗಳು ಬಳಸುವ ಭಾಷಾ ಮೇಲರಿಮೆ'ಯನ್ನೇ ಪ್ರಯೋಗಿಸಿದ್ದು ಪಿಚ್ಚೆನ್ನಿಸಿತು. ಪ್ರಾಯಃ ದಲಿತ ಪ್ರಜ್ಞೆ ಜಾತ್ಯತೀತ ಪ್ರಜ್ಞೆ ಎಡವುದು ಇಂತಹ ಅವಜ್ಞೆಗಳಿಂದಲೇ ಎಂದೆನ್ನಿಸುತ್ತದೆ!

ಲೋಕಸಭಾ ಚುನಾವಣೆಯ ಫಲಿತಾಂಶವನ್ನು ಪ್ರೊ|| ಬರಗೂರು ರಾಮಚಂದ್ರಪ್ಪ ಅವರು ಅವಲೋಕಿಸಿದ ಪರಿ ಅದ್ಭುತವಷ್ಟೇ ಅಲ್ಲ, ವಸ್ತುನಿಷ್ಠ ಪತ್ರಕರ್ತನ ಆದರ್ಶ ಚಿಂತನೆಗಳನ್ನೂ ಎತ್ತಿ ತೋರಿಸುತ್ತದೆ. ದೈನಿಕಗಳ ತಥಾ ಕಥಿತ ಅಂಕಣಕಾರರ ಶೈಲಿಗಿಂತ ವಿಭಿನ್ನವಾಗಿ ಇದು ಮೂಡಿ ಬಂದಿರುವುದು ಬರಗೂರರ ಮೇಲಿನ ಅಭಿಮಾನ-ವಿಶ್ವಾಸ ಗಳನ್ನು ಹೆಚ್ಚಿಸುತ್ತದೆ. ಅವರ ಸೈದ್ಧಾಂತಿಕ ಕಾಳಜಿಗೆ ಹ್ಯಾಟ್ಸಾಫ್!

*ಚಿತ್ರದುರ್ಗ* **ಚನ್ನಬಸವ ಪುತ್ತೂರ್ಕರ**

೨೦೦೯ರ ಲೋಕಸಭಾ ಫಲಿತಾಂಶದ ವಿಶ್ಲೇಷಣೆ ನ್ಯಾಯ ನಿಷ್ಠುರವಾಗಿದೆ. ಚುನಾವಣೆಗೂ ಮುನ್ನ ನುಡಿದಿದ್ದ ಭವಿಷ್ಯವಾಣಿಯನ್ನೂ ತಲೆಕೆಳಗು ಮಾಡಿದ ಕೀರ್ತಿ ಭಾರತದ ಮತದಾರನಿಗೆ ಸಲ್ಲುತ್ತದೆ. ಮತದಾರರ ತೀಕ್ಷ್ಣ ಪ್ರತಿಕ್ರಿಯೆಯನ್ನು ಹಲವು ಕ್ಷೇತ್ರಗಳಲ್ಲಿ ನಾವು ಗಮನಿಸಿದ್ದೇವೆ. ಕೆಲಸ ಮಾಡದ ಅಭ್ಯರ್ಥಿಗಳಿಗೆ ಮಣ್ಣು ಮುಕ್ಕಿಸುವ ಕೆಲಸವನ್ನು ಮತದಾರ ಮಾಡಿದ್ದಾನೆ! ಮುಂದಿನ ಸಂಸತ್ ಕಲಾಪಗಳಲ್ಲಿ ಭಾಗವಹಿಸದೆ ಕೆಲಸ ಮಾಡದೆ ಉಳಿಯುವ ಸಂಸದರು ಯೋಚಿಸಬೇಕು.

ನ್ಯಾಯಾಂಗ ವ್ಯವಸ್ಥೆಯ ಬಗ್ಗೆ ನ್ಯಾ|| ಡಿ. ವಿ. ಶೈಲೇಂದ್ರ ಕುಮಾರ್ ಅವರ ಭಾಷಣದ ಸಂಕ್ಷಿಪ್ತ ರೂಪವೂ ಸಹ ಗಮನಾರ್ಹ. ನ್ಯಾಯಾಧೀಶರ ನೇಮಕಾತಿಯ ಸಂದರ್ಭದಲ್ಲೇ ಉತ್ತಮ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಪ್ರಕ್ರಿಯೆ ಈಗಿರುವುದಕ್ಕಿಂತ ಗಟ್ಟಿಯಾಗಬೇಕು. ಜಾತಿ, ಧರ್ಮ ಮೊದಲಾದವುಗಳ ಪರಿಗಣನೆಗಿಂತ ಒಬ್ಬ ಅಭ್ಯರ್ಥಿ ಎಷ್ಟರಮಟ್ಟಿಗೆ ನ್ಯಾಯ ನಿಷ್ಠುರನಾಗಿರು ತ್ತಾನೆಂಬುದನ್ನು ನೇಮಕಾತಿ ಸಮಿತಿಯು ಪರಿಗಣಿಸುವ ಅಗತ್ಯವಿದ್ದು, ಆಗ ಮಾತ್ರ ನ್ಯಾಯಾಂಗ ಘನತೆಯನ್ನುಳಿಸಿ ಕೊಳ್ಳುತ್ತದೆ. ನೂರಕ್ಕೆ ನೂರರಷ್ಟು ಕಳಂಕರಹಿತವಾದ ನ್ಯಾಯಾಂಗ ನಮ್ಮ ಅಗತ್ಯ.

*ಮೈಸೂರು* **ಕೊ. ಸು. ನರಸಿಂಹಮೂರ್ತಿ**

### ವ್ಯರ್ಥ ಕಸರತ್ತು

ಶ್ರೀ ಪಿ. ಎನ್. ಲಕ್ಷ್ಮೀನಾರಾಯಣ ಅವರ 'ಧರ್ಮ ಮತ್ತು ರಾಜಕೀಯ' ಎಂಬ ಲೇಖನದ ಬಗ್ಗೆ ಈ ಪ್ರತಿಕ್ರಿಯೆ:

'ಇಂದಿನ ಭಾರತದ ನಿಜವಾದ ಸಮಸ್ಯೆ ಧರ್ಮ, ಕೋಮುವಾದ: ಭಯೋತ್ಪಾದನೆಯಲ್ಲ; ಸಂಘಪರಿವಾರವು ಧರ್ಮ ಸಂಸ್ಕೃತಿಗಳ ಮುಸುಕಿನಲ್ಲಿ ಮುನ್ನೊತ್ತುತ್ತಿರುವ ಫ್ಯಾಸಿಸಂನ ಆಧುನಿಕ ರೂಪಗಳೇ ಆದ ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿ', ಎಂಬ ವಾದ ಮಂಡಿಸುವುದಕ್ಕೆ ಲೇಖಕರು ವಿಷ್ಣು, ಶಿವ ಇವರ ಗುಣಾವಗುಣಗಳನ್ನು ವಿಶ್ಲೇಷಿಸುವಂಥ ಕೂದಲು ಸೀಳುವ ವ್ಯರ್ಥ ಕಸರತ್ತು ನಡೆಸಿದ್ದಾರೆ. ಖಾಯಿಲೆಗೆ ಒಂದು ಹೆಸರನ್ನಿಟ್ಟು ಖಾಯಿಲೆಯ ಹೆಸರೇನು ಎಂದು ಕಂಡುಹಿಡಿದ ವೈದ್ಯನ




ಸಂಭ್ರಮದಂತಿದೆ ಅವರ ವಾದ. ರೋಗಿಗೆ ಬೇಕಾಗಿರುವುದು ಖಾಯಿಲೆಯ ಹೆಸರಲ್ಲ, ಖಾಯಿಲೆ ಗುಣಪಡಿಸುವಂಥ ಚಿಕಿತ್ಸೆ. ಸಮಸ್ಯೆ ಕೋಮುವಾದ, ಭಯೋತ್ಪಾದನೆಯಾಗಲಿ ಅಥವಾ ಬಂಡವಾಳಶಾಹಿ, ಸಾಮ್ರಾಜ್ಯಶಾಹಿಯೇ ಆಗಲಿ, ಅದನ್ನು ಎದುರಿಸುವ ಬಗೆ ಹೇಗೆ ಎಂಬುದರ ಬಗ್ಗೆ ಸುದೀರ್ಘ ಲೇಖನದಲ್ಲಿ ಒಂದು ವಾಕ್ಯವೂ ಇಲ್ಲದಿರುವುದು ಆಶ್ಚರ್ಯ.

ವಿಷ್ಣು ಮನಮೋಹಕ ರಾಜತಂತ್ರಿ, ಅರ್ಧಸತ್ಯ ಮತ್ತು ಜಾಣ್ಮೆಯ ಸುಳ್ಳುಗಳನ್ನು ಬಳಸಲು ಸ್ವಲ್ಪವೂ ಹಿಂಜರಿಯದ ರಾಜಕಾರಣಿ, ಅನೈತಿಕ ತಂತ್ರಗಳನ್ನು ಬಳಸುವ, ಮೋಸಗೊಳಿಸುವ ಚಾಣಾಕ್ಷ ಇತ್ಯಾದಿ, ಇತ್ಯಾದಿ. ಹಾಗೇ ಶಿವ ಮುಗ್ಧ ದೇವರು. ಮೇಲ್ಜಾತಿ ಕೆಳಜಾತಿ ಎಲ್ಲರಿಂದಲೂ ಆರಾಧನೆಗೊಳ್ಳುವ ಅತ್ಯಂತ ಕರುಣಾಳು ಈಶ್ವರ, ಎಂಬ ತಮ್ಮ ವಾದವನ್ನು ಮಂಡಿಸಲು ನೂರೆಂಟು ಉದಾಹರಣೆ ಗಳನ್ನು ಕೊಟ್ಟು ಕಡೆಗೆ ವಿಷ್ಣುವನ್ನು ಆರೆಸ್ಸೆಸ್‌ಗೂ ಶಿವನನ್ನು ಶಿವಸೇನೆಗೂ ಸಮೀಕರಿಸಿಬಿಟ್ಟಿದ್ದಾರೆ. ಶಿವಸೇನೆ ಮುಗ್ಧ, ಎಲ್ಲರಿಂದಲೂ ಬೆಂಬಲ ಪಡೆಯುವ ಕರುಣಾಳು ಪಕ್ಷವೇ? ಲಕ್ಷ್ಮೀನಾರಾಯಣರೇ ಹೇಳಬೇಕು. ಆರೆಸ್ಸೆಸ್ ವಿಷ್ಣು ಸ್ವರೂಪಿಯಾದರೂ ಅಮರನಾಥ, ಕಾಶಿ ವಿಶ್ವನಾಥನ ಬಗ್ಗೆಯೂ ರಾಜಕೀಯ ಮಾಡುತ್ತದೆ ಎಂಬುದನ್ನು ಗಮನಿಸಬೇಕು. ಕೃಷಿ, ಆಹಾರ ಉತ್ಪಾದನೆ, ಬಡತನಗಳ ಮೂಲ ಶಿವ; ಅಧಿಕಾರ, ವಾಣಿಜ್ಯ, ಉದ್ದಿಮೆ, ಶ್ರೀಮಂತಿಕೆಗಳ ಮೂಲ ವಿಷ್ಣು, ಎಂದು ವಾದಿಸುವುದಕ್ಕೂ ಇಂದಿನ ಸಮಸ್ಯೆ ಕೋಮುವಾದ, ಭಯೋತ್ಪಾದನೆಯಲ್ಲ; ಬಂಡವಾಳಶಾಹಿ ಮತ್ತು ಸಾಮ್ರಾಜ್ಯಶಾಹಿ, ಎಂದು ಮಂಡಿಸುವ ತೀರ್ಮಾನಕ್ಕೂ ಎತ್ತಣಿಂದೆತ್ತ ಸಂಬಂಧ?

ದೇವರ ನಂಬಿಕೆ ವೈಯಕ್ತಿಕ, ಸಾರ್ವಜನಿಕವಲ್ಲ. ದೇವರ ಕಲ್ಪನೆಯನ್ನು ಬಹಳ ಸುಲಭವಾಗಿ ಪ್ರಚೋದಿಸಿ ರಾಜಕೀಯ ಬೇಳೆ ಬೇಯಿಸಿಕೊಳ್ಳಬಹುದು. ವಾಲ್ಮೀಕಿಯ ರಾಮ, ಗಾಂಧೀಜಿಯ ರಾಮ, ಸಂಘಪರಿವಾರದ ರಾಮ ಒಂದೇ ಅಲ್ಲ ಎಂಬ ಅಂಶ ಎಲ್ಲರ ಗಮನಕ್ಕೂ ಬರುವುದಿಲ್ಲ ಎಂಬುದು ಸರಿಯಾದ ಮಾತು. ಸಂಘಪರಿವಾರವು ತನ್ನ ಕಾರ್ಯಕ್ರಮಗಳನ್ನು ವ್ಯವಸ್ಥಿತವಾಗಿ, ಶಿಸ್ತಿನಿಂದ, ಯಶಸ್ವಿ ಯಾಗಿ ಜಾರಿಗೆ ತರುತ್ತಿದೆ. ಆದರೆ ಇದನ್ನು ವಿರೋಧಿಸುವ ವಿಚಾರವಾದಿಗಳು, ಕಮ್ಯುನಿಸ್ಟರ ಪ್ರಯತ್ನಗಳು ಆ ಮಟ್ಟಿನ ಯಶಸ್ಸು ಕಾಣುತ್ತಿಲ್ಲ. ಉದಾ: ಬಾಬಾಬುಡನ್ ಗಿರಿ ವಿವಾದ ವನ್ನೇ ನೋಡಿ: ಕರ್ನಾಟಕದಲ್ಲಿ ಅದನ್ನು ಎಷ್ಟು ಕಟುವಾಗಿ ವಿರೋಧಿಸಿದ್ದರೂ, ಈಗ ಎಲ್ಲೆಡೆಯೂ 'ದತ್ತಪೀಠ' ಎಂಬ ಹೆಸರೇ ರಾರಾಜಿಸುತ್ತಿದೆ. ಗಿರಿಯ ಸುತ್ತಮುತ್ತಲಿನ ಫಲಕ ಗಳಲ್ಲಿ 'ಬಾಬಾಬುಡನ್ ಗಿರಿ' ಎಂಬ ಹೆಸರೇ ಮಾಯವಾಗಿದೆ.

ಸಂಘಪರಿವಾರ ವಿಷ್ಣು ಸ್ವರೂಪಿಯೋ, ಶಿವ ಸ್ವರೂಪಿಯೋ ಎಂಬ ಚರ್ಚೆಗಿಂತ ಸಂಘಪರಿವಾರದ ರಾಮನನ್ನು ಗಾಂಧೀಜಿಯ ರಾಮನಿಂದ ಎದುರಿಸುತ್ತೀರೋ, ರಾಮನೇ ಇಲ್ಲ ಎಂಬ ವಾದದಿಂದ ಎದುರಿಸುತ್ತೀರೋ ಎಂಬುದೇ ಇಂದಿನ ಮುಖ್ಯ ಪ್ರಶ್ನೆ. ರಾಮ ಸಂಘಪರಿವಾರದ ಕೈಯಲ್ಲಿ ಒಂದು ಆಯುಧವಷ್ಟೆ. ಅವನ ನಿರಾಕರಣೆಯಿಂದ ಸಂಘಪರಿವಾರದ ರಾಮನನ್ನು ಎದುರಿಸುವುದು ಆಯುಧ ಧಾರಿಯನ್ನು ಬರಿಗೈಲಿ ಎದುರಿಸಿದಂತೆ ವ್ಯರ್ಥವಾಗುತ್ತಿರು ವುದನ್ನು ನೋಡುತ್ತಿದ್ದೇವೆ. ಇಂಥ ಸಾಮಾಜಿಕ, ರಾಜಕೀಯ ಸಮಸ್ಯೆಗಳಿಗೆ ಒಂದು ಸಿದ್ಧಸೂತ್ರ ಪರಿಹಾರ ಇರಲು ಸಾಧ್ಯವಿಲ್ಲ. ಶ್ರೀ ಲಕ್ಷ್ಮೀನಾರಾಯಣರೇ ಪರಿಹಾರ ವನ್ನು ಹುಡುಕಲಿ ಎಂಬ ವಾದವೂ ನನ್ನದಲ್ಲ. ವಿಚಾರ ವಂತರು ಕಾರ್ಯಸಾಧುವಾದ ವಿವಿಧ ಪರಿಹಾರಮಾರ್ಗ ಗಳತ್ತ ಹೆಚ್ಚು ಗಮನ ಹರಿಸಲಿ ಎಂಬುದು ನನ್ನ ಅನಿಸಿಕೆ.

*ಶಿವಮೊಗ್ಗ* ವಿ. ಶ್ರೀನಿವಾಸ

'ಧರ್ಮ-ರಾಜಕೀಯ...' ಎಂಬ ಡಾ|| ಲಕ್ಷ್ಮೀನಾರಾಯಣ ಅವರ ಲೇಖನವನ್ನು 'ಹೊಸತು'ವಿನಲ್ಲಿ ಎಂಟು ಪುಟಗಳಷ್ಟು ಹಾಕಬೇಕಾಗಿತ್ತೆ? ಅದರಲ್ಲಿರುವ ವಿಚಾರವೆಲ್ಲಾ ಹಳೆಯದೇ ಆಗಿವೆ. ಶೀರ್ಷಿಕೆಯನ್ನು ಬದಲಾಯಿಸಿ ಅದರ ಭಗ್ನ ಪ್ರತಾಪವನ್ನು ಎತ್ತಿತೋರಿಸ ಬೇಕಾಗಿತ್ತು. ರಾಮಾಯಣ - ಭಾರತಗಳು ಕಾವ್ಯ. ನಂಬುವವರು ನಂಬುತ್ತಾರೆ, ಬಿಟ್ಟವರು ಬಿಡುತ್ತಾರೆ. ಲೇಖಕರು ಅವನ್ನು ನಂಬಿ ಬಹುಶಃ ಪ್ರಯೋಜನವಿಲ್ಲವೆಂದು ಬರೆದದ್ದೋ ಅಥವಾ ಇನ್ನೂ ನಂಬಿಕೆ ಇಟ್ಟೇ ಬರೆದದ್ದೋ ತಿಳಿಯುವುದಿಲ್ಲ. ನಂಬದವನು ಅಂತಹ ವಿಚಾರಗಳನ್ನು ಮಾತನಾಡಲು ಇಷ್ಟಪಡುವುದಿಲ್ಲ. ವೈಚಾರಿಕತೆಯ ನೆಲೆಯಲ್ಲಿ ವೈಯಕ್ತಿಕ ನಿಷ್ಠೆಗೆ ಅವಕಾಶ ಕೂಡದು.

*ಮೈಸೂರು* **ಕೆ. ವಸಂತರಾಜು**

# ಸಾಮ್ರಾಜ್ಯಶಾಹಿ ಅಮೆರಿಕಾದ ಗರ್ಭದಿಂದೊಂದು ಪತ್ರ



**ನಾನು ಅಮೆರಿಕಾಕ್ಕೆ ಕಾಲಿಡುವ ವೇಳೆಗೆ ಬರಾಕ್ ಒಬಾಮಾ ಅಧ್ಯಕ್ಷಗಿರಿಗೆ ನೂರು ದಿನ. ಈ ಸಂದರ್ಭದಲ್ಲಿ ಅವನ ಆಡಳಿತದ ಸಾಧನೆ - ವೈಫಲ್ಯಗಳ ಬಗ್ಗೆ ಸಾಕಷ್ಟು ಚರ್ಚೆ ನಡೆದಿತ್ತು. ದಕ್ಷಿಣ ಅಮೆರಿಕಾ ದೇಶಗಳ ಶೃಂಗ ಸಭೆಗೆ ಹೋಗಿ ಅಲ್ಲಿ ವೆನಿಜುವೆಲಾದ ಅಧ್ಯಕ್ಷ ಹ್ಯೂಗೋ ಶಾವೇಜ್, ಬೊಲಿವಿಯದ ಅಧ್ಯಕ್ಷ ಈವೊ ಮೊರಾಲೆಜ್ ಇವರ ಜೊತೆ ಒಬಾಮಾ ಕೈಕುಲುಕಿದ್ದು, ಕ್ಯೂಬಾದ ಮೇಲಿನ ಕೆಲವು ದಿಗ್ಬಂಧನಗಳನ್ನು ಸ್ವಲ್ಪ ಮಟ್ಟಿಗೆ ಸಡಿಲಿಸಿದ್ದು ಇರಾನ್ ಬಗ್ಗೆ ಸ್ನೇಹದಿಂದ ಮಾತನಾಡುತ್ತಿರುವುದು, ಇವೆಲ್ಲದರಿಂದ ರಿಪಬ್ಲಿಕನ್ ಪಕ್ಷದವರ ಕಣ್ಣು ಕೆಂಪಾಗಿದೆ. ೨೦೦೦ದ ಅಧ್ಯಕ್ಷ ಚುನಾವಣೆಯಲ್ಲಿ ರಿಪಬ್ಲಿಕನ್ ಪಕ್ಷದಿಂದ ಸೆಣಸಲು ಪ್ರಯತ್ನಿಸಿದ್ದಾತ, ಒಬಾಮಾನನ್ನು ಒಬ್ಬ ತೀವ್ರಗಾಮಿ ಕಮ್ಯುನಿಸ್ಟ್ ಎಂದು ಜರೆದು, ಅವನ ಆಳ್ವಿಕೆಯಲ್ಲಿ ಅಮೆರಿಕಾ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳಲಿದೆ, ೨೦೧೨ರಲ್ಲಿ ಅಧ್ಯಕ್ಷ ಸ್ಥಾನಕ್ಕೆ ಚುನಾವಣೆಯೇನಾದರೂ ನಡೆದರೆ ಅದು ದೇವರ ದಯೆಯೆಂದು ಕಿಡಿಕಾರಿದ್ದು ಈ ದೇಶದಲ್ಲಿ ಪ್ರಚಲಿತವಾಗಿರುವ ಜನಾಭಿಪ್ರಾಯಕ್ಕೆ ಒಂದು ನಿದರ್ಶನ.**

ನಾನು ಮತ್ತು ನನ್ನ ಹೆಂಡತಿ ಅಮೆರಿಕಾದ ಪೂರ್ವ ಕಡಲ ತೀರದ ಪ್ರಸಿದ್ಧ ನಗರ ಬಾಸ್ಟನ್‌ನಲ್ಲಿ ವಾಸಿಸುತ್ತಿರುವ ನಮ್ಮ ಏಕಮಾತ್ರ ಮಗನ ಜೊತೆಯಲ್ಲಿ ಸ್ವಲ್ಪ ದಿನಗಳನ್ನು ಕಳೆಯುವ ಹಂಬಲದಿಂದ ಸುಮಾರು ಮೂರು ವಾರಗಳ ಹಿಂದೆ ಇಲ್ಲಿಗೆ ಬಂದೆವು. ಕಳೆದ ವರ್ಷವಷ್ಟೆ ನಾವು ಸ್ವೀಡನ್ ದೇಶದ ರಾಜಧಾನಿ ಸ್ಟಾಕ್‌ಹೋಂನಲ್ಲಿರುವ ನನ್ನ ಅಕ್ಕನ ಮಗನ ಮನೆಗೆ ಹೋದಾಗ ಸ್ವೀಡನ್, ಫಿನ್ಲೆಂಡ್ ಮತ್ತು ನಾರ್ವೆ ದೇಶಗಳ ವಿವಿಧ ಭಾಗಗಳಲ್ಲಿ ಸುತ್ತಾಡಿ ಅಲ್ಲಿಯ ಮನಮೋಹಕ, ರಮಣೀಯ ಪ್ರಕೃತಿಯ ಸೊಬಗನ್ನು ಸವಿದಿದ್ದ ನನಗೆ ಅಮೆರಿಕಾದ ಈ ಭಾಗ ಸ್ವಲ್ಪ ಸಪ್ಪೆ ಎನಿಸಿತು. ಅಮೆರಿಕಾ ಸಮೃದ್ಧ ದೇಶವೆಂಬುದು ಎದ್ದು ಕಾಣುತ್ತದೆ. ಆದರೆ ಇಲ್ಲಿ ಎಲ್ಲವೂ ಖಾಸಗಿಮಯ. ಎಲ್ಲಿಗಾದ್ರೂ ಹೋಗಬೇಕೆಂದರೆ ಸ್ವಂತ ಕಾರು ಇರಬೇಕು. ಇಲ್ಲವೆ ಟ್ಯಾಕ್ಸಿಯನ್ನು ಕರೆಯಬೇಕು. ಸಾರ್ವಜನಿಕ ಸಾರಿಗೆ ವ್ಯವಸ್ಥೆ ಬಹಳ ಕಡಿಮೆ. ಸ್ವೀಡನ್, ಫಿನ್ಲೆಂಡ್ ಮತ್ತು ನಾರ್ವೆ ದೇಶಗಳಲ್ಲಿರುವ ಸಾರ್ವಜನಿಕ ಸಾರಿಗೆ ವ್ಯವಸ್ಥೆ ಅದ್ಭುತವಾದುದು. ಅಲ್ಲಿ ನಮಗೆ ಖಾಸಗಿ ವಾಹನಗಳಲ್ಲಿ ಸಂಚರಿಸುವ ಅಗತ್ಯವೆ ಬರಲಿಲ್ಲ. ಸ್ಟಾಕ್‌ಹೋಂ, ಹೆಲ್ಸಿಂಕಿ ಮತ್ತು ಓಸ್ಲೋ ನಗರಗಳಲ್ಲಿರುವ ನಗರದ ಎಲ್ಲ ಭಾಗಗಳಲ್ಲೂ ಸಂಚರಿಸುವ ಸುವ್ಯವಸ್ಥಿತ ಸಾರ್ವಜನಿಕ ಸಾರಿಗೆ ವ್ಯವಸ್ಥೆ ನನ್ನಂತಹವನಿಗೆ ಖುಷಿಕೊಡುವಂತಹದ್ದು. ಆ ಊರುಗಳಲ್ಲಿ ಎಲ್ಲಿ ಬೇಕಾದರೂ ನಡೆದಾಡಬಹುದು. ಆದರೆ ಅಮೆರಿಕಾದಲ್ಲಿ ಇದು ಸಾಧ್ಯವಿಲ್ಲ. ಸ್ವತಂತ್ರವಾಗಿ ನಡೆದು ಅಡ್ಡಾಡಲೂ ಸಾಧ್ಯವಾಗದ ಸ್ವತಂತ್ರ ದೇಶ ಅಮೆರಿಕಾ! ಈ ವಿಚಿತ್ರ ಸ್ವಾತಂತ್ರ್ಯವನ್ನು ಎಲ್ಲೆಡೆಗೂ ರವಾನಿಸುವ 'ಔದಾರ್ಯ' ಈ ದೇಶದ ಆಳುವ ವರ್ಗದ್ದು!

ಇಲ್ಲಿಗೆ ಬರುವ ಮುನ್ನ ನನ್ನ ಅನೇಕ ಗೆಳೆಯರು, ''ಏನು ಅಮೆರಿಕಾವನ್ನು ಅಷ್ಟು ಟೀಕಿಸುತ್ತಿದ್ದೋರು ಈಗ ಅಲ್ಲಿಗೇ ಹೊರಟುಬಿಟ್ಟಿದ್ದೀರಲ್ಲ!'' ಎಂದು ಹಾಸ್ಯ ಮಾಡಿದ್ದುಂಟು. ಇವರ ಮಾತನ್ನು ನಾನು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. ಏಕೆಂದರೆ ನಾನು ಭಾರತದ ವ್ಯವಸ್ಥೆಯನ್ನೂ ಕುರಿತು ಟೀಕೆ ಮಾಡುತ್ತಿರುತ್ತೇನೆ. ಹಾಗಾದರೆ ಇವರ ಪ್ರಕಾರ ನಾನು ಭಾರತದಲ್ಲೂ ಇರುವಂತಿಲ್ಲ. ''ಕಾಮ್ರೇಡ್ ಒಬಾಮಾ ಈಗ ಅಮೆರಿಕಾದ ಅಧ್ಯಕ್ಷನಾಗಿದ್ದಾನೆ. ಅಮೆರಿಕಾದ ಆರೋಗ್ಯ ಇತ್ತೀಚಿನ ದಿನಗಳಲ್ಲಿ ಹದಗೆಡುತ್ತಿದೆ. ಸ್ವಲ್ಪ ವಿಚಾರಿಸಿಕೊಂಡು ಬರುತ್ತೇನೆ'' ಎಂದು ಉತ್ತರ ಕೊಟ್ಟು ಬಾಯಿ ಮುಚ್ಚಿಸಿ ಇಲ್ಲಿಗೆ ಬಂದೆ.

ಹೌದು, ಅಮೆರಿಕಾ ತೀವ್ರ ಆರ್ಥಿಕ ಅಸ್ವಸ್ಥತೆಯಿಂದ ಬಳಲುತ್ತಿದೆ. ಬರಾಕ್ ಒಬಾಮಾ ಇದರ ಅಧ್ಯಕ್ಷನಾಗಿ ಚುನಾಯಿತನಾಗಿದ್ದಾನೆ. ಮುಕ್ತ ಮಾರುಕಟ್ಟೆ ತನ್ನ ಆರ್ಥಿಕ ವ್ಯವಸ್ಥೆಯನ್ನು ತಂತಾನೇ ರೂಪಿಸಿಕೊಳ್ಳುತ್ತದೆ, ಸರ್ಕಾರದ ಹಿಡಿತವಿರಕೂಡದು ಎಂಬ ನೀತಿಯನ್ನು ಅನುಸರಿಸುವಂತೆ ಸರ್ಕಾರದ ಮೇಲೆ ಒತ್ತಡ ಹೇರಿ, ಹೇರಳ ಲಾಭ ಹೀರಿದ ಕಾರ್ಪೊರೇಟ್ ದಾದಾಗಳು ಈ ದೇಶದ ಆರ್ಥಿಕ ವ್ಯವಸ್ಥೆಯನ್ನು ವಿನಾಶದ ಅಂಚಿಗೆ ತಂದು ನಿಲ್ಲಿಸಿದ್ದಾರೆ. ಈಗ ಈ ದಾದಾಗಳು ಸರ್ಕಾರವು ಮಧ್ಯಪ್ರವೇಶಿಸಬೇಕು ಮತ್ತು ಮಿಲಿಯಗಟ್ಟಲೆ ನೆರವು ನೀಡಬೇಕೆಂದು ಅಂಗಲಾಚುತ್ತ ಭಿಕ್ಷಾಪಾತ್ರೆ ಹಿಡಿದು ನಿಂತಿದ್ದಾರೆ. ಫ್ಯಾನಿ ಮೆ, ಫ್ರೆಡ್ಡಿ ಮ್ಯಾಕ್ ಸಂಸ್ಥೆಗಳಿಂದ ಪ್ರಾರಂಭವಾದ ಆರ್ಥಿಕ ಸುನಾಮಿ ಈಗಾಗಲೇ ಲೇಮನ್ ಬ್ರದರ್ಸ್, ಮೆರಿಲ್ ಲಿಂಚ್, ಎ.ಐ.ಜಿ., ವಾಲ್‌ಸ್ಟ್ರೀಟ್ ಬ್ಯಾಂಕ್ ಇತ್ಯಾದಿ ಬ್ಯಾಂಕು, ಹಣಕಾಸು ಸಂಸ್ಥೆಗಳು, ವಿಮಾ ಸಂಸ್ಥೆಗಳು ಕೊಚ್ಚಿಹೋಗಿ ನೆಲಸಮವಾಗಿವೆ. ಪ್ರಸಿದ್ಧ ವಾಹನ ತಯಾರಿಕಾ ಉದ್ದಿಮೆಗಳಾದ ಜನರಲ್ ಮೋಟಾರ್ಸ್, ಕ್ರೈಸ್ಲರ್ ಮತ್ತು ಫೋರ್ಡ್ ಸಂಸ್ಥೆಗಳು ಮುಳುಗುವ ಹಂತ ತಲುಪಿವೆ. ಜಿಎಂ ಮುಚ್ಚಿಯೂ ಆಯಿತು. ಇತ್ತೀಚೆಗೆ ಕ್ರೈಸ್ಲರ್ ಸಂಸ್ಥೆ ದಿವಾಳಿ ಅರ್ಜಿ ಸಲ್ಲಿಸಿದೆ. ಈ ಆರ್ಥಿಕ ಪತನ ಇನ್ನೂ ತಳ ಕಂಡಿಲ್ಲವೆಂಬುದು ಇಲ್ಲಿಯ ಜನರಿಗೆ ಆತಂಕ ತಂದಿರುವ ವಿಷಯ. ಈ ಭೀಕರ ಆರ್ಥಿಕ ಬಿಕ್ಕಟ್ಟು ೧೯೨೯-೩೩ರಲ್ಲಿ ಕಂಡಂತಹ ಆರ್ಥಿಕ ಹಿಂಜರಿತ ಮತ್ತು ಆರ್ಥಿಕ ಮುಗ್ಗಟ್ಟಿನ ಮುನ್ಸೂಚನೆಯಾಗಿದೆ ಎಂಬುದು ಹಲವಾರು ಆರ್ಥಿಕ ತಜ್ಞರ ಅಭಿಪ್ರಾಯ. ಈಗಾಗಲೇ ಅಮೆರಿಕಾ ಸೇರಿದಂತೆ,

**ಮುರಳೀಧರ್**

ಬ್ರಿಟನ್, ಫ್ರಾನ್ಸ್, ಜರ್ಮನಿ ಮತ್ತಿತರ ಯೂರೋಪಿನ ರಾಷ್ಟ್ರಗಳು ಆರ್ಥಿಕ ಹಿಂಜರಿತವನ್ನು ಅಧಿಕೃತವಾಗಿ ಒಪ್ಪಿಕೊಂಡಿವೆ. ಅಮೆರಿಕಾದ ಆರ್ಥಿಕ ಅಸ್ವಸ್ಥತೆ ಈಗ ಪ್ಲೇಗ್ ರೋಗದಂತೆ ಇಡೀ ವಿಶ್ವದ ಆರ್ಥಿಕ ವ್ಯವಸ್ಥೆಯನ್ನೇ ಅಸ್ವಸ್ಥಗೊಳಿಸಿದೆ. ಇದೊಂದು ಜಾಗತೀಕರಣದ ಮಜಲು. ಅನಾರೋಗ್ಯದ ಜಾಗತೀಕರಣ! ಇದಕ್ಕೆ ಭಾರತದ ಪ್ರಧಾನಮಂತ್ರಿ ಮನಮೋಹನ ಸಿಂಗ್‌ರ ಪರಮಾಪ್ತ ಮಿತ್ರರಾದ, ೧೨೩ – ಒಪ್ಪಂದದ ಮೂಲಕ ಭಾರತವನ್ನು ಅಂಧಕಾರದಿಂದ ಬೆಳಕಿಗೆ ತಂದ ಜಾರ್ಜ್ ಬುಷ್‌ರ ಕೊಡುಗೆ ಅಪಾರ! ಈಗ ಚೀನಾ, ಭಾರತ ಮತ್ತಿತರ ರಾಷ್ಟ್ರಗಳು ಅಮೆರಿಕಾದ ಆರೋಗ್ಯದ ಬಗ್ಗೆ ಹೆಚ್ಚು ಚಿಂತೆಗೀಡಾಗಿವೆ. ಅಮೆರಿಕಾದ ಆರ್ಥಿಕ ಆರೋಗ್ಯ ಸುಧಾರಿಸದಿದ್ದರೆ ತಮ್ಮ ಆರೋಗ್ಯ ಇನ್ನೂ ಹೆಚ್ಚು ಕೆಡುತ್ತದೆ; ಅದಕ್ಕಾಗಿ ಅಮೆರಿಕಾದ ಆರೋಗ್ಯ ಸುಧಾರಣೆಗೆ ಕೈಮೀರಿ ಸಹಾಯ ಮಾಡಬೇಕೆಂದು ಮನಮೋಹನ್ ಸಿಂಗ್ ಅವರು ದೊಡ್ಡ ಮನಸ್ಸು ಮಾಡಿ ಈ ದಿಕ್ಕಿನಲ್ಲಿ ವಿಮಾ ಕ್ಷೇತ್ರ, ಬ್ಯಾಂಕಿಂಗ್ ಕ್ಷೇತ್ರ, ಮತ್ತಿತರ ಕ್ಷೇತ್ರಗಳಲ್ಲಿ ಅಮೆರಿಕಾದ ಕಿತ್ತುಹೋದ ವಿಮಾ ಕಂಪನಿಗಳು, ಬ್ಯಾಂಕುಗಳು ಮತ್ತು ಇತರೆ ಉದ್ದಿಮೆಗಳಿಗೆ ಭಾರತದಲ್ಲಿ ಬಂಡವಾಳ ಹೂಡಲು ರಂಗಸಜ್ಜಿಕೆಯನ್ನು ಸೃಷ್ಟಿಸಿಕೊಟ್ಟಿದ್ದಾರೆ. ಉದಾರವಾದವೆಂದರೆ ಇದೇ ಅಲ್ಲವೇ!

ಅಮೆರಿಕಾ ಆರ್ಥಿಕ ಅನಾರೋಗ್ಯದಿಂದ ನರಳುತ್ತಿದೆ. ಇದು ಆ ರಾಷ್ಟ್ರದ ಜನತೆಯ ಮೇಲೆ ತೀವ್ರ ದುಷ್ಪರಿಣಾಮ ಬೀರಿದೆ. ನವಂಬರ್ ೨೦೦೮ರಿಂದ ಇಲ್ಲಿಯ ವರೆಗೆ ಸುಮಾರು ೩೦ ಲಕ್ಷ ಜನರು ಕೆಲಸ ಕಳೆದುಕೊಂಡಿದ್ದಾರೆ. ನಿರುದ್ಯೋಗವು ಶೇಕಡ ೮.೫ಕ್ಕೆ ಏರಿದೆ. ಇದು ಕಳೆದ ೨೫ ವರ್ಷಗಳಲ್ಲೇ ಕಂಡರಿಯದ ಬೆಳವಣಿಗೆ. ಪರಿಸ್ಥಿತಿ ಇನ್ನೂ ವಿಷಮಗೊಳ್ಳಲಿದೆ ಎಂಬುದು ಅನೇಕ ಆರ್ಥಿಕ ತಜ್ಞರ ಅಭಿಪ್ರಾಯ. ಕಡಿಮೆ ವೇತನವಾದರೂ ಸರಿಯೇ ಸಹಸ್ರಾರು ಜನರು ಹೊಸ ಹೊಸ ಉದ್ಯೋಗಗಳನ್ನರಸಿ ಬಹುತೇಕ ಕಂಪನಿಗಳಲ್ಲಿ ನಡೆಯುತ್ತಿರುವ ಕಥೆ. ಉದ್ಯೋಗಗಳ ನಾಶವು ಕೂಡ ಒಪ್ಪಂದಗಳ ಮೂಲಕ ನಿರ್ವಿಘ್ನವಾಗಿ ಸಾಗುತ್ತಿದೆ. ಭಾರತದಲ್ಲಿನ ಕಥೆಯೂ ಇದೇ ರೀತಿ ಸಾಗಿದೆ. ವೇತನ ಕಡಿತವು ಉದ್ಯೋಗ ನಾಶಕ್ಕಿಂತ ಮೇಲು ಎಂಬ ಅಭಿಪ್ರಾಯ ಬೆಳೆಯುತ್ತಿದೆ. ಆದರೆ ಖ್ಯಾತ ಅರ್ಥಶಾಸ್ತ್ರಜ್ಞ, ನೊಬೆಲ್ ಪ್ರಶಸ್ತಿ ವಿಜೇತ ಪಾಲ್ ಕೃಗ್‌ಮನ್ ಪ್ರಕಾರ, ''ಇಳಿಮುಖಗೊಳ್ಳುತ್ತಿರುವ ವೇತನ ರೋಗಗ್ರಸ್ತ ಆರ್ಥಿಕ ವ್ಯವಸ್ಥೆಯ ಸಂಕೇತ. ಮತ್ತು ಇಂತಹ ಸಂಕೇತಗಳು ಆರ್ಥಿಕ ವ್ಯವಸ್ಥೆಯನ್ನು ಮತ್ತಷ್ಟು ರೋಗಗ್ರಸ್ತಗೊಳಿಸುತ್ತವೆ. ಕಂಪನಿಯೊಂದರ ಕಾರ್ಮಿಕರು ತಮ್ಮ ಕೆಲಸಗಳನ್ನು ಉಳಿಸಿಕೊಳ್ಳುವ ಸಲುವಾಗಿ ವೇತನವನ್ನು ಕಡಿಮೆ ಮಾಡಿಕೊಳ್ಳಲು ಒಪ್ಪಬಹುದು. ಆದರೆ ದೇಶದಾದ್ಯಂತ ಎಲ್ಲ ಕಂಪನಿಗಳು ವೇತನ ಕಡಿಮೆ ಮಾಡಿದರೆ ಅದು ನಿರುದ್ಯೋಗವನ್ನು ಹೆಚ್ಚಿಸುತ್ತದೆ. ಇಳಿಮುಖಗೊಳ್ಳುವ ವೇತನ ಇಳಿಮುಖವಾಗುವ ಆದಾಯಕ್ಕೆ ಎಡೆಮಾಡಿಕೊಡುತ್ತದೆ; ಸಾಲದ ಹೊರೆಯನ್ನು ಹೆಚ್ಚಿಸುತ್ತದೆ ಮತ್ತು ಆರ್ಥಿಕ ಜಡತೆಗೆ ಕಾರಣವಾಗುತ್ತದೆ.'' ಇಂದು ಕಂಪನಿಯ ಮಾಲೀಕರಿಗೆ ತಾವು ಸಂಪಾದಿಸಿದ ಲಾಭದಿಂದ ಇಂದಿನ ಪರಿಸ್ಥಿತಿಯನ್ನು ತೂಗಿಸಲು ಇಷ್ಟವಿಲ್ಲ. ಎಲ್ಲ ಅನಿಷ್ಟಗಳಿಗೂ ಮೊದಲು ತಲೆಕೊಡುವವರು, ಬೆಲೆ ತೆರುವವರು ಅಮಾಯಕ ಕಾರ್ಮಿಕರು.

ಅಮೆರಿಕಾದ ಕಾರ್ಮಿಕ ವರ್ಗ ಇದರ ಬಗ್ಗೆ ಚಿಂತಿಸುವಂತೆಯೇ ಕಾಣುತ್ತಿಲ್ಲ. ಈ ದೇಶದ ಕಾರ್ಪೋರೇಟ್ ಧಣಿಗಳ ತಣಿಯದ ಲಾಭದ ದಾಹ ತಮ್ಮನ್ನು ಈ ವಿಷಮ ಪರಿಸ್ಥಿತಿಗೆ ನೂಕಿದೆ ಎಂಬ ಪರಿವೆಯೂ ಇದ್ದಂತೆ ಕಾಣುತ್ತಿಲ್ಲ. ಒಂದೊಮ್ಮೆ ಪರಿವೆ ಇದ್ದರೂ ಅವರಲ್ಲಿ ಆಕ್ರೋಶ ಹುಟ್ಟುತ್ತಿಲ್ಲ. ಮೇ ದಿನದ ಭವ್ಯ ಇತಿಹಾಸ ಹೊಂದಿರುವ ಅಮೆರಿಕಾದ ಕಾರ್ಮಿಕ ವರ್ಗ ಇಂತಹ ವಿಷಮ ಪರಿಸ್ಥಿತಿಯಲ್ಲೂ ಹೋರಾಟದಿಂದ ವಿಮುಖವಾಗಿರುವುದು ಒಂದು ದುರಂತವಲ್ಲದೆ ಮತ್ತೇನು?

**ಒಬಾಮಾ ಅಮೆರಿಕಾದ ಬಹಳಷ್ಟು ಜನರಲ್ಲಿ ಹೊಸ ಚೈತನ್ಯವನ್ನು ಮತ್ತು ಹೊಸ ಆಸೆಯ ಅಲೆಯನ್ನು ಎಬ್ಬಿಸಿರುವುದು ಎದ್ದುಕಾಣುತ್ತದೆ. ಈಗಿನ ಸಂಕಟದ ದಿನಗಳು ಕೊನೆಗೊಳ್ಳಲಿವೆ ಮತ್ತೆ ಒಳ್ಳೆಯ ದಿನಗಳು ಬರಲಿವೆ ಎಂದು ಜನ ಕಾದು ಕುಳಿತಿದ್ದಾರೆ. ಇದು ಕುಂತ ಜನಗಳ ನಿಂತ ಮನಸ್ಸಾದರೆ, ಮುಂದೊಮ್ಮೆ ಅಮೆರಿಕಾ ಹೊಸಗೀತೆ ಹಾಡಲು ಲ್ಯಾಟಿನ್ ಅಮೆರಿಕಾ ದೇಶಗಳ ಜನತೆ ಆ ಗೀತೆಯ ಸಾಲುಗಳನ್ನು ಬರೆಯಬಹುದು.**

ಕಂಗೆಡುತ್ತಿದ್ದಾರೆ. ಅಮೆರಿಕನ್ನರ ಜೀವನ ಶೈಲಿ ದುಬಾರಿಯೆಂದೆ ಹೇಳಬಹುದು. ಬಹಳಷ್ಟು ಜನರು ಆದಾಯ ಮೀರಿ ಖರ್ಚು ಮಾಡುತ್ತಾರೆ. ಹಾಗಾಗಿ ಎಲ್ಲ ವಹಿವಾಟುಗಳೂ ಸಾಲಮಯ. ಮನೆಸಾಲ, ವಾಹನ ಸಾಲ, ಬ್ಯಾಂಕ್ ಸಾಲ, ಇತ್ಯಾದಿ. ಕೆಲಸ ಕಳೆದುಕೊಂಡ ಜನರ ಪಾಡಂತೂ ಹೇಳತೀರದು. ಮನೆ ಸಾಲ ತೀರಿಸಲಾಗದೆ ಹಾಲಿ ವಾಸಮಾಡುತ್ತಿರುವ ಮನೆ ಕಳೆದುಕೊಳ್ಳುತ್ತಿದ್ದಾರೆ. ವಾಹನಗಳ ಸಾಲ ತೀರಿಸಲಾಗದೆ ವಾಹನಗಳನ್ನು ಮಾರುತ್ತಿದ್ದಾರೆ. ನಾವಿರುವ ಬಾಸ್ಟನ್ ಬಡಾವಣೆಯಲ್ಲಿ ಅನೇಕ ಮನೆಗಳ ಮುಂದೆ 'ಮಾರಾಟಕ್ಕಿದೆ' ಎಂಬ ದೊಡ್ಡ ಫಲಕಗಳನ್ನು ನೆಟ್ಟಿದ್ದಾರೆ. ಇಲ್ಲಿನ ಟೀವಿ ಚಾನೆಲ್‌ಗಳಲ್ಲಿ ಪದೇ ಪದೇ ಬರುವ ಹೆಚ್ಚಿನ ಜಾಹೀರಾತುಗಳೆಲ್ಲ ಮಾರಾಟಕ್ಕಿರುವ ಮನೆಗಳ ಬಗ್ಗೆ ಇರುತ್ತವೆ. ಇದು ಅಮೆರಿಕಾದ ಇಂದಿನ ಎಲ್ಲ ನಗರ-ಪಟ್ಟಣಗಳ ಪರಿಸ್ಥಿತಿ. ಮನೆ ಮಾರಾಟ ಮಾಡುವ ದಳ್ಳಾಳಿ ಕಂಪನಿಗಳಿಗೆ ಈಗ ಸುಗ್ಗಿ. ವ್ಯಾಪಾರ ಮಾತ್ರ ಬಹಳ ಬಿರುಸಾಗಿ ನಡೆಯುತ್ತಿದೆ.

ಇಲ್ಲಿನ 'ಬಾಸ್ಟನ್ ಗ್ಲೋಬ್' ಎಂಬ ದಿನಪತ್ರಿಕೆ ಸುಮಾರು ೧೩೭ ವರ್ಷಗಳಷ್ಟು ಹಳೆಯದು. ಸುಮಾರು ೧೫ ವರ್ಷಗಳ ಹಿಂದೆ ಟೈಮ್ಸ್ ಕಂಪನಿ ಈ ಪತ್ರಿಕೆಯನ್ನು ಖರೀದಿಸಿತು. ಇಂದಿನ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಈ ಪತ್ರಿಕೆ ಮುಚ್ಚುವ ಹಂತಕ್ಕೆ ಬಂದಿದೆ. ಬಾಸ್ಟನ್‌ಗೆ ಬಂದಾಗ ನನ್ನ ಗಮನವನ್ನು ಸೆಳೆದ ಸುದ್ದಿಯೆಂದರೆ ಈ ಪತ್ರಿಕೆಯ ಉಳಿವಿಗಾಗಿ ಆಡಳಿತ ವರ್ಗ ಮತ್ತು ಪ್ರಮುಖ ಕಾರ್ಮಿಕ ಸಂಘಟನೆಗಳ ನಡುವೆ ನಡೆಯುತ್ತಿದ್ದ (ದೀರ್ಘ) ಮಾತುಕತೆಗಳು ಪತ್ರಿಕೆಯನ್ನು ಉಳಿಸಿಕೊಳ್ಳಬೇಕೆಂದರೆ ಕಾರ್ಮಿಕ ಸಂಘವು ೨೦ ಮಿಲಿಯನ್ ಡಾಲರ್‌ಗಳಷ್ಟು ರಿಯಾಯಿತಿಯನ್ನು ಕಂಪನಿಗೆ ನೀಡಬೇಕೆಂಬುದು ಆಡಳಿತ ವರ್ಗದ ಬೇಡಿಕೆ. ಅಂದರೆ ಪತ್ರಿಕೆಯ ನೌಕರರು ತಮ್ಮ ವೇತನವನ್ನು ಕಡಿಮೆ ಮಾಡಿಕೊಳ್ಳುವುದು ಅನಿವಾರ್ಯ. ಹೆಚ್ಚು ಕಡಿಮೆ ಈ ಆಧಾರದ ಮೇಲೆ ಒಪ್ಪಂದವೊಂದಕ್ಕೆ ಬರಲಾಗಿದೆ. ಇದೇ ಬಗೆಯ ಒಪ್ಪಂದವು ಕ್ರೈಸ್ಲರ್ ಕಂಪನಿಯಲ್ಲೂ ಆಗಿದೆ.

'ಬಾಸ್ಟನ್ ಗ್ಲೋಬ್' ಬಗೆಗಿನ ವಿವರಣೆ ಒಂದು ಉದಾಹರಣೆಯಷ್ಟೆ. ಇದು

ಅಮೆರಿಕಾದ ಕಾರ್ಮಿಕ ವರ್ಗವು ಶಿಕಾಗೋನ ಹೇ ಮಾರುಕಟ್ಟೆಯ ಹೋರಾಟದ ನಂತರ ೧೮೮೬ರ ಯೂರೋಪಿನ ಸಮಾಜವಾದಿಗಳ ಪರಿಕಲ್ಪನೆಗೆ ಹೊಸ ಆಯಾಮವನ್ನು ನೀಡಿತು. ಕೈಗಾರಿಕೀಕರಣ ಹೊಂದಿದ್ದ ಬಂಡವಾಳಶಾಹೀ ವ್ಯವಸ್ಥೆಯಿದ್ದ ಇಂಗ್ಲೆಂಡ್‌ನಲ್ಲಿ ಸಮಾಜವಾದಿ ಕ್ರಾಂತಿಯು ಜರುಗುತ್ತದೆ ಎಂದು ಕಾರ್ಲ್ ಮಾರ್ಕ್ಸ್ ನಿರೀಕ್ಷಿಸಿದರು. ಆದರೆ ಅವರ ನಿರೀಕ್ಷೆ ಫಲಿಸಲಿಲ್ಲ. ಈ ವೇಳೆಗಾಗಲೇ ಅಮೆರಿಕಾದಲ್ಲಿ ಬಂಡವಾಳಶಾಹಿ ಬಲವಾಗಿ ಬೆಳೆದು, ಬೃಹತ್ ಕಾರ್ಮಿಕ ಶಕ್ತಿಯೂ ಬೆಳೆದು, ಸಮಾಜವಾದಿ ಕ್ರಾಂತಿಗೆ ಅಣಿಯಾಗುತ್ತದೆ ಎಂಬ ಅಭಿಪ್ರಾಯವನ್ನು ಅನೇಕ ಸಮಾಜವಾದಿ ಚಿಂತಕರು ವ್ಯಕ್ತಪಡಿಸತೊಡಗಿದ್ದರು. ಅಮೆರಿಕಾ ಮೊಟ್ಟಮೊದಲಿನ ಸಮಾಜವಾದಿ ದೇಶವಾಗುವುದೆಂದು ತಿಳಿದಿದ್ದರು. ಅಮೆರಿಕಾದ ಕಾರ್ಮಿಕ, ಸಮಾಜವಾದಿ ಸಮಾಜದಲ್ಲಿ ಪುನರ್ಜನ್ಮ ಪಡೆಯಲಿದ್ದಾನೆ ಎಂದು ನುಡಿದಿದ್ದರು. ಅಮೆರಿಕಾದ ಬಂಡವಾಳಶಾಹಿಗಳು ಕಾರ್ಮಿಕರನ್ನು ಅಮಾನವೀಯ ಶೋಷಣೆಗೆ ಗುರಿ ಮಾಡಿರುವುದರಿಂದ ಕಾರ್ಮಿಕ ವರ್ಗ ಬಂಡೆದ್ದು ಹೊಸ ಸಮಾಜದ ಸೃಷ್ಟಿಯತ್ತ ಸಾಗುತ್ತದೆ ಎಂದು ವ್ಯಾಖ್ಯಾನಿಸಿದ್ದರು.

ಅಮೆರಿಕಾವು ಇತಿಹಾಸದ ಮೊದಲ ಹಂತಗಳನ್ನು ಹಾದುಹೋಗದೆ, ಹೆಚ್ಚು ಕಡಿಮೆ ನೇರವಾಗಿ ಬಂಡವಾಳಶಾಹಿ ಹಂತದಲ್ಲಿ ಹುಟ್ಟಿದ ದೇಶ. ಹಾಗಾಗಿ ಅದು ಹುಟ್ಟಿನಿಂದಲೇ ಸ್ವತಂತ್ರ-ಸ್ವಚ್ಛಂದ ಸಮಾಜ. ಫ್ರೆಡ್ರಿಕ್ ಏಂಗೆಲ್ಸ್ ವಿವರಿಸಿದಂತೆ ಊಳಿಗಮಾನ್ಯ ವ್ಯವಸ್ಥೆಯ ಹಂತ ತಪ್ಪಿಸಿಕೊಂಡ ಅಮೆರಿಕಾ ಹಲವಾರು ರೀತಿಯಲ್ಲಿ ಅನುಕೂಲಕರ ಪರಿಸ್ಥಿತಿಯನ್ನು ತಲುಪಿ ಯೂರೋಪಿಗಿಂತ ವೇಗವಾಗಿ ಸಾಗುವ ಎಲ್ಲ ಸಾಧನಗಳನ್ನು ಹೊಂದಿತ್ತು. ವಿಶಾಲವಾದ ಭೂ ಪ್ರದೇಶ, ಖನಿಜ ಸಂಪತ್ತು, ನೈಸರ್ಗಿಕ ಸಂಪನ್ಮೂಲಗಳು ಒಂದೆಡೆಯಾದರೆ ಇನ್ನೊಂದೆಡೆ ದುಡಿವ ಜನರ ಅಭಾವ. ಇದು ಅಮೆರಿಕಾದ ಕಾರ್ಮಿಕನಿಗೆ ಸ್ವಲ್ಪಮಟ್ಟಿನ ಸಮಾನತೆ, ಗೌರವ, ಹೆಚ್ಚಿನ ಮಟ್ಟದ ವೇತನ, ಹೆಚ್ಚಿನ ಜೀವನಮಟ್ಟ ಎಲ್ಲವನ್ನು ದೊರಕಿಸಿಕೊಟ್ಟಿತು. ಪ್ರಪಂಚದ ಇತರೆ ದೇಶಗಳ ಕಾರ್ಮಿಕರಷ್ಟೇ ಅಮೆರಿಕಾದ ಕಾರ್ಮಿಕರು ಕೂಡ ಬಂಡವಾಳಶಾಹಿ ವ್ಯವಸ್ಥೆಯ ತೀವ್ರ

ಶೋಷಣೆಗೆ ಒಳಗಾದರೂ, ಸಮಾಜದಲ್ಲಿದ್ದ ಅವರ ಸ್ಥಾನಮಾನ ಅವರನ್ನು ತೀವ್ರವಾಗಿ ಪ್ರಚೋದಿಸಲಿಲ್ಲ ಎಂದು ಲಾರೆನ್ಸ್ ಮೂರ್ ತನ್ನ ಗ್ರಂಥ 'ಯೂರೋಪಿಯನ್ ಸೋಷಿಯಲಿಸ್ಟ್ ಅಂಡ್ ಅಮೆರಿಕನ್ ಪ್ರಾಮಿಸ್ಡ್ ಲ್ಯಾಂಡ್'ನಲ್ಲಿ ವಿಶ್ಲೇಷಿಸಿದ್ದಾನೆ. ಅದೇ ರೀತಿ ಹುಟ್ಟಿನಿಂದಲೇ ಅಮೆರಿಕಾ ಏನನ್ನೋ ಕಳೆದು ಕೊಂಡಿತು. ಈ ದೇಶ ಶೋಷಣೆಗೆ ಸ್ಪಂದಿಸುವ ಸಂವೇದನೆಯನ್ನು ಹೊಂದಲೇ ಇಲ್ಲ. ಅಮೆರಿಕಾದ ಜನತೆಗೆ ಅದರಲ್ಲೂ ಅಮೆರಿಕಾದ ಕಾರ್ಮಿಕನಿಗೆ ಸಮಾಜದ ಅಥವಾ ಸರ್ಕಾರದ ಕೇಡಿನ ಬಗ್ಗೆ ಅರಿವೆ ಇರಲಿಲ್ಲ ಎಂದು ಮೂರ್ ಅಭಿಪ್ರಾಯಪಟ್ಟಿದ್ದಾನೆ.



ಅಮೆರಿಕಾದ ಕಾರ್ಮಿಕ ವರ್ಗ ತನ್ನ ಹೋರಾಟಗಳನ್ನು ಸಮಾಜವಾದಿ ಹೋರಾಟಗಳನ್ನಾಗಿ ಪರಿವರ್ತಿಸಿದ್ದು ೧೯೦೦-೧೨ರ ಅವಧಿಯಲ್ಲಷ್ಟೆ. ಸಮಾಜವಾದಿ ಕಾರ್ಮಿಕ ಪಕ್ಷ ರಚಿಸಿ ಅಮೆರಿಕಾದ ಅಧ್ಯಕ್ಷ ಸ್ಥಾನಕ್ಕೆ ೧೯೧೨ರಲ್ಲಿ ಸಮಾಜವಾದಿ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದ ಯುಜಿನ್ ಡೆಬ್ಸ್ ಸುಮಾರು ಹತ್ತು ಲಕ್ಷ ಮತಗಳನ್ನು ಗಳಿಸಿದ್ದು, ಅಂದಿನ ದಿನಗಳ ವಿಶಿಷ್ಟ ಘಟನೆ. ನಂತರದ ಬೆಳವಣಿಗೆಗಳು ಅಷ್ಟು ಆಶಾದಾಯಕವಾಗಿರಲಿಲ್ಲ. ಸೋವಿಯತ್ ಒಕ್ಕೂಟದಲ್ಲಿ ಸ್ಟಾಲಿನ್‌ನ ಆಡಳಿತ ವೈಖರಿ ಮತ್ತು ಶೀತಲ ಸಮರ ಅನೇಕ ಪ್ರಗತಿಶೀಲರನ್ನು ಪ್ರತಿಗಾಮಿಗಳನ್ನಾಗಿ ಪರಿವರ್ತಿಸಿತು ಎಂದು ಜಾನ್ ಪಿ. ಡಿಗ್ಗಿನ್ಸ್ ತನ್ನ ಗ್ರಂಥ ''ಅಪ್ ಫ್ರಂ ಕಮ್ಯುನಿಸಂ''ದಲ್ಲಿ ವಿಶ್ಲೇಷಿಸಿದ್ದಾನೆ. ಮಾರ್ಕ್ಸ್‌ವಾದಿ ಚಿಂತಕರಾಗಿ ಬೆಳೆದ ಮಾರ್ಕ್ಸ್ ಈಸ್ಟಿಮನ್, ಜಾನ್ ಡಾಸ್ ಪ್ಯಾಸೊ, ಜೇಮ್ಸ್ ಬರ್ನ್‌ಹ್ಯಾಂ ಮತ್ತು ವಿಲ್ ಹೆರ್‌ಬರ್ಗ್ ಪ್ರತಿಗಾಮಿಗಳಾಗಿ ಪರಿವರ್ತನೆ ಹೊಂದಿ ಶೀತಲ ಸಮರವನ್ನು ಆಧ್ಯಾತ್ಮಿಕ ಆಯಾಮಕ್ಕೆ ಕೊಂಡೊಯ್ದು ಅಮೆರಿಕಾ - ಸೋವಿಯತ್ ಯೂನಿಯನ್ ನಡುವೆ ಯಾವುದೇ ರೀತಿಯ ಪರಸ್ಪರ ಹೊಂದಾಣಿಕೆಯು ಸಾಧ್ಯವಿಲ್ಲವೆಂದು ವಾದಿಸಿದ್ದರು. ಇದೇ ಜನರು ರೂಪಾಂತರಗೊಂಡ ಬಗ್ಗೆ ಜಾನ್ ಡಿಗ್ಗಿನ್ಸ್ ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾನೆ. ಮುಂದುವರೆದು ಅಮೆರಿಕಾದ ಇತಿಹಾಸವು ಯೂರೋಪ್‌ನ ಪ್ರಗತಿಶೀಲತೆಯ ಗೋರಿಯೆಂದು, ಹಾಗೆಯೆ ಅಮೆರಿಕಾ ಮಡಿವಂತಿಕೆಯ ಕ್ಯಾನ್ಸರ್ ಕೋಣೆಯೆಂದು ವಿವರಿಸಿದ್ದಾನೆ. ಒಂದು ನೂರು ವರ್ಷಕ್ಕೂ ಹಿಂದೆ ತಾಕ್ವಿಲ್ಲೆ 'ಅಮೆರಿಕಾದ ಪ್ರಜೆ ಎಂತಹ ವ್ಯಕ್ತಿಯೆಂದರೆ, ಅವನು ಎಷ್ಟರಮಟ್ಟಿಗೆ ಬದಲಾವಣೆಯನ್ನು ಬಯಸುವವನೊ ಅಷ್ಟರಮಟ್ಟಿಗೆ ಅದನ್ನು ಪ್ರತಿರೋಧಿಸುತ್ತಾನೆ. ಆರ್ಥಿಕ ಬದಲಾವಣೆಯನ್ನು ಆಶ್ಚರ್ಯಚಕಿತನಾಗಿ ನೋಡುತ್ತಲೇ ಅದರಿಂದ ಹೊಮ್ಮಬಹುದಾದ ರಾಜಕೀಯ ತೀವ್ರಗಾಮಿತ್ವದ ಬಗ್ಗೆಯೂ ಅಂಜುವವನು' ಎಂದು ಚಿತ್ರಿಸಿದ್ದಾನೆ.

ಅಮೆರಿಕಾದ ಕಾರ್ಮಿಕ ಬೆಳೆದುಬಂದ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಪರಿಸರ ಎಂತಹದ್ದಾಗಿತ್ತು, ಅದು ಹೇಗೆ ಅವನ ಪ್ರಜ್ಞೆಯನ್ನು ರೂಪಿಸಿತ್ತು ಎಂದು ವಿಶ್ಲೇಷಿಸಲು ಪೂರಕವಾದ ಸಂಕ್ಷಿಪ್ತ ವಸ್ತುವಾಗಬಹುದೆಂಬ ಉದ್ದೇಶದಿಂದ ಇಷ್ಟೆಲ್ಲಾ ಬರೆಯಬೇಕಾಯಿತು. ಲಾರೆನ್ಸ್ ಮೂರ್ ಹೇಳುವ ಹಾಗೆ ಅಮೆರಿಕಾ ಎಂಥ ಉದಾರ ದೇಶವೆಂದರೆ ಇಲ್ಲಿ ತೀವ್ರಗಾಮಿಗಳು ಕ್ರಾಂತಿ ತರಲು ಸಾಧ್ಯವಿಲ್ಲ, ಹಾಗೆಯೆ ಮಡಿವಂತರು ಯಾವುದೇ ಪರಂಪರೆಯನ್ನು ರೂಪಿಸಲೂ ಸಾಧ್ಯವಿಲ್ಲ.

ಅಮೆರಿಕಾದ ಕಾರ್ಮಿಕ ವರ್ಗ ಚಾರಿತ್ರಿಕವಾಗಿ ಹೆಚ್ಚು ಸವಲತ್ತುಗಳನ್ನು ಪಡೆದಿದೆ. ಮುಕ್ತ ಮಾರುಕಟ್ಟೆಯ ಫಲವನ್ನು ಪಡೆದಿದೆ. ಕಾರ್ಲ್ ಮಾರ್ಕ್ಸ್ ೧೮೪೮ರಲ್ಲಿ ಬ್ರಸ್ಸೆಲ್‌ನಲ್ಲಿ ಮುಕ್ತ ಮಾರುಕಟ್ಟೆಯ ಬಗ್ಗೆ ಮಾತನಾಡುತ್ತ ''ಮಾರುಕಟ್ಟೆಯ ರಕ್ಷಣಾತ್ಮಕ ವ್ಯವಸ್ಥೆ ಮಡಿವಂತಿಕೆಯಾದರೆ, ಮುಕ್ತ ಮಾರುಕಟ್ಟೆಯ ವ್ಯವಸ್ಥೆ ವಿನಾಶಕಾರಿ; ಅದು ಕಾರ್ಮಿಕ ವರ್ಗ ಮತ್ತು ಬಂಡವಾಳಿಗರ ನಡುವಿನ ಸಂಘರ್ಷವನ್ನು ತೀವ್ರ ಹಂತಕ್ಕೆ ಕೊಂಡೊಯ್ಯುತ್ತದೆ; ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಮುಕ್ತ ಮಾರುಕಟ್ಟೆ ವ್ಯವಸ್ಥೆ ಸಾಮಾಜಿಕ ಕ್ರಾಂತಿಯನ್ನು ವೇಗಗೊಳಿಸುತ್ತದೆ; ಈ ಕ್ರಾಂತಿಕಾರಿ ಅರ್ಥದಲ್ಲಿ ನಾನು ಮುಕ್ತ ಮಾರುಕಟ್ಟೆಯ ಪರವಾಗಿದ್ದೇನೆ'' ಎಂದು ಹೇಳಿದ್ದನ್ನು ಇಲ್ಲಿ ಸ್ಮರಿಸಬಹುದು. ಮುಕ್ತ ಮಾರುಕಟ್ಟೆಯ ವ್ಯವಸ್ಥೆ, ಅಮೆರಿಕಾವೂ ಸೇರಿದಂತೆ ದೇಶ-ದೇಶಗಳನ್ನು ಹೇಗೆ ಆರ್ಥಿಕ ವಿನಾಶದತ್ತ ಕೊಂಡೊಯ್ದಿದೆ ಎಂಬುದನ್ನು ಗಮನಿಸಿದರೆ ೧೬೦ ವರ್ಷಗಳ ಹಿಂದೆ ಕಾರ್ಲ್ ಮಾರ್ಕ್ಸ್ ಮಾಡಿದ ವಿಶ್ಲೇಷಣೆ ಎಷ್ಟು ನಿಖರವಾದುದು ಎಂಬುದು ಅರಿವಾಗುತ್ತದೆ.

ತನ್ನ ದೇಶದಲ್ಲಿ ನಾಶವಾಗುತ್ತಿರುವ ಉದ್ಯೋಗಗಳನ್ನು ತಡೆಗಟ್ಟಬೇಕು, ಹೊಸ ಉದ್ಯೋಗಗಳನ್ನು ಸೃಷ್ಟಿಸುವ ಯೋಜನೆಗಳನ್ನು ರೂಪಿಸಬೇಕು, ಕುಸಿದಿರುವ ಆರೋಗ್ಯ ಸೇವಾ ವ್ಯವಸ್ಥೆಯನ್ನು ಉತ್ತಮಗೊಳಿಸಬೇಕು, ನೆಲ ಕಚ್ಚಿರುವ ಉದ್ದಿಮೆಗಳನ್ನು ಪುನಶ್ಚೇತನಗೊಳಿಸಬೇಕು; ಅಂತರರಾಷ್ಟ್ರೀಯ ಸ್ತರದಲ್ಲಿ ಪಾಕಿಸ್ತಾನ, ಆಫ್ಘಾನಿಸ್ತಾನ, ಇರಾನ್, ಇರಾಕ್ ಇತ್ಯಾದಿ ದೇಶಗಳಲ್ಲಿ ಅಮೆರಿಕಾ ತಾನೇ ಸೃಷ್ಟಿಸಿಕೊಂಡಿರುವ ಸಮಸ್ಯೆಗಳಿಂದ ಹೊರಬರಬೇಕು ಎಂಬೆಲ್ಲ ಬರಾಕ್ ಒಬಾಮಾನ ಆಶಯಗಳ ಪಟ್ಟಿ ಸಾಕಷ್ಟು ದೀರ್ಘವಾಗಿದೆ. ಈ ಎಲ್ಲ ಸಮಸ್ಯೆಗಳ ಪಿತಾಮಹ, ಮುಕ್ತ ಮಾರುಕಟ್ಟೆಯ ವಕ್ತಾರ ಜಾರ್ಜ್ ಬುಷ್ ಈಗ ನಿರಾತಂಕವಾಗಿ ಜೀವನ ಸಾಗಿಸುತ್ತಿದ್ದಾನೆ.

ನಾನು ಅಮೆರಿಕಾಕ್ಕೆ ಕಾಲಿಡುವ ವೇಳೆಗೆ ಬರಾಕ್ ಒಬಾಮಾ ಅಧ್ಯಕ್ಷಗಿರಿಗೆ ನೂರು ದಿನ. ಈ ಸಂದರ್ಭದಲ್ಲಿ ಅವನ ಆಡಳಿತದ ಸಾಧನೆ - ವೈಫಲ್ಯಗಳ ಬಗ್ಗೆ ಸಾಕಷ್ಟು ಚರ್ಚೆ ನಡೆದಿತ್ತು. ದಕ್ಷಿಣ ಅಮೆರಿಕ ದೇಶಗಳ ಶೃಂಗಸಭೆಗೆ ಹೋಗಿ ಅಲ್ಲಿ ವೆನಿಜುವೆಲಾದ ಅಧ್ಯಕ್ಷ ಹ್ಯೂಗೋ ಚಾವೆಜ್, ಬೊಲಿವಿಯದ ಅಧ್ಯಕ್ಷ ಈವೊ ಮೊರಾಲೆಜ್ ಇವರ ಜೊತೆ ಒಬಾಮಾ ಕೈಕುಲುಕಿದ್ದು, ಕ್ಯೂಬಾದ ಮೇಲಿನ ಕೆಲವು ದಿಗ್ಬಂಧನಗಳನ್ನು ಸ್ವಲ್ಪಮಟ್ಟಿಗೆ ಸಡಿಲಿಸಿ ಇರಾನ್ ಬಗ್ಗೆ ಸ್ನೇಹದಿಂದ ಮಾತನಾಡುತ್ತಿರುವುದು ಇವೆಲ್ಲದರಿಂದ ರಿಪಬ್ಲಿಕನ್ ಪಕ್ಷದವರ ಕಣ್ಣು ಕೆಂಪಾಗಿದೆ. ೨೦೦೦ದ ಅಧ್ಯಕ್ಷ ಚುನಾವಣೆಯಲ್ಲಿ ರಿಪಬ್ಲಿಕನ್ ಪಕ್ಷದಿಂದ ಸೆಣಸಲು ಪ್ರಯತ್ನಿಸಿದ್ದಾತ, ಒಬಾಮಾನನ್ನು ಒಬ್ಬ ತೀವ್ರಗಾಮಿ ಕಮ್ಯುನಿಸ್ಟ್ ಎಂದು ಜರೆದು, ಅವನ ಆಳ್ವಿಕೆಯಲ್ಲಿ ಅಮೆರಿಕಾ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳಲಿದೆ, ೨೦೧೨ರಲ್ಲಿ ಅಧ್ಯಕ್ಷ ಸ್ಥಾನಕ್ಕೆ ಚುನಾವಣೆಯೇನಾದರೂ ನಡೆದರೆ ಅದು ದೇವರ ದಯೆಯೆಂದು ಕಿಡಿಕಾರಿದ್ದು ಈ ದೇಶದಲ್ಲಿ ಪ್ರಚಲಿತವಾಗಿರುವ ಜನಾಭಿಪ್ರಾಯಕ್ಕೆ ಒಂದು ನಿದರ್ಶನ.

ಒಬಾಮಾ ಅಮೆರಿಕಾದ ಬಹಳಷ್ಟು ಜನರಲ್ಲಿ ಹೊಸ ಚೈತನ್ಯವನ್ನು ಮತ್ತು ಹೊಸ ಆಸೆಯ ಅಲೆಯನ್ನು ಎಬ್ಬಿಸಿರುವುದು ಎದ್ದು ಕಾಣುತ್ತದೆ. ಈಗಿನ ಸಂಕಟದ ದಿನಗಳು ಕೊನೆಗೊಳ್ಳಲಿವೆ ಮತ್ತೆ ಒಳ್ಳೆಯ ದಿನಗಳು ಬರಲಿವೆ ಎಂದು ಜನ ಕಾದು ಕುಳಿತಿದ್ದಾರೆ. ಇದು ಕುಂತ ಜನಗಳ ಸಿಂತ ಮನಸ್ಸಾದರೆ, ಮುಂದೊಮ್ಮೆ ಅಮೆರಿಕಾ ಹೊಸ ಗೀತೆ ಹಾಡಲು ಲ್ಯಾಟಿನ್ ಅಮೆರಿಕಾ ದೇಶಗಳ ಜನತೆ ಆ ಗೀತೆಯ ಸಾಲುಗಳನ್ನು ಬರೆಯಬಹುದು.


ಮುರಳೀಧರ್
[illegible]

# ಕಾಗೆಗಳು



ಸದಾಶಿವ ಮರ್ಜಿ

ನಿನಗೆ ಇಷ್ಟವಾದ ಪಕ್ಷಿ ಯಾವುದು, ಎಂದು ಯಾರಾದರೂ ಕೇಳಿದರೆ ಥಟ್ಟನೆ 'ಕಾಗೆ' ಎಂದು ಮರುಕ್ಷಣದಲ್ಲಿಯೇ ನನ್ನ ಉತ್ತರ ಸಿದ್ಧ. ಕಾಗೆ ನನಗೆ ಅತೀ ಪ್ರಿಯವಾದ ಪಕ್ಷಿ. ನಮ್ಮ ಪ್ರಜ್ಞೆ-ಅವಸ್ಥೆಯ ಜತೆ ಜತೆಗೆ ಅನ್ಯೋನ್ಯವಾಗಿ ಬೆಸೆದುಕೊಂಡ ಹತ್ತು ಹಲವು ವಿಶೇಷವಾದವುಗಳಲ್ಲಿ ಕಾಗೆ ಕೂಡ ಒಂದು. ಮನೆಯ ಮುಂದೆ ನಾಲ್ಕೂವರೆ ದಶಕದಿಂದ ಹೆಮ್ಮರವಾಗಿ ಬೆಳೆದು ನಿಂತ ಬೇವಿನ ಮರದ ಆಯಕಟ್ಟಿನ ಸ್ಥಳದಲ್ಲಿಯೇ ಗೂಡು ಕಟ್ಟಿಕೊಂಡು ವಾಸಿಸುತ್ತಿದ್ದ ಕಾಗೆಗಳ ಬಳಗ ನನಗೆ ಅಚ್ಚುಮೆಚ್ಚು. ಕಾಗೆಯೊಂದಿಗೆ ಜಂತಿ ಮನೆಯ ಕಿಂಡಿಗಳಲ್ಲಿ ಮತ್ತು ಬಿದರಿನ ಜಂತಿಯ ಟೊಳ್ಳುಗಳಲ್ಲಿ ವಾಸಿಸುತ್ತಿದ್ದ ಚಿಟುಗುಬ್ಬಿಗಳು ನಮ್ಮ ಬದುಕಿನ ಅವಿಭಾಜ್ಯ ಅಂಗ. ಕಾಗೆ-ಗುಬ್ಬಿ ನಮ್ಮ ಬಾಲ್ಯದ ಉಲುಕೋಜಿತನಕ್ಕೆ ಜೀವಂತ ಸಾಕ್ಷಿ. ಗುಬ್ಬಿ ಹಿಡಿದು ಅವುಗಳಿಗೆ ಬಣ್ಣದ ನೀರಿನಲ್ಲಿ ಅದ್ದಿಬಿಡುವುದು, ಕಾಗೆಗೆ ಕಲ್ಲೆಸೆದು ಸತಾಯಿಸುವುದು ಇಲ್ಲವೇ ಆಗಾಗ ಕಲ್ಲು ಒಗೆದಂತೆ ಕೈ ನೆವರಿಸಿ ಅದರ ಪುಕ್ಕಲುತನವನ್ನು ನೋಡಿ ಗೇಲಿ ಮಾಡುವುದು ರೂಢಿ. ಕಾಗೆ ಸ್ವಭಾವತಃ ಪುಕ್ಕಲು ಪಕ್ಷಿ.

ಕಾಗೆ ಅತೀ ಸುಂದರವಾದ ಪಕ್ಷಿ. ಕಪ್ಪಾದ ಮಿರಮಿರನೆ ಮಿಂಚುವ ಚುಂಚು. ಕಪ್ಪು ಕತ್ತು. ಅದಕ್ಕೆ ಹೊಂದಿಕೊಂಡಂತೆ ಬೂದಿ ಬಣ್ಣ. ಕರ್ರನೆಯ ಕಪ್ಪು ಬಣ್ಣ ಬಳಿದಂತ ಕಾಲುಗಳು. ಚಕಮಕ ಹೊಳೆಯುವ ಕಣ್ಣುಗಳು. ಕೆಲವು ಸಂಪೂರ್ಣ ಕಪ್ಪು ಬಣ್ಣದ ಕಾಗೆಗಳೂ ಇರುತ್ತಿದ್ದವು. ಅವು ನಮ್ಮ ಆಕರ್ಷಣೆಯ ಕೇಂದ್ರ ಬಿಂದುವಾಗುತ್ತಿದ್ದವು. ಕಾಗಕ್ಕ-ಗುಬ್ಬಕ್ಕನ ಜಾನಪದ ಕತೆಯನ್ನು ಅಜ್ಜಿ-ಅವ್ವ ಆಗಾಗ ಹೇಳುತ್ತಿದ್ದುದು, ಈ ಎರಡೂ ಪಕ್ಷಿಗಳ ಬಗ್ಗೆ ವಿಶೇಷ ಆಸಕ್ತಿ ನಮ್ಮಲ್ಲಿ ಮೂಡಿಸುವಂತೆ ಮಾಡಿರುತ್ತಿದ್ದುದು ವಾಸ್ತವ. ಜನಪದದ ಬದುಕಿನೊಂದಿಗೆ ಅವಿನಾಭಾವ ಸಂಬಂಧ ಹೊಂದಿದ್ದ ಪಕ್ಷಿಗಳಲ್ಲಿ ಕಾಗೆ-ಗುಬ್ಬಿ ಪ್ರಮುಖವಾದವುಗಳು. ಕಾಗೆಗೂ ಒಂದು ಸಾಂಸ್ಕೃತಿಕ ಅಸ್ತಿತ್ವ ತಂದುಕೊಡುವ ರೀತಿಯಲ್ಲಿ ಜಾನಪದದ ವಿವಿಧ ಪ್ರಕಾರಗಳಲ್ಲಿ ಅದು ಬಿಂಬಿತವಾಗಿರುವುದು.

ಕಪ್ಪು ಸುಂದರವಾದುದು ಅಂತ ಯಾರಾದರೂ ಹೇಳಿದರೆ ನಾನು ಥಟ್ಟನೆ ಆ ಹೇಳಿಕೆಯನ್ನು ಯಾವ ಮುಲಾಜು ಮೊರವತ್ತು, ಅಳುಕು-ಅಂಜಿಕೆ ಇಲ್ಲದೆ ಎಂಡೋರ್ಸ್ ಮಾಡುತ್ತೇನೆ. ಕಾಗೆಯ ಬಗ್ಗೆ ಈ ಹೇಳಿಕೆ ಎಷ್ಟು ಸತ್ಯ! ಮಿರಮಿರನೆ ಮಿಂಚುವ ಕಡು ಕಪ್ಪು, ಕಪ್ಪು, ಕಿಗಪ್ಪು, ಬೂದಿಬಣ್ಣಗಳ ಮಿಶ್ರಣದಂತಿರುವ ಕಾಗೆ ಕಣ್ಣಿಗೆ ಒಪ್ಪುವಂತಹ ಸುಂದರ ಸೃಷ್ಟಿ.

ಕಪ್ಪು ಬಣ್ಣ ನನಗೆ ಪ್ರಿಯವಾದುದು. ಯಾಕೆಂದರೆ ನಾನು ಕಪ್ಪು. ನನ್ನ ತೊಳಲಾಟದ ಬದುಕು ಕಪ್ಪು. ಬೆಳಕಿದ್ದರೂ ಕತ್ತಲೆಗೆ ಮೈಯ್ಯೊಡ್ಡಿ ನಿಂತಂತಹ ಕಡುಕಪ್ಪಿನಿಂದ ಕೂಡಿದ ಹೊಲಗೇರಿ ಬದುಕು ಕಪ್ಪು. ಕಾಗೆ ಕಪ್ಪು ಆಗಿರುವುದೇ ಕಾಕತಾಳೀಯವೆಂಬಂತೆ ಹೊಲಗೇರಿ ಸುತ್ತಮುತ್ತೆಲ್ಲಾ ಕಾಗೆ-ಹದ್ದುಗಳ ಹಾರಾಟ, ಬೀದಿ ನಾಯಿಗಳ ಜಂಜಾಟ. ಬಯಲು ಸೀಮೆಯ ಟಿಪಿಕಲ್ ಆದಂತಹ ಸಣ್ಣ ಊರು. ನೀವು ನೋಡುವುದೇ ತಡ ಅಲ್ಲಿರುವ ಕಾಗೆ-ಹದ್ದುಗಳ ಸದ್ದಿನಿಂದಲೇ ಇದು ಹೊಲಗೇರಿ ಅಂದುಕೊಂಡುಬಿಡುತ್ತೀರಿ. ಕೇರಿಯ ಸುತ್ತಮುತ್ತ ಚರ್ಮ ತೆಗೆದು ಬಿಸಾಕಿದ ಸತ್ತ ದನಗಳ ಮಾಂಸಕ್ಕಾಗಿ ಕಚ್ಚಾಡುವ ನಾಯಿಗಳು. ತಮಗೆ ಅವಕಾಶ ಸಿಕ್ಕೊಡನೆ ಭರ್ರನೆ ಕೆಳಗಿಳಿದು ಕೊಕ್ಕಿನಿಂದ ಕುಕ್ಕಿಕುಕ್ಕಿ ಹೆಕ್ಕಿ ತೆಗೆದ ಮಾಂಸದ ತುಂಡುಗಳೊಂದಿಗೆ ಮೇಲೆ ಹಾರುವ ಹದ್ದು-ಕಾಗೆಗಳ ಒಂದು ದಂಡೇ ಕೇರಿಯ ಎಲ್ಲ ಗಿಡ-ಮರಗಳ ಮೇಲೆ ರಾರಾಜಿಸುತ್ತಿರುತ್ತವೆ. ಅಲ್ಲಲ್ಲಿ ಬಿದ್ದ ಮೂಳೆಗಳು ಮತ್ತು ಅರೆಬರೆ ಮಾಂಸ ಉಳಿದುಕೊಂಡು ತಿಪ್ಪೆಗಳಲ್ಲಿ ಬಿದ್ದಿರುವ ಸತ್ತ ದನದ ಕಳೇಬರಗಳು, ಕಾಗೆಗಳು ಕೇರಿಯ ಸುತ್ತಲೆಲ್ಲಾ ಗಿರಿಕಿ ಹೊಡೆಯುವಂತೆ ಮಾಡುತ್ತಿರುವುದು ಪ್ರತಿಯೊಂದು ಕೇರಿಯ ಸಾಮಾನ್ಯ ದೃಶ್ಯ.

ಸಂಸ್ಕೃತಿ-ಸಂಸ್ಕೃತಿಗಳ ನಡುವೆ ಸಂಘರ್ಷಕ್ಕೆ ನಾಂದಿಯಾಗಬಲ್ಲ ಕಪ್ಪು-ಬಿಳುಪು ಬಣ್ಣಗಳ ಪೈಪೋಟಿಯಲ್ಲಿ ಕಪ್ಪು ಬಣ್ಣಕ್ಕೆ ಸಿಗಬೇಕಾದ ಮಾನ್ಯತೆ, ಸಾಮಾಜಿಕ ಸಮ್ಮತಿಯ ಸಂಕೇತದಂತಿರುವ ಕಾಗೆ ಮಾತ್ರ ನನಗೆ ಸ್ವಾಭಿಮಾನದ ಸಂಕೇತದಂತೆ ಕಾಣುತ್ತದೆ. ಕಾಗೆ ಸ್ವಭಾವದಲ್ಲಿ ಪುಕ್ಕಲಿರುವುದೇ ಪ್ರಪಂಚದಾದ್ಯಂತ ಸಾಮಾಜಿಕ ಅಸಮಾನತೆಯ ಆಯಾಮಕ್ಕೆ ಸಿಲುಕಿದ ಕಪ್ಪು ಜನರ ಬದುಕಿಗೆ ಸಾಕ್ಷಿಯೇ ? ಕಾಲ ನಿರ್ಣಯಿಸಬೇಕು.

ನಾವು ಚಿಕ್ಕವರಿದ್ದಾಗ ಪುಕ್ಕಲ ಸ್ವಭಾವದ ಕಾಗೆಗಳ ಕಂಡರೆ ನಡ ಬಗ್ಗಿಸಿ ಕೈಯಲ್ಲಿ ಹರಳು ತೆಗೆದುಕೊಂಡಂತೆ ಮಾಡಿ ಮೇಲಕ್ಕೇಳುವುದೇ ತಡ ಪುರ್ರಂತ ಹಾರಿ ಹೋಗುತ್ತಿದ್ದವು. ಕಾಗೆಗಳು ಒಂದೊಂದು ಬಾರಿ ಕಾಳಗದಲ್ಲಿ ನಿರತವಾಗಿರುತ್ತಿದ್ದವು. ಕಾಗೆಗಳು ಪರಸ್ಪರ ಜಗಳಾಡುವಾಗ ಅವುಗಳ ಚುಂಚಿನಿಂದ ಬೆಂಕಿ ಉದುರುವುದೆಂದು, ಅದನ್ನು ನೋಡಿದರೆ ಕೆಡುಕುಂಟಾಗುವುದೆಂದು ಹಿರಿಯರು ಹೇಳುತ್ತಿದ್ದರು. ಅದರ ಪರಿಣಾಮ ಕಾಗೆ ಜಗಳವಾಡುವ ದೃಶ್ಯ ನೋಡುವ ಧೈರ್ಯವೇ ನಮಗಿರುತ್ತಿರಲಿಲ್ಲ.

ಮೈಯಲ್ಲಿ ಉಡುದಾರವಿರದಿದ್ದರೆ ನೆತ್ತಿ ಕುಕ್ಕುವ ಕಾಗೆಗಳಿವೆ ಎಂದು ಅವ್ವ ಆಗಾಗ ಹೇಳುತ್ತಿದ್ದುದು, ಕಾಗೆಯಿಂದ ತಪ್ಪಿಸಿಕೊಳ್ಳಲು ಉಡುದಾರ ಕಟ್ಟಿಸಿಕೊಳ್ಳುತ್ತಿದ್ದ ನೆನಪು. ಬೇಸಿಗೆ ಬಂದರೆ ಇಡೀ ಕೇರಿಯ ಹೆಂಗಸರೆಲ್ಲ ಸೇರಿ ಶ್ಯಾವಿಗೆ ಹೊಸೆಯುತ್ತಿದ್ದುದುಂಟು. ಶ್ಯಾವಿಗೆ ಮಣೆ, ಬಿದಿರು ಪುಟ್ಟಿ ಸಿದ್ಧಗೊಳಿಸಿ ಶ್ಯಾವಿಗೆ ಹೊಸೆದು ಬಿಸಲಿಗೆ ಒಣಹಾಕುವುದು ರೂಢಿ. ಅಂಥ ಸಂದರ್ಭದಲ್ಲಿ ಕಾಗೆಗಳು ಶ್ಯಾವಿಗೆಗೆ ಬಾಯಿ ಹಾಕಿ ತಿನ್ನದಂತೆ ಕಾಯುವುದು ಹರಸಾಹಸ. ಕಾಗೆ ಕಾಯುವ ಕೆಲಸವನ್ನು ಚಿಕ್ಕ ಮಕ್ಕಳು ನಿರ್ವಹಿಸುತ್ತಿದ್ದರು.

ಆಗಾಗ ನಾನು ಶ್ಯಾವಿಗೆ ಕಾಯುತ್ತಿದ್ದೆ. ಎಷ್ಟು ಎಚ್ಚರದಿಂದಿದ್ದರೂ ಕಣ್ಣಾಟ್ಟು



ಮಾಡಿದಂತೆ ಪುರ್‍ರನೆ ಎರಗಿ ಚುಂಚಿನಲ್ಲಿ ಶಾವಿಗೆ ಎಳೆ ಸಿಕ್ಕಿಸಿಕೊಂಡು ಹಾರಿಬಿಡುತ್ತಿದ್ದ ಕಾಗೆಯ ಶ್ಯಾವಿಗೆ ಪ್ರಸಂಗ ಬೆನ್ನ ಮೇಲೆ ಅಜ್ಜಿ ಗುದಕೆಯಲ್ಲಿ ಪರ್ಯವಸಾನಗೊಳ್ಳುತ್ತಿದ್ದುದು ನೆನಪು.

'ಒಂದಗುಳ ಕಂಡರೆ ಕಾಗೆ ಕರೆಯುವುದು ತನ್ನ ಬಳಗವನ್ನು' ಎನ್ನುತ್ತದೆ ಗಾದೆ. ಅದಕ್ಕೆ ವ್ಯತಿರಿಕ್ತವಾಗಿ ಜಿಪುಣನಾದವನಿಗೆ ಕಾಗೆಯಂತಿರುವೆ ಎಂದು ಹೀಯಾಳಿಸುವುದು, 'ಮುಸುರೆ ಕೈಯಿಂದ ಕಾಗೆ ಓಡಿಸಲಾರದವ' ಎನ್ನುವುದು ಜಿಪುಣರ ಬಣ್ಣಿಸುವುದಕ್ಕೆ ಬಳಸುವ ಮಾತು. ಕಾಗೆ ಸ್ವಭಾವತಃ ಸಂಘಜೀವಿ. ಅದು ಜನವಸತಿ ಇರುವೆಡೆ ಮಾತ್ರ ಕಾಣುವ ಪಕ್ಷಿ. ಏನಾದರೂ ತಿನ್ನುವ ಪದಾರ್ಥ ಕಂಡರೆ ಕಾಕಾ ಕಾಕಾ ಎಂದು ತನ್ನ ಗೊರಲು ಧ್ವನಿಯಿಂದ ತನ್ನ ಬಳಗವನ್ನು ಕರೆಯುವುದು ನಮ್ಮಂಥ ಸ್ವಾರ್ಥಿಗಳನ್ನು ಅಣಕಿಸುವುದಕ್ಕಾಗಿ ಇರಬಹುದೇನೋ ಎಂದು ನನಗನ್ನಿಸುತ್ತದೆ.

ಧಾರವಾಡದಲ್ಲಿ ಬಹಳ ದಿವಸದಿಂದ ಕಾಗೆಯನ್ನೇ ನೋಡಿರಲಿಲ್ಲ. ಒಂದು ದಿವಸ ಅಚಾನಕ ಅರ್ಧಂಬರ್ಧ ಕಟ್ಟುವ ಹಂತದಲ್ಲಿದ್ದ ಬಿಲ್ಡಿಂಗ್‌ನಲ್ಲಿ ಎರಡು ಕಾಗೆಗಳು ಅತ್ತಿಂದಿತ್ತ ಇತ್ತಿಂದತ್ತ ಹಾರಾಡುತ್ತಿದ್ದುದು ಕಂಡಿತು. ಹತ್ತಿರ ಹೋಗಿ ನೋಡಿದೆ. ಬೈಂಡಿಂಗ್ ವಾಯರ್ ತುಕಡಿಗಳನ್ನು ತಮ್ಮ ಚುಂಚುಗಳಲ್ಲಿ ಹೆಕ್ಕಿ ಒಯ್ಯುತ್ತಿದ್ದವು. ಕುತೂಹಲ ತಡೆಯದೇ ಅವು ಹೋದ ದಿಕ್ಕಿನಲ್ಲಿ ಹೋದೆ. ಅಲ್ಲಿ ಬೇವಿನಮರದ 'ವಿ' (V) ಆಕಾರದ ಟೊಂಗೆಯಲ್ಲಿ ಬಚ್ಚು ಕಟ್ಟುತ್ತಿದ್ದವು. ಬಚ್ಚಿಗೆ ಬೇಕಾದ ಕಡ್ಡಿ, ಮುಳ್ಳುಕಡ್ಡಿ, ಕಟ್ಟಿಗೆ ಚೂರು-ತುಣುಕು ಸಂಗ್ರಹಿಸುತ್ತಿದ್ದವು.

ಕಾಗೆ ಒಂದು ರೀತಿಯಲ್ಲಿ ನಿಪುಣ ಶಿಲ್ಪಿ. ತನ್ನ ಬಚ್ಚು ತಾನೇ ನಿರ್ಮಿಸಿಕೊಳ್ಳುವ ತಂತ್ರಗಾರ. ಸಂತಾನೋತ್ಪತ್ತಿಯ ಆರಂಭಿಕ ಹಂತದಲ್ಲಿ ಬಚ್ಚು ನಿರ್ಮಿಸಿಕೊಳ್ಳುವ ಕಾಗೆಗಳು ತಾವಿಡುವ ತತ್ತಿ ಸುರಕ್ಷಿತವಾಗಿರುವಂತೆ ಮತ್ತು ಮರಿಗಳು ವೈರಿಗಳ ದಾಳಿಯಿಂದ ಪಾರಾಗುವಂತೆ ಎಲ್ಲ ಮುನ್ನೆಚ್ಚರಿಕೆ ಕ್ರಮಗಳನ್ನು ಕೈಗೊಳ್ಳುತ್ತವೆ. ಕುತೂಹಲಕ್ಕೆ ಬಚ್ಚುಗಳ ರಚನೆಯನ್ನು ನಾನು ನೋಡಿದ್ದುಂಟು. ಮರದ ತುತ್ತತುದಿಯಲ್ಲಿ 'ವಿ' (V) ಆಕಾರವಿರುವ ಟೊಂಗೆ ಆರಿಸಿಕೊಳ್ಳುವ ಅದು ಭಾರಿ ಬಿರುಗಾಳಿ ಬಂದರೂ ಬಚ್ಚು ಕೆಡದಂತೆ, ಬೀಳದಂತೆ ಎಚ್ಚರಿಕೆ ವಹಿಸುತ್ತದೆ. ಬಚ್ಚಿನ ಮೊದಲನೆಯ ಪದರಿನಲ್ಲಿ ದೊಡ್ಡ ದೊಡ್ಡ ಮುಳ್ಳಿನ ಕಂಟಿ-ಜಾಲಿ ಅಥವಾ ಪೀಕಜಾಲಿಗಳನ್ನು ಒಂದರ ಮೇಲೊಂದು ಪೇರಿಸಿಟ್ಟಿರುತ್ತದೆ. ಅದು ಬುನಾದಿ ಇದ್ದಂತೆ. 'ವಿ' (V) ಆಕಾರದ ಎರಡು ಟೊಂಗೆಗಳನ್ನು ಜೋಡಿಸುವ ಸೇತುವೆ ಕೆಲಸ ಮಾಡುತ್ತದೆ. ಎರಡನೇ ಪದರಿನಲ್ಲಿ ಸಣ್ಣ ಸಣ್ಣ ಮುಳ್ಳಿನ ಕಂಟಿಯ ತುಕಡಿಗಳನ್ನು ಒಂದಕ್ಕೊಂದು ಅಡ್ಡಡ್ಡಲಾಗಿ ಜೋಡಿಸಿ ಬಚ್ಚು ಗಾಳಿಗೂ ಮಿಸುಕಾಡದಂತೆ ಭದ್ರಗೊಳಿಸುತ್ತವೆ. ಮೂರನೇ ಪದರಿನಲ್ಲಿ ವಿವಿಧ ಜಾತಿಯ ಬಳ್ಳಿ ಮತ್ತು ಮರದ ತುಣುಕುಗಳು. ನಂತರದ್ದು ಅದರ ವಿಲಾಸಿ ಮೆತ್ತನೆಯ ಹಾಸಿಗೆಯ ಹಂದರ; ಅದೇ ನಾಲ್ಕನೇ ಹಂತ. ಮಧ್ಯಭಾಗದಲ್ಲಿ ಮೆತ್ತಗಿರುವ ವಿವಿಧ ಜಾತಿಯ ಹುಲ್ಲಿನ ಗರಿಗಳನ್ನು ತಂದು ತನ್ನ ಚುಂಚಿನಿಂದ ಕುಸುರಿ ಕೆಲಸ ಮಾಡುತ್ತದೆ. ಪ್ರತಿ ಕಡ್ಡಿಯನ್ನು ಹುಲ್ಲಿನ ಗರಿಯಿಂದ ಬಿಗಿಯುತ್ತಾ ಅದರ ಮೇಲೆ ಹುಲ್ಲಿನ ಹಾಸಿಗೆ ತಯಾರಿಸುತ್ತದೆ. ಬಚ್ಚಿನ ತೀರಾ ಕೆಳಗಿರುವುದೇ ಕಾಗೆಯ ಬೆಚ್ಚಗಿನ ಶಯ್ಯಾಗೃಹ. ಅದರಲ್ಲಿ ಹಕ್ಕಿಗಳ ಪುಕ್ಕ, ನವಿರಾದ ಹುಲ್ಲುಕಡ್ಡಿಗಳು, ಮೆದುವಾದ ತುಪ್ಪಳಿನ ತುಣುಕುಗಳು. ಒಂದು ರೀತಿಯಲ್ಲಿ ಅದೊಂದು ನವಿರು ನವಿರಾದ ಮೆತ್ತಗಿನ, ಬೆಚ್ಚನೆಯ ಕಾವು ನೀಡುವ ತಾಣ, ಕಾಗೆಗಳ ಸಂತಾನಾಭಿವೃದ್ಧಿಯ ಸೋಪಾನ.

ಗೂಡು ಸಿದ್ಧವಾದೊಡನೆ ತತ್ತಿಹಾಕಿ, ಅವುಗಳಿಗೆ ಕಾವು ಕೊಟ್ಟು, ವೈರಿಗಳು ಅವುಗಳನ್ನು ನಾಶಗೊಳಿಸದಂತೆ ಕಟ್ಟೆಚ್ಚರವಹಿಸಿ ಕೊನೆಗೆ ಮರಿಗಳು ಕಣ್ಣುಬಿಟ್ಟಾಗ ಕಾಗೆಗಳಿಗೊಂದು ಸಂಭ್ರಮ. ಆಗ ಅವು ರೆಕ್ಕೆಪುಕ್ಕ ಗರಿಗೆದರಿಕೊಂಡು ಅಕ್ಕರೆಯಿಂದ ಬಾಯಿಯಲ್ಲಿ ಹೆಕ್ಕಿ ತಂದ ಕಾಳು-ಹುಳಹುಪ್ಪಡಿ ಕಂದಮ್ಮಗಳ ಬಾಯಿಯಲ್ಲಿ ಹಾಕಿ ಉಣಬಡಿಸುವ ದೃಶ್ಯ ಅನನ್ಯ. ಕಣ್ತೆರೆದ ಮರಿಗಳಿಗೆ ಮೊದಲೆರಡು ವಾರ ವೈರಿಗಳಿಂದ ರಕ್ಷಣೆ ಕೊಡುವ ಜವಾಬ್ದಾರಿ. ಗಂಡು-ಹೆಣ್ಣು ಕಾಗೆಗಳ ನಡುವೆ ಮರಿಗಳನ್ನು ರಕ್ಷಿಸುವ ಕಾರ್ಯದಲ್ಲಿ ಮುತುವರ್ಜಿ. ಗಂಡಿಲ್ಲದಿದ್ದರೆ ಹೆಣ್ಣು, ಅದಿಲ್ಲದಿದ್ದರೆ ಇದು ಬಚ್ಚು ಕಾಪಾಡುವ ರೀತಿ ಒಂದೆಡೆಯಾದರೆ ಎರಡೂ ಬಿಡುವು ಇದ್ದಾಗ ಕಾಳು-ಕಡಿ, ಹುಳ-ಹುಪ್ಪಡಿ ಹೆಕ್ಕಿ ತಂದು ಎಲ್ಲ ಮರಿಗಳಿಗೂ ಉಣಬಡಿಸುತ್ತವೆ.

ರೆಕ್ಕೆಪುಕ್ಕ ಬಲಿತ ಮರಿ ಟೊಂಗೆಯಿಂದ ಟೊಂಗೆಗೆ ಹಾರುವುದನ್ನು ಕಲಿಸುವ ಕಾಗೆಗಳು ಅದು ಮುಗ್ಗರಿಸುತ್ತಾ, ತೆವಳುತ್ತಾ ಹಾರುವುದನ್ನು ನೋಡುತ್ತಾ ಸಂಭ್ರಮಿಸುತ್ತವೆ. ಕೆಲವು ಮರಿ ಕಾಗೆಗಳು ರೆಕ್ಕೆಪುಕ್ಕ ಬಲಿಯಲಾರದ್ದರಿಂದ ದೂರ ಹಾರಲಾಗದೇ ನಡು ನಡುವೆ ಧೊಪ್ಪನೆ ನೆಲಕ್ಕಪ್ಪಳಿಸುವ, ಮತ್ತೆ ಮೇಲೆದ್ದು ಹಾರಲು ಪ್ರಯತ್ನಿಸುವ ರೀತಿ ಬದುಕಿನ ನಿರಂತರತೆಯನ್ನು ನೆನಪಿಗೆ ತರುತ್ತವೆ. ಹೀಗೆ ಹಾರಲು ಕಲಿಯುವಾಗ ನೆಲದ ಮೇಲೆ ಬಿದ್ದದ್ದಾಗಲಿ, ಟೆಲಿಫೋನ್ ತಂತಿಗೆ ಸಿಕ್ಕಿಹಾಕಿಕೊಂಡದ್ದಾಗಲಿ, ಕರೆಂಟಿನ ಕಂಬಕ್ಕೆ ಸಿಕ್ಕ ಮರಿ ಕಾಗೆ ಎಷ್ಟೋ ಸಾರಿ ತುಂಟ ಹುಡುಗರ ತುಂಟಾಟದ ವಸ್ತುವಾಗಿ ಅವರು ಕೊಡುವ ಕಾಟ ತಡೆಯಲಾಗದೇ ಸತ್ತುಹೋದದ್ದುಂಟು. ಸತ್ತ ಮರಿಯ ಕಳೇಬರ ನೋಡಿದ ಕಾಗೆಗಳು ವಿಚಿತ್ರವಾದ ರೀತಿಯಲ್ಲಿ ಒದರುತ್ತಾ ಕಳೇಬರದ ಸಮೀಪ ಬರುತ್ತಾ, ಮೇಲೆ ಹಾರುತ್ತಾ ತಮ್ಮ ದುಃಖ ತೋಡಿಕೊಳ್ಳುತ್ತವೆ. ಅವು ಒದರುವ ತೀವ್ರತೆ ಯಾರಾದರೂ ಆಪ್ತರು ತೀರಿಕೊಂಡಾಗ ಎದೆ ಬಡಿದುಕೊಂಡು ಅಳುವವರನ್ನು ನೆನಪಿಗೆ ತರುತ್ತದೆ. ಆ ಪ್ರದೇಶದಲ್ಲಿ ಎಲ್ಲ ಕಾಗೆಗಳು ಆ ಕಳೇಬರವಿರುವವರೆಗೆ ಅದರ ಮೇಲೆ ಹಾರಾಡುತ್ತಾ ತಮ್ಮ ಶೋಕ ವ್ಯಕ್ತಪಡಿಸುತ್ತವೆ.

ನಮ್ಮ ಬದುಕನ್ನು ಗಾಢವಾಗಿ ಆವರಿಸಿಕೊಂಡಿರುವ ಹತ್ತು ಹಲವು ಪಕ್ಷಿ - ಪ್ರಾಣಿಗಳಲ್ಲಿ ಕಾಗೆ ಕೂಡ ಒಂದು. ಹಿಂದೂ ಕ್ರಿಯಾ ವಿಧಿಗಳಲ್ಲಿ ಅತ್ಯಂತ ಮಹತ್ವದ ಸ್ಥಾನ ಕಾಗೆಗಳು ಪಡೆದಿವೆ. ಅವು ಇಲ್ಲದಿದ್ದರೆ ಪಿಂಡ ಪ್ರಾಪ್ತಿಯೂ ಇಲ್ಲ, ಮೋಕ್ಷ ಪ್ರಾಪ್ತಿಯೂ ಇಲ್ಲ. ಅಂತ್ಯ ಸಂಸ್ಕಾರವಾದ ಮೂರನೇ ದಿವಸ ಪಿಂಡ ಹಾಕುವುದುಂಟು. ಆ ದಿವಸ ಮುಂಜಾನೆ ನೀಟಾಗಿ ಒಂದು ಮಡಿಕೆ, ಕುಡಿಕೆ ಅಥವಾ ಮಣ್ಣಿನ



ಪರ್ಯಾಣದಲ್ಲಿ ಪಿಂಡ ಹಾಕಲು ಅನ್ನ ತೆಗೆದುಕೊಂಡು ಹೋಗಿ ಸಮಾಧಿ ಹತ್ತಿರ ಇಟ್ಟು ಸಂಬಂಧಿಕರೆಲ್ಲರೂ ಅಲ್ಲಲ್ಲಿ ಕುಳಿತುಕೊಳ್ಳುವುದುಂಟು. ಆಗಲೇ ಕಾಗೆಯ ಮಹತ್ವ ತಿಳಿಯುವುದು. ಆಹಾರ ಕಂಡೊಡನೆ ಸರ್‍ರನೆ ಕೆಳಕ್ಕೆರಗಿ ಚುಂಚಿನಲ್ಲಿ ಥಟ್ಟನೆ ಎತ್ತಿಕೊಂಡು ಹೋಗುವ ಕಾಗೆಗಳು ಒಮ್ಮೊಮ್ಮೆ ಪಿಂಡದ ಹತ್ತಿರ ಬರುವುದು, ಮೇಲೆ ಹಾರುವುದು, ಮತ್ತೆ ಮರೆಯಾಗುವ ಕಾರಣದಿಂದ ಸಂಬಂಧಿಕರ ಮನಶ್ಶಾಂತಿ ಕಲಕುವುದು ಸಾಮಾನ್ಯ.

ಎಷ್ಟೋ ಬಾರಿ ಎರಡು-ಮೂರು ದಿವಸವಾದರೂ ಪಿಂಡವನ್ನು ಕಾಗೆಗಳು ಮುಟ್ಟದೇ ಇದ್ದುದರಿಂದ ತೀರಿಕೊಂಡವನ ಬಂಧುವರ್ಗವೆಲ್ಲಾ ಇಲ್ಲದ ಮಾತುಕತೆಯಲ್ಲಿ ತೊಡಗಿದ ಉದಾಹರಣೆಗಳಿವೆ. ಮೃತನಿಗೆ ಇನ್ನೂ ಬದುಕುವ ಆಸೆ ಇತ್ತು, ಚಿಕ್ಕಮಗಳ ಮದುವೆ ನೋಡುವ ಇಚ್ಛೆ ಇತ್ತು ಎಂಬಂತಹ ಮನಸ್ಸಿಗೆ ಹೊಳೆಯುವ ಎಲ್ಲೆ ಮೀರಿದ ನಾನಾ ವಿಷಯಗಳನ್ನು ಸಂಬಂಧಿಕರು ಕಲ್ಪಿಸಿಕೊಂಡು ತೊಳಲಾಡುವುದು ಕಾಗೆಯ ದೆಸೆಯಿಂದಲೇ. ಎಷ್ಟೋ ಸಾರಿ ಬೇಗ ಪಿಂಡವನ್ನು ಕಾಗೆಗಳು ಸ್ವೀಕರಿಸದಿದ್ದರೆ ಸತ್ತವನ ಜನ್ಮ ಜಾಲಾಡಿ ಅವನು ಮಾಡುತ್ತಿದ್ದ ಎಲ್ಲ ದುರ್ಗುಣಗಳನ್ನು ಲೇವಡಿ ಮಾಡುವ ಸಂಬಂಧಿಕರು ಆತನಿಗಿದ್ದ ಬದುಕುವ ಆಸೆಗಳನ್ನು ಹಳಿಯುವುದುಂಟು. ಕೆಲವು ಬಾರಿ ಪಿಂಡ ಇಟ್ಟ ತಕ್ಷಣ ಕಾಗೆಗಳು ಥಟ್ಟನೆ ಪ್ರತ್ಯಕ್ಷಗೊಂಡು ಪಿಂಡ ಸೇವಿಸಿದ ಉದಾಹರಣೆಗಳೂ ಸಾಕಷ್ಟಿವೆ. ಆಗ ಪಿಂಡ ಹಾಕಲು ಬಂದವರು ಆತ್ಮ ಸಂತೃಪ್ತಿಯಿಂದ ಹಿಂತಿರುಗುವುದು ಇದೆ. ಕಾಂಕ್ರೀಟ್ ಕಾಡಾದ ನಗರಗಳಲ್ಲಿ ನೋಡಲು ಕಾಣಸಿಗದ ಕಾಗೆಗಳು ಪಿಂಡ ಹಾಕುವ ಮಂದಿಗೊಂದು ಸವಾಲು. ಪಿಂಡ ಹಾಕಲೇಬೇಕು. ಪಿಂಡ ತಿನ್ನಲು ಕಾಗೆ ಬೇಕು.

ಪಿಂಡ ಸಮರ್ಪಣೆ ಇಲ್ಲದಿದ್ದರೆ ಮೋಕ್ಷವಿಲ್ಲ. ಬೆಂಗಳೂರಿನಲ್ಲಿ ಪಿಂಡ ಹಾಕುವುದಕ್ಕಾಗಿಯೇ ಯಾರೋ ಪುಣ್ಯಾತ್ಮರೊಬ್ಬರು (ಶನಿದೇವರು) ಕಾಗೆ ಸಾಕಿದ ಬಗ್ಗೆ ಸುದ್ದಿ ಪ್ರಕಟವಾಗಿತ್ತು. ಪಿಂಡ ಹಾಕುವುದಕ್ಕೆ ಅಲ್ಲಿ ಮುಂಗಡ ಬುಕ್ಕಿಂಗ್ ಮಾಡಬೇಕು ಅಂಬೋದು ಇನ್ನೂ ದೊಡ್ಡ ಸುದ್ದಿ. ಇದು ಕಾಗೆಗಳ ಮಹಿಮೆ.

ಭವಿಷ್ಯ ಕೇಳುವುದು ತೀರಾ ಮುಜುಗರದ ಅನುಭವ ಅಂತ ಭಾವಿಸಿದವರಲ್ಲಿ ನಾನೂ ಒಬ್ಬ. ಭವಿಷ್ಯ ಹೇಳುವವ ಮತ್ತು ಕೇಳುವವ ಇಬ್ಬರೂ ಒಂದು ರೀತಿ ತಮ್ಮನ್ನು ತಾವೇ ಗೇಲಿ ಮಾಡುತ್ತಿರುವವರೋ, ಮೋಸ ಮಾಡಿಕೊಳ್ಳುತ್ತಿರುವವರೋ ಅಥವಾ ಗೊತ್ತಿದ್ದೂ ಪರಸ್ಪರ ಮೋಸ ಹೋಗುವುದಕ್ಕಾಗಿಯೇ ಒಪ್ಪಂದ ಮಾಡಿಕೊಂಡ ದ್ವಿಪಕ್ಷೀಯ ಸಂಬಂಧವಷ್ಟೇ ಎಂದು ತಿಳಿದುಕೊಂಡಂತಹವರಲ್ಲಿ ನಾನೂ ಒಬ್ಬ. ಆಕಸ್ಮಿಕ ಸ್ನೇಹಿತರ ಒತ್ತಾಯಕ್ಕೆ ಮಣಿದು ಒಮ್ಮೆ ರಸ್ತೆ ಪಕ್ಕ ಪಂಜರದೊಳಗೊಂದು ಗಿಳಿ ಇಟ್ಟುಕೊಂಡು ಕುಳಿತವನ ಹತ್ತಿರ ಹೋಗಿ ಭವಿಷ್ಯ ಕೇಳಲು ಮುಂದಾದೆ. ಗಿಳಿಯನ್ನು ಪಂಜರದಿಂದ ಹೊರಕ್ಕೆ ತೆಗೆದು ನೀಟಾಗಿ ಜೋಡಿಸಿಟ್ಟಿದ್ದ ಪತ್ರಗಳನ್ನು ಚುಂಚಿನಿಂದ ಹೆಕ್ಕಿ ತೆಗೆದು ಕೊಡುವಂತೆ ಗಿಳಿಗೆ ಆತ ಸೂಚಿಸಿದ. ಅದು ಮೂರು ಬಾರಿ ಆ ರೀತಿ ಮಾಡಿತು. ಕೊನೆಯ ಪತ್ರವನ್ನೊಮ್ಮೆ ಭವಿಷ್ಯ ಹೇಳುವವನ ಕೈಯಲ್ಲಿ ಗಿಳಿ ಕೊಟ್ಟಿತು. ಪತ್ರದ ಹಾಳೆಗಳನ್ನು ಬಿಡಿಸಿ ನೋಡಿದ ಭವಿಷ್ಯಕಾರನ ಕಣ್ಣಲ್ಲಿ ಆತಂಕ. ಶನಿದೇವರ ಫೋಟೊ ಇರುವ ಪತ್ರ ಅದು. ಅದಕ್ಕಾಗಿ ನನಗಿಂತ ಆತನಿಗೆ ಭಯ! ಕೊಂಚ ಸುಧಾರಿಸಿಕೊಂಡಂತೆ ಮಾಡಿದ ಭವಿಷ್ಯಕಾರ ಶುರು ಮಾಡಿದ: ''ನೋಡ್ರಿ ಸಾಹೇಬ್ರ ಶನಿದೇವರ ಕಾಟ...'' ಇತ್ಯಾದಿ. ಆತನ ಆತಂಕದಿಂದ ಕೂಡಿದ ಮುಖಚರ್ಯೆ ಯಾಗಲಿ, ಆತನ ಭವಿಷ್ಯ ಅದೇ ಹಳೆ ಮಾದರಿಯ ವಾಣಿಯಾಗಲಿ ನನ್ನ ಮೇಲೆ ಎಳ್ಳಷ್ಟೂ ಪರಿಣಾಮ ಬೀರದಿದ್ದರಿಂದ ಆತ ಮತ್ತೂ ಆತಂಕಗೊಂಡ.

ನನಗೆ ಮಾತ್ರ ಒಳಗೊಳಗೆ ಖುಷಿ. ಆತನ ಕೈಯಿಂದ ಪತ್ರ ಇಸಿದುಕೊಂಡು ಹಾಳೆಗಳನ್ನು ಬಿಡಿಸಿ ನೋಡಿದೆ. ಶನಿದೇವರು ನಿಜಕ್ಕೂ ಸುಂದರವಾಗಿಯೇ ಕಂಡ.



ನೀಲಿ ಮಿಶ್ರಿತ ಮೈಬಣ್ಣ, ಪೊದೆ ಮೀಸೆ, ಚುಂಚಿನಂತಹ ಮೂಗು, ತುಟಿಗೆ ಕೆಂಪುಬಣ್ಣ. ಲಕಲಕನೆ ಹೊಳೆಯುವ ಬಂಗಾರದ ರಥದ ಮೇಲೆ ವಿರಾಜಮಾನ ನಾಗಿದ್ದಾನೆ. ರಥದ ಮುಂದೆ ನನ್ನ ಮುದ್ದಿನ ಪಕ್ಷಿ ಕಾಗೆ. ಕಪ್ಪು-ಕಡುಗಪ್ಪು-ಕಂದುಗಪ್ಪು ಬಣ್ಣಗಳ ಪರಿಪೂರ್ಣ ಮಿಶ್ರಣದಿಂದ ಮಾಡಿದ ಕಾಗೆ ತನ್ನ ಕಪ್ಪು ಚುಂಚಿನಲ್ಲಿ ರಥದ ಹಗ್ಗ ಹಿಡಿದು ಕುಳಿತ ದೃಶ್ಯ. ಮನಸ್ಸಿಗೆ ಖುಷಿಯಾಯಿತು. ನನಗಾದ ಖುಷಿ ನೋಡಿ ಭವಿಷ್ಯಕಾರ ಇಂಥವರು ಯಾರಾದರೂ ಇರುವರೇ ಅಂದುಕೊಂಡಿರಬೇಕು.

**ಸದಾಶಿವ ಮರ್ಜಿ**
ಉಪ ನಿರ್ದೇಶಕರು, ಆಹಾರ, ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಇಲಾಖೆ
ಬಾಗಲಕೋಟೆ

## ಇತಿಹಾಸವೇ... ಹೀಗೆ !

**ಖು**ಷಿ ಮೂಲ
ನದಿ ಮೂಲ
ಕೆದಕದಿರಿ ಅಂದರು ಹಿರಿಯರು।

ಕೆಲವರದು
ಕೆದಕುವ ಅಭ್ಯಾಸ
ಕೆದಕಿ, ವಾಸ್ತವ ತೆರೆದಿಡುವ ಹವ್ಯಾಸ।

ಕಾಣದ ಕಣ್ಣು
ಕೇಳದ ಕಿವಿ
ಸಿಕ್ಕ ಶಾಸನ, ಗ್ರಂಥಗಳ ಕಣ್ಣಾಡಿಸಿ
ತಾನು ಅರ್ಥೈಸಿಕೊಂಡಂತೆ
ಬಿಂಬಿಸಿದರೆ:
ಮತ್ತೊಬ್ಬ ಇತಿಹಾಸಕಾರ
ತನ್ನದೇ ರೀತಿಯಲಿ ಪ್ರತಿಬಿಂಬಿಸುವ।

ಹಗದಿಂದ ತೆಗೆದ ಜೋಳ
ಗಾಳಿ - ಬೆಳಕಿಗಿಟ್ಟು
ಬಿಸಿ, ಬೇಯಿಸಿದ ವಿಧಾನ ಬೇರೆ, ಬೇರೆ!

ಇತಿಹಾಸವೇ... ಹೀಗೆ
ಅನುಮಾನಿತ ಸತ್ಯ
ಒಪ್ಪುವುದು, ಬಿಡುವುದು
ಅವರವರ ಭಾವಕ್ಕೆ, ಅವರವರಿಗೆ ಬಿಟ್ಟ ವಿಚಾರ॥



**ಹೆಚ್. ಕೆ. ಕೊಟ್ರಪ್ಪ**
ಕೊಟಗಿ ನಿಲಯ, ೧೬, ಕೆ.ಹೆಚ್.ಬಿ. ಕಾಲೋನಿ
ಹೈಸ್ಕೂಲ್ ಬಡಾವಣೆ, ಹರಿಹರ - ೫೭೭೬೦೧

*ಹಬೀಬ್ ತನ್ವೀರ್ ಭಾರತೀಯ ರಂಗಭೂಮಿಯ ಶ್ರೇಷ್ಠ ನಿರ್ದೇಶಕರು. ಈಚೆಗೆ ಅವರು ನಿಧನರಾದರು. ಸೆಪ್ಟೆಂಬರ್ ೧, ೧೯೨೩ರಲ್ಲಿ ರಾಯಪುರದಲ್ಲಿ ಜನಿಸಿದ ಕಾಲದಿಂದ ೨೦೦೯ರ ಜೂನ್ ೮ರವರೆಗೆ ಹಬೀಬ್ ಅವರ ಸೃಜನಶೀಲ ಚಟುವಟಿಕೆಯ ಮೌಲ್ಯಮಾಪನ ಅವಶ್ಯ ಎನಿಸಿ ಈ ಲೇಖನವನ್ನು ಸಿದ್ಧಪಡಿಸಲಾಗಿದೆ.*

ವ್ಯಕ್ತಿಯೊಬ್ಬರು ತಮ್ಮ ಜೀವಿತದ ಅವಧಿಯಲ್ಲಿಯೇ ದಂತಕಥೆಯಾಗುವುದು ಅಪರೂಪ. ಆದರೆ ಹಬೀಬ್ ತನ್ವೀರ್ ಅವರ ಪ್ರಯತ್ನಗಳಿಗೆ ದೊರಕಿದ ಪ್ರೇಕ್ಷಕರ ಬೆಂಬಲ ಮತ್ತು ಆ ಪ್ರದರ್ಶನಗಳನ್ನು ಕುರಿತಂತೆ ಜಗತ್ತಿನಾದ್ಯಂತ ಇರುವ ಪ್ರತಿಕ್ರಿಯೆಯನ್ನು ಗಮನಿಸಿದರೆ ಅವರನ್ನು ನಮ್ಮ ಸಮಕಾಲೀನ ರಂಗಭೂಮಿಯ ದಂತಕಥೆಯಾದವರ ಪಟ್ಟಿಯಲ್ಲಿ ಸೇರಿಸಬಹುದು. ಸತ್ಯವೇನೆಂದರೆ ಇಂತಹ ದಂತಕಥೆಗಳು ಸ್ವತಃ ಹುಟ್ಟುವುದಿಲ್ಲ, ಅದಕ್ಕಾಗಿ ಅವರು ಜೀವಮಾನವನ್ನೇ ಒಂದು ಅಪರೂಪದ ಪ್ರಯಾಣವಾಗಿಸಿರುತ್ತಾರೆ. ಹಬೀಬ್ ತನ್ವೀರ್ ಅವರ ರಂಗಭೂಮಿಯ ಯಶಸ್ಸಿಗೆ ಅವರು ಜೀವನದುದ್ದಕ್ಕೂ ಮಾಡಿದ ಪ್ರಯೋಗ ಹಾಗೂ ಪಯಣ ಕಾರಣವೆನ್ನುವುದರಲ್ಲಿ ಅನುಮಾನವಿಲ್ಲ.

ಬಹುತೇಕರು ಹಬೀಬ್ ತನ್ವೀರ್ ಅವರನ್ನು ಜನಪದ ರಂಗಭೂಮಿಯ ಜೊತೆಗೆ ಗುರುತಿಸುತ್ತಾರೆ. ಆದರೆ ಹಬೀಬ್ ತಮ್ಮ ರಂಗಪ್ರಯಾಣವನ್ನು ಆರಂಭಿಸುವ ಕಾಲಘಟ್ಟದ ರಂಗಭೂಮಿಯಲ್ಲಿ ಜನಪದದ ಬಳಕೆಯು ಸಂಗೀತದಲ್ಲಿ ಹೊರತುಪಡಿಸಿ ಉಳಿದಾವ ಭಾಗದಲ್ಲಿಯೂ ಇರಲಿಲ್ಲ. ನಿಜ ಹೇಳಬೇಕೆಂದರೆ, ಹಬೀಬ್ ತನ್ವೀರ್ ಭಾರತೀಯ ರಂಗಭೂಮಿಯಲ್ಲಿ ಜಾನಪದವನ್ನು ಸಂಪೂರ್ಣವಾಗಿ ಬಳಸಿಕೊಂಡ ಮೊದಲಿಗರು. ಆ ಪ್ರಭಾವ ಅದೆಷ್ಟು ದಟ್ಟವಾಗಿತ್ತೆಂದರೆ ಈಗ ರಂಗಪ್ರಯೋಗಗಳಲ್ಲಿ ಜಾನಪದ ಪ್ರಕಾರಗಳನ್ನು ಬಳಸುವುದು ಫ್ಯಾಷನ್ ಆಗಿಹೋಗಿದೆ. ಆದರೆ, ಇತರರು ಜಾನಪದವನ್ನು ರಂಗಭೂಮಿಯಲ್ಲಿ ಬಳಸಿದ ಕ್ರಮಕ್ಕೂ ಹಬೀಬ್ ಅವರು ಜಾನಪದವನ್ನು ಬಳಸಿದ ಕ್ರಮಕ್ಕೂ ಢಾಳಾದ ವ್ಯತ್ಯಾಸವಿದೆ. ಹಬೀಬ್ ಅವರು ಮಾಡಿದ ಎಲ್ಲಾ ಪ್ರಯೋಗಗಳ ಹಿಂದೆ ಇದ್ದದ್ದು ಅವರ ಎಡಪಂಥೀಯ ಆಲೋಚನೆಗಳು. ಹಬೀಬ್ ತನ್ವೀರ್ ಅವರು ಇಪ್ಟಾ (ಇಂಡಿಯನ್ ಪೀಪಲ್ಸ್ ಥಿಯೇಟರ್ ಅಸೋಸಿಯೇಷನ್) ಹಾಗೂ ಪಿಡಬ್ಲ್ಯುಎ (ಪ್ರೋಗ್ರೆಸಿವ್ ರೈಟರ್ಸ್ ಅಸೋಸಿಯೇಶನ್) ಜೊತೆಗೆ ತಮ್ಮ ವಿದ್ಯಾಭ್ಯಾಸದ ನಂತರದ ದಿನಗಳಿಂದ ತೊಡಗಿಕೊಂಡಿದ್ದರು. ಅವರ ರಾಜಕೀಯ ಮತ್ತು ಸಾಮಾಜಿಕ ಚಿಂತನೆಗಳ ಮೇಲೆ ಇವೆರಡೂ ಸಂಸ್ಥೆಗಳಲ್ಲಿನ ಸಂಬಂಧವೂ ಪರಿಣಾಮ ಬೀರಿದ್ದವು.

ಹಬೀಬ್ ಹುಟ್ಟಿದ್ದು, ಬೆಳೆದದ್ದು ಮಧ್ಯಪ್ರದೇಶದ ಉತ್ತರ ಭಾಗದಲ್ಲಿರುವ ರಾಯಪುರ ಎಂಬ ಸಣ್ಣ ಪಟ್ಟಣದಲ್ಲಿ, ಆ ಪಟ್ಟಣದ ಸುತ್ತಲೂ ಇದ್ದದ್ದು ಸಣ್ಣಸಣ್ಣ ಹಳ್ಳಿಗಳಿದ್ದ ಗುಡ್ಡಗಾಡು ಪ್ರದೇಶ. ರಾಯಪುರ ನಗರಿಗರಿಗೂ ಮತ್ತು ಸುತ್ತಲ ಹಳ್ಳಿಗಳಿಂದ ಪ್ರತಿನಿತ್ಯ ಬರುತ್ತಿದ್ದ ಹಳ್ಳಿಗರಿಗೂ ನಿರಂತರ ಸಂಪರ್ಕ ಇರುತ್ತಿತ್ತು. ಹಬೀಬ್ ಅವರ ಅನೇಕ ಚಿಕ್ಕಪ್ಪಂದಿರುಗಳಿಗೆ ಅವರ ಊರಿನ ಸುತ್ತಲ ಹಳ್ಳಿಗಳಲ್ಲಿ ಜಮೀನುಗಳಿದ್ದವು. ಹೀಗಾಗಿ

# ಒಬ್ಬ ರಂಗಕರ್ಮಿಯ ಹೆಜ್ಜೆ ಗುರುತು...!

ಬಿ. ಸುರೇಶ



ಹಬೀಬ್ ತನ್ವೀರ್ ತಮ್ಮ ಬಾಲ್ಯದ ದಿನಗಳಲ್ಲಿ ಬಹುಕಾಲವನ್ನು ಹಳ್ಳಿಗರೊಂದಿಗೆ ಹಾಗೂ ಅಲ್ಲಿನ ಜಾನಪದ ಕಲೆಗಳೊಂದಿಗೆ ಕಳೆದರು. ತಮ್ಮ ಬಾಲ್ಯದಲ್ಲಿ ಕೇಳಿದ ಹಾಡುಗಳು ಮತ್ತು ಕಥನಗಳು ಹಬೀಬ್ ಅವರನ್ನು ಕಡೆಗಾಲದವರೆಗೂ ಕಾಡಿದವು. ಶಾಲೆಯನ್ನು ಮುಗಿಸಿದೊಡನೆ ಹಬೀಬ್ ಅವರು ಅಲಿಘರ್ ಮುಸ್ಲಿಂ ವಿಶ್ವವಿದ್ಯಾಲಯದಲ್ಲಿ ಪದವಿ ಪರೀಕ್ಷೆ ಬರೆಯಲು ಸೇರಿದರು. ಅಲ್ಲಿಂದಾಚೆಗೆ ಅವರ ಓದು ಮುಂದುವರೆದದ್ದು ಮುಂಬೈನಲ್ಲಿ. ಮುಂಬೈ ಶಹರಿಗೆ ಬಂದೊಡನೆ ಹಬೀಬ್ ಇಪ್ಟಾ ಮತ್ತು ಪಿಡಬ್ಲ್ಯುಎ ಸೇರಿದರು.

ಹಬೀಬ್ ತನ್ವೀರ್ ಅವರಿಗೆ ಇದ್ದ ಸಂಗೀತ ಮತ್ತು ಕಾವ್ಯ ರಚನೆಯ ಆಸಕ್ತಿಯು ಪ್ರಕಟಗೊಂಡದ್ದು 'ಆಗ್ರಾಬಜ಼ಾರ್' ನಾಟಕದಲ್ಲಿ. ಈ ನಾಟಕವನ್ನು ಹಬೀಬ್ ಸ್ವತಃ ಬರೆದು ನಿರ್ಮಿಸಿದ್ದರು. ಇದಾಗಿದ್ದು ೧೯೫೪ರಲ್ಲಿ, ದೆಹಲಿಯಲ್ಲಿ. ಹಬೀಬ್ ಅವರು ದೆಹಲಿಯ ರಂಗಭೂಮಿಯನ್ನು ಪ್ರವೇಶಿಸಿದ ಕಾಲದಲ್ಲಿ ಅಲ್ಲಿ ಹವ್ಯಾಸೀ ಮತ್ತು ಕಾಲೇಜ್ ರಂಗಭೂಮಿ ಮತ್ತು ಆಂಗ್ಲ ರಂಗಭೂಮಿಯು ಉಚ್ಛ್ರಾಯದಲ್ಲಿ ಇತ್ತು.

ಇವರೆಲ್ಲರೂ ಪಾಶ್ಚಾತ್ಯ ರಂಗಭೂಮಿಯ ಮಾದರಿಗಳನ್ನೇ ತಮ್ಮ ನಾಟಕದಲ್ಲಿಯೂ ಬಳಸುತ್ತಾ ಇದ್ದರು. ಇವರೆಲ್ಲರ ರಂಗಭೂಮಿಯನ್ನು ಭಾರತೀಯ ಮನಸ್ಸುಗಳಿಗೆ ಒಗ್ಗಿಸುವ ಪ್ರಯತ್ನವೂ ಇರಲಿಲ್ಲ. ಹಾಗಾಗಿ ಇವರ ನಾಟಕಗಳಲ್ಲಿನ ವಿವರಗಳೊಂದಿಗೆ ಭಾರತೀಯ ಪ್ರೇಕ್ಷಕರು ತೊಡಗಿಕೊಳ್ಳುವುದು ಸಹ ಸಾಧ್ಯವಾಗುತ್ತಾ ಇರಲಿಲ್ಲ. ಇಂತಹ ಸಂದರ್ಭದಲ್ಲಿ, ಆ ಕಾಲದ ಸಮಕಾಲೀನ ರಂಗಭೂಮಿಗೆ ವೈರುಧ್ಯ ಎಂಬಂತೆ ಹಬೀಬ್ ತನ್ವೀರ್ ತಮ್ಮ 'ಆಗ್ರಾಬಜ಼ಾರ್' ಸಿದ್ಧಪಡಿಸಿದರು. ಈ ನಾಟಕದ ಸ್ವರೂಪ, ವಸ್ತು ಮತ್ತು ಅನುಭವವು ಅವರೆಗೆ ದೆಹಲಿಯ ರಂಗಭೂಮಿ ಪ್ರೇಕ್ಷಕರು ಎಂದೂ ನೋಡದೆ ಇದ್ದಂತಹ ವಾತಾವರಣವನ್ನು ಒದಗಿಸಿದವು.

ಈ ನಾಟಕವು ೧೮ನೇ ಶತಮಾನದ ಸೂಫಿ ತತ್ವಜ್ಞಾನಿ ನಜೀರ್ ಅಹಮದಬಾದೀ ಅವರ ಕತೆಯೊಂದನ್ನು ಆಧರಿಸಿತ್ತು. ನಜೀರ್ ಅಹಮದಬಾದಿಯವರ ಕತೆಗಳು ಸಾಮಾನ್ಯ ಜನರ ದೈನಂದಿನ ಬದುಕನ್ನೇ ಇಟ್ಟುಕೊಂಡು, ಅವರದ್ದೇ ನುಡಿಗಟ್ಟಲ್ಲಿ ಬರೆದಂತಹವು. ಈ ಕತೆಗಳಲ್ಲಿ ಸಾಂಪ್ರದಾಯಿಕವಾದ ವಿಶಿಷ್ಟತೆಯಾಗಲೀ, ಅಲ್ಲಿರುವಂತಹ ರೂಪಕಗಳ ಬಳಕೆಯಾಗಲೀ ಇರಲಿಲ್ಲ. ಹಬೀಬ್ ತನ್ವೀರ್ ದೆಹಲಿಯ ಬೀದಿಯಲ್ಲಿದ್ದ ಜನಗಳನ್ನು ಮತ್ತು ಅವರೆಗೆ ರಂಗಭೂಮಿಯನ್ನೇ ಪ್ರವೇಶಿಸಿಲ್ಲದಂತಹ ಹೊಸಬರನ್ನು ಮತ್ತು ಹತ್ತಿರದ ಒಕ್ಲಾ ಎಂಬ ಹಳ್ಳಿಯ ಜನರನ್ನು ಬಳಸಿ 'ಆಗ್ರಾಬಜ಼ಾರ್' ಸಿದ್ಧಗೊಳಿಸಿದರು. ಆ ಕಾಲಕ್ಕೆ ಅದೊಂದು ಕ್ರಾಂತಿಕಾರಿ ಪ್ರಯೋಗವಾಗಿತ್ತು. ಇದಲ್ಲದೆ, ಆ ಕಾಲದ ರಂಗಭೂಮಿಯಲ್ಲಿದ್ದ ಬಾಕ್ಸ್ ಸೆಟ್ ಡ್ರಾಯಿಂಗ್ ರೂಂ ವಾತಾವರಣಕ್ಕೆ ಬದಲಾಗಿ, ಹಬೀಬ್ ತನ್ವೀರ್ ತಮ್ಮ ನಾಟಕವನ್ನು ಮಾರುಕಟ್ಟೆಯ ನಡುವೆಯೇ ನಡೆಯುವಂತೆ ಯೋಜಿಸಿದ್ದರು. ಮಾರುಕಟ್ಟೆಯಲ್ಲಿನ ಎಲ್ಲಾ ಶಬ್ದಗಳನ್ನು - ಕಾಕುಗಳನ್ನು ಹಬೀಬ್ ತನ್ವೀರ್ ಬಳಸಿದ್ದರು. ಮಾರುಕಟ್ಟೆಯ ಎಲ್ಲಾ ಗೊಂದಲಗಳ ನಡುವೆ ಇರಬಹುದಾದ ಸಾಮರಸ್ಯವನ್ನು ಮತ್ತು ಸಮಕಾಲೀನ ರಾಜಕೀಯ ಹಾಗೂ ಸಾಮಾಜಿಕ ವಿವರಗಳನ್ನು ಯಥಾವತ್ತಾಗಿ ಕಟ್ಟಿಕೊಡಲು ಹಬೀಬ್ ತನ್ವೀರ್ ಪ್ರಯತ್ನಿಸಿದ್ದರು. ಈ ನಾಟಕವನ್ನು ಕುರಿತು ಮಾತಾಡುತ್ತಾ ಮಿಖೈಲ್ ಬಕ್ತೀನ್ ಅವರು ''ಮಾರುಕಟ್ಟೆಯಲ್ಲಿನ ಸಂಸ್ಕೃತಿಗಳ ಅನಾವರಣ'' ಎಂಬ ಮಾತನ್ನು ಹೇಳುತ್ತಾರೆ. ಹಬೀಬ್ ತನ್ವೀರ್ ಅವರ ಪ್ರಯೋಗದ ಯಶಸ್ಸಿಗೆ ಕಾರಣವಾದದ್ದೇ ಈ ಅನಾವರಣದ ಪ್ರಕ್ರಿಯೆ. ಹಬೀಬ್ ತನ್ವೀರ್ ಅವರು ಸ್ವತಃ 'ಆಗ್ರಾಬಜ಼ಾರ್' ಬಗ್ಗೆ ಮಾತಾಡುತ್ತಾ ಅದು ''ಮಾರುಕಟ್ಟೆಯಲ್ಲಿಯೇ ಬದುಕುವವರ ಉತ್ಸವದ ಉತ್ಸಾಹ ಈ ನಾಟಕದ ತಿರುಳು''ಎಂದಿದ್ದರು. ಅಂತೆಯೇ ಹಬೀಬ್ ಅವರ ಈ ಪ್ರಯತ್ನವೂ ಎಲ್ಲಾ ಕಾಲಕ್ಕೂ ನೆನಪಲ್ಲುಳಿಯುವ ಒಂದು ರಂಗಪ್ರಯೋಗವಾಯಿತು.

ಹಬೀಬ್ ತನ್ವೀರ್ ಅವರ ಕಲಾಭಿವ್ಯಕ್ತಿಯ ಎರಡು ಪ್ರಧಾನ ಅಂಶಗಳು ಎಂದರೆ ಜನಪ್ರಿಯ ಸಂಸ್ಕೃತಿಯಲ್ಲಿನ ವೈರುಧ್ಯಗಳನ್ನು ಕಲಾತ್ಮಕವಾಗಿ ಎದುರಾಗಿಸುವುದು ಹಾಗೂ ಬ್ರೆಕ್ಟ್‌ನ ಹಾಗೆ ನಾಟಕದ ಭಾಗವಾಗಿಯೇ ಸಂಗೀತವನ್ನು ಬಳಸುವುದು.





ಇವೆರಡರ ಸಮಾಗಮವು ತನ್ವೀರ್ ಅವರ 'ಆಗ್ರಾಬಜ಼ಾರ್'ನಲ್ಲಿಯೇ ಆಗಿತ್ತು.

ಈ ನಾಟಕದ ಪ್ರದರ್ಶನವಾದೊಡನೆ ಹಬೀಬ್ ತನ್ವೀರ್ ಇಂಗ್ಲೆಂಡಿಗೆ ಹೋಗುತ್ತಾರೆ. ರಾಯಲ್ ಅಕಾಡೆಮಿ ಆಫ್ ಡ್ರಮ್ಯಾಟಿಕ್ ಆರ್ಟ್ಸ್ (ರಾಡಾ) ಮತ್ತು ಬ್ರಿಸ್ಟಲ್‌ನ ಓಲ್ಡ್‌ವಿಕ್ ಥಿಯೇಟರ್ ಸ್ಕೂಲ್‌ನಲ್ಲಿ ಮೂರು ವರ್ಷಗಳ ರಂಗಭೂಮಿಯ ಅಭ್ಯಾಸ ಮಾಡುತ್ತಾರೆ. ಇದೇ ಸಮಯದಲ್ಲಿ ಯೂರೋಪಿ ನಾದ್ಯಂತ ರಂಗಾಭ್ಯಾಸಕ್ಕಾಗಿಯೇ ಸಂಚಾರ ಮಾಡುತ್ತಾರೆ. ೧೯೫೬ರಲ್ಲಿ ಸುಮಾರು ಆರು ತಿಂಗಳ ಕಾಲ ಬರ್ಲಿನ್‌ನಲ್ಲಿಯೇ ಇದ್ದು ಬರ್ಟೊಲ್ಟ್ ಬ್ರೆಕ್ಟ್‌ನ ಅನೇಕ ನಾಟಕಗಳನ್ನು ನೋಡುತ್ತಾರೆ. ಇದು ಹಬೀಬ್ ತನ್ವೀರ್‌ಗೆ ಬ್ರೆಕ್ಟ್ ಜೊತೆಗಿನ ಮೊದಲ ಅನುಸಂಧಾನ. ಈ ಭೇಟಿಯ ಪರಿಣಾಮವು ಹಬೀಬ್ ಮೇಲೆ ರಾಡಾದ ಪಠ್ಯಗಳಿಗಿಂತ ಹೆಚ್ಚಾಯಿತು. ನಂತರ ಆತ ಭಾರತಕ್ಕೆ ಹಿಂದಿರುಗಿದ ಕೂಡಲೇ ತಾನು ಇಂಗ್ಲೆಂಡಿನಲ್ಲಿ ಕಲಿತದ್ದನ್ನು ಮರೆಯಲು ಪ್ರಯತ್ನಿಸುತ್ತಾರೆ. ಇದರಿಂದಾಗಿ ಅವರೆಗೆ ಬ್ರಿಟಿಷರಿಂದ ಕಲಿತು ಬಂದಿದ್ದ ರಂಗಕರ್ತರಿಗೆ ವಿರುದ್ಧವೆನಿಸುವ ನೆಲೆಯಲ್ಲಿಯೇ ಕೆಲಸ ಮಾಡಲು ಆರಂಭಿಸುತ್ತಾರೆ. ನಮ್ಮದೇ ಸಾಂಸ್ಕೃತಿಕ ವಿವರಗಳು ಮತ್ತು ಸಾಂಪ್ರದಾಯಿಕ ವಿವರಗಳ ನಡುವೆ ಅರಳದ ರಂಗಭೂಮಿಯು ಬದುಕಿದ್ದೂ ಸತ್ತಂತೆ ಎಂದು ಹಬೀಬ್ ತನ್ವೀರ್ ನಂಬಿದ್ದರು.

ಇಂತಹ ನಂಬಿಕೆಯ ಪರಿಣಾಮವಾಗಿ ಅವರೆಗೆ ರಂಗಭೂಮಿಯನ್ನು ಆವರಿಸಿಕೊಂಡಿದ್ದ ವಸಾಹತುಶಾಹಿ ಮನಃಸ್ಥಿತಿಯನ್ನು ಧಿಕ್ಕರಿಸುವುದು ಹಬೀಬ್‌ಗೆ ಸಾಧ್ಯವಾಯಿತು. ಹಬೀಬ್ ತನ್ವೀರ್ ಅವರು ಭಾರತೀಯ ಮೂಲದಲ್ಲಿಯೇ ತಮ್ಮ ರಂಗತಂತ್ರವೊಂದನ್ನು ಹುಡುಕಲು ಆರಂಭಿಸಿದರು. ಈ ಹುಡುಕಾಟದ ಹಾದಿಯಲ್ಲಿ ಎರಡು ಘಟ್ಟಗಳನ್ನು ದಾಟಿದ ನಂತರ ರಂಗನಿರ್ದೇಶಕ ಹಬೀಬ್ ತನ್ವೀರ್ ತಮ್ಮದೇ ಆದ ಒಂದು ಶಿಷ್ಟ ತಂತ್ರವನ್ನು ರೂಢಿಸಿಕೊಳ್ಳಲು ಸಾಧ್ಯವಾಯಿತು. ಮೊದಲಿಗೆ ಹಬೀಬ್ ತನ್ವೀರ್ ಅವರು ಚತ್ತೀಸ್‌ಘಡ್‌ನ ಜಾನಪದ ಹಾಗೂ ಸಾಂಪ್ರದಾಯಿಕ ಕಲೆಗಳನ್ನು ಅಭ್ಯಾಸ ಮಾಡುವವರ ಜೊತೆಗೆ ದುಡಿಯಲಾರಂಭಿಸಿದರು. ಈ ಹಂತದಲ್ಲಿ ಅವರು ನಿರ್ದೇಶಿಸಿದ ನಾಟಕ ಶೂದ್ರಕನ 'ಮೃಚ್ಛಕಟಿಕಾ'ದ ಅನುವಾದವಾಗಿದ್ದ 'ಮಿಟ್ಟೀಕಾ ಗಾಡಿ'. ಈ ನಾಟಕದಲ್ಲಿ ಚತ್ತೀಸ್‌ಘಡ್‌ನ ಆರು ಜನ ಜಾನಪದ ಕಲಾವಿದರನ್ನು ಪಾತ್ರಧಾರಿಗಳನ್ನಾಗಿ ಬಳಸಿದ್ದರು. ಅದರೊಂದಿಗೆ ಜಾನಪದ ಕಲೆಗಳಲ್ಲಿದ್ದ ರಂಗಾಭ್ಯಾಸ ಸಂಪ್ರದಾಯವನ್ನು ಸಹ ಯಥಾವತ್ ಆಗಿ ಬಳಸಲಾಗಿತ್ತು. ಇದರಿಂದಾಗಿ ಇಡಿಯ ನಾಟಕಕ್ಕೆ ಸಂಪೂರ್ಣ ಭಾರತೀಯ ಎನಿಸುವ ಸ್ವರೂಪವೊಂದು ದಕ್ಕಿತ್ತು. ಇಂದಿಗೂ ಆಗೀಗ ಜಾನಪದ ಕಲಾವಿದರನ್ನೇ ಇಟ್ಟುಕೊಂಡು ಪುನರ್ ಪ್ರದರ್ಶನ ಆಗುತ್ತಿರುವ ಈ ನಾಟಕವನ್ನು ಭಾರತದ ಪುರಾತನ ನಾಟಕವೊಂದರ ಶ್ರೇಷ್ಠ ಅವತರಣಿಕೆಯೆಂದು ಇಂದಿಗೂ ಗುರುತಿಸಲಾಗುತ್ತದೆ.

ಸಂಸ್ಕೃತ ನಾಟಕಗಳಲ್ಲಿರುವ ತಿರುಳನ್ನು ಹಿಡಿಯುವುದಕ್ಕೆ ನಮ್ಮ ಜಾನಪದ ಕಲೆಗಳಲ್ಲಿ ಮಾತ್ರ ಸ್ಪಷ್ಟ ಶಕ್ತಿಯಿದೆ ಎಂಬುದನ್ನು ಹಬೀಬ್ ತನ್ವೀರ್ 'ಮಿಟ್ಟೀಕಾ ಗಾಡಿ' ಪ್ರಯೋಗದಿಂದ ಕಂಡುಕೊಂಡರು. ಸಂಸ್ಕೃತ ನಾಟಕಗಳಲ್ಲಿರುವ ಕಾಲ ಲಂಘನ ಮತ್ತು ಸ್ಥಳ ಲಂಘನಗಳನ್ನು ಸುಲಭವಾಗಿ ಸಾಧಿಸಬಹುದಾದ ಅನೇಕ ಸುಲಭೋಪಾಯಗಳು

ಭಾರತೀಯ ಜಾನಪದ ಕಲೆಗಳಲ್ಲಿವೆ ಎಂಬುದನ್ನು ಹಬೀಬ್ ತನ್ವೀರ್ ಆಗಾಗ ಹೇಳುತ್ತಲೇ ಇದ್ದರು. 'ಮಿಟ್ಟೀಕಾ ಗಾಡಿ' ಮತ್ತು ಆನಂತರ ಸಿದ್ಧಪಡಿಸಿದ ವಿಶಾಖದತ್ತನ 'ಮುದ್ರಾರಾಕ್ಷಸ' ನಾಟಕಗಳಲ್ಲಿ ಹಬೀಬ್ ತನ್ವೀರ್ ಅವರ ಹೇಳಿಕೆಯನ್ನು ರಂಗದ ಮೇಲೆಯೇ ಕಾಣಬಹುದು. ಈ ಮಾತಿಗೆ ಉದಾಹರಣೆಯಾಗಿ ಮಿಟ್ಟೀಕಾ ಗಾಡಿಯ ಒಂದು ದೃಶ್ಯವನ್ನು ನೆನಪಿಸಿಕೊಳ್ಳಬಹುದು. ಒಬ್ಬ ಸೇನಾಧಿಪತಿಯು ತನ್ನ ಸೇವಕನಿಗೆ ಉದ್ಯಾನವನದಲ್ಲಿ ಯಾವುದಾದರೂ ಹೆಣ ಬಿದ್ದಿದೆಯೇ ನೋಡಿ ಬಾ ಎನ್ನುತ್ತಾನೆ. ಆ ಸೈನಿಕ ವೇದಿಕೆಯನ್ನು ಒಂದು ಸುತ್ತು ಸುತ್ತಿ, ಸೇನಾಧಿಪತಿಯ ಬಳಿಗೆ ಬಂದು ಉದ್ಯಾನವನದಲ್ಲಿ ಯಾವ ಹೆಣವೂ ಇಲ್ಲ ಎನ್ನುತ್ತಾನೆ. ಇದು ಸ್ಥಳ ಮತ್ತು ಕಾಲೈಕ್ಯದ ಲಂಘನಕ್ಕೆ ಬಹುದೊಡ್ಡ ಉದಾಹರಣೆಯೂ ಹೌದು.

ಹಬೀಬ್ ತನ್ವೀರ್ ಮತ್ತು ಆತನ ಮಡದಿ ಮೋನಿಕಾ ಮಿಶ್ರಾ ೧೯೫೯ರಲ್ಲಿ 'ನಯಾ ಥಿಯೇಟರ್' ಎಂಬ ತಮ್ಮದೇ ರಂಗತಂಡವೊಂದನ್ನು ಆರಂಭಿಸಿದರು. ಈ ತಂಡದಿಂದ ಅನೇಕ ಆಧುನಿಕ ಮತ್ತು ಸಂಸ್ಕೃತ ನಾಟಕಗಳನ್ನು ಭಾರತ ಹಾಗೂ ಯೂರೋಪ್‌ಗಳಲ್ಲಿ ಪ್ರದರ್ಶಿಸಿದರು. ಈ ನಾಟಕಗಳಲ್ಲಿ ನಗರದ ಹಿನ್ನೆಲೆಯ ನಟರುಗಳು ಹೆಚ್ಚಾಗಿದ್ದರಾದರೂ ಹಬೀಬ್ ತನ್ವೀರ್ ಅವರಿಗೆ ಜಾನಪದ ಕಲಾವಿದರ ಬಗ್ಗೆ ಇದ್ದ ವಿಶೇಷ ಆಸ್ಥೆ ಅವರ ಕಡೆಯ ದಿನಗಳವರೆಗೂ ಹಾಗೆಯೇ ಇತ್ತು. ೧೯೭೦ರ ಸುಮಾರಿಗೆ ಹಬೀಬ್ ಅವರ ಈ ಜಾನಪದ ಕಲಾವಿದರನ್ನು ಕುರಿತ ಪ್ರೀತಿಗೆ ಹೊಸ ಅವಕಾಶ ದೊರೆಯಿತು.



'ಆಗ್ರಾ ಬಜಾರ್' ನಾಟಕದ ಒಂದು ದೃಶ್ಯ

ಆ ಹೊತ್ತಿಗೆ ಹಬೀಬ್ ತನ್ವೀರ್ ಅವರಿಗೆ ತಾವು ಜಾನಪದ ಕಲಾವಿದರೊಂದಿಗೆ ಮಾಡುತ್ತಿದ್ದ ರಂಗಪ್ರಯೋಗಗಳು ಸರಿಯಾಗಿಲ್ಲ ಎನಿಸುತ್ತಿತ್ತು. ಅದರಲ್ಲಿ ತನ್ವೀರ್ ಎರಡು ಪ್ರಧಾನ 'ತಪ್ಪು'ಗಳನ್ನು ಗುರುತಿಸಿದ್ದರು. ರಂಗಪ್ರದರ್ಶನವನ್ನು ಮೊದಲೇ ತಾಲೀಮಿನಲ್ಲಿ ಬ್ಲಾಕಿಂಗ್ ಮಾಡುವುದು ಮತ್ತು ಬೆಳಕಿನ ವಿನ್ಯಾಸವನ್ನು ಮೊದಲೇ ಸಿದ್ಧಪಡಿಸಿಕೊಂಡು ರಂಗಪ್ರದರ್ಶನ ಮಾಡುವುದು ಮೊದಲ ತಪ್ಪು ಎಂದು ಅವರಿಗನ್ನಿಸಿತ್ತು. ಹಳ್ಳಿಗಾಡಿನಿಂದ ಬಂದ ಅನೇಕ ಕಲಾವಿದರು ಅನಕ್ಷರಸ್ಥರಾಗಿದ್ದರು. ಆದ್ದರಿಂದ ಮೊದಲೇ ಸಿದ್ಧಪಡಿಸಲಾದ ಬ್ಲಾಕಿಂಗ್‌ಗೆ ಹೊಂದಿಕೊಳ್ಳುವುದು ಮತ್ತು ಲಿಖಿತ ಅಕ್ಷರವನ್ನು ಓದುವುದು ಅವರಿಗೆ ಕಷ್ಟವಾಗುತ್ತಿತ್ತು. ಹಾಗಾಗಿ ಅವರು ಯಾವ ಹಂತದಲ್ಲಿ ಎತ್ತ ಕಡೆಗೆ ಚಲಿಸಬೇಕು, ಎಲ್ಲಿ ನಿಷ್ಕ್ರಮಿಸಬೇಕು ಎಂಬುದನ್ನು ನೆನಪಿಸಿಕೊಳ್ಳುವುದರಲ್ಲಿ ಅಭಿನಯ ಹಾಳಾಗುತ್ತಿತ್ತು. ಇದಲ್ಲದೆ ಹಿಂದಿಯ ನಾಟಕಗಳನ್ನು ಈ ಕಲಾವಿದರಿಂದ ಸಿದ್ಧಪಡಿಸುವಾಗ ನಾಗರಿಕ ಹಿಂದಿಯ ಮಾತುಗಳನ್ನು ಇದೇ ಜಾನಪದ ಕಲಾವಿದರಿಂದ ಹೇಳಿಸಬೇಕಾಗುತ್ತಿತ್ತು. ಈ ಭಾಷೆಗೆ ಹೊಂದಿಕೊಳ್ಳದ ಜಾನಪದ ಕಲಾವಿದರಿಗೆ ಮಾತು ಎಂಬುದೇ ತೊಡಕಾಗುತ್ತಿತ್ತು. ಇದರಿಂದಾಗಿಯೂ ಅವರ ಅಭಿನಯಕ್ಕೆ ಲಗಾಮು ಬೀಳುತ್ತಿತ್ತು. ಇದು ಎರಡನೆಯ ತಪ್ಪು ಎಂದು ಹಬೀಬ್ ಭಾವಿಸಿದ್ದರು.

ಈ ತಪ್ಪುಗಳಿಂದ ತಪ್ಪಿಸಿಕೊಳ್ಳಲೆಂಬಂತೆ ಆವರೆಗೆ ತಾವು ಸಾಗಿ ಬಂದ ನಾಟಕ ಕಟ್ಟುವ ಕ್ರಮವನ್ನು ಬಿಟ್ಟು ಹೊಸದೊಂದು ಮಾರ್ಗವನ್ನು ಹಬೀಬ್ ಹುಡುಕಿಕೊಂಡರು. ಈ ಮಾರ್ಗದಲ್ಲಿ ಸ್ಫೂರ್ತ ವಿಸ್ತರಣೆಗೆ (ಇಂಪ್ರೂವೈಸೇಶನ್) ಹೆಚ್ಚಿನ ಅವಕಾಶವಿತ್ತು. ಅದಲ್ಲದೆ ಕಲಾವಿದರು ತಮ್ಮದೇ ಭಾಷೆಯಲ್ಲಿ ಮಾತಾಡುವ ಅವಕಾಶವನ್ನು ಸಹ ಹಬೀಬ್ ತನ್ವೀರ್ ಒದಗಿಸಿದರು. ೧೯೭೦-೭೩ರವರೆಗೆ ಇಂತಹ ಹೊಸ ಪ್ರಯೋಗಗಳನ್ನು ಮಾಡಿದರು. ಈ ಅವಧಿಯಲ್ಲಿ ಗ್ರಾಮೀಣ ಕಲಾವಿದರೊಂದಿಗೆ ಅತಿ ಹೆಚ್ಚು ದುಡಿದ ಹಬೀಬ್ ತನ್ವೀರ್ ಅವರೆಲ್ಲರಿಗೂ ತಮ್ಮದೇ ಆದ ದೇಸಿ ನುಡಿಗಟ್ಟಲ್ಲಿ ಮಾತಾಡುವ ಹೊಸ ಶೈಲಿಯ ರಂಗಭೂಮಿಯನ್ನು ಪ್ರಯತ್ನಿಸಿದರು. ಇದಲ್ಲದೆ ಗ್ರಾಮೀಣ ಕಲಾವಿದರು ಅದಾಗಲೇ ಪರಿಣತಿ ಪಡೆದಿದ್ದ ತಮ್ಮದೇ ಜಾನಪದೀಯ ಶೈಲಿಯನ್ನು ಅವರ ಇಚ್ಛೆಯಂತೆಯೇ ಪ್ರಯೋಗಿಸುವ ಅವಕಾಶವನ್ನು ನೀಡಿದರು. ಈ ಹಾದಿಯಲ್ಲಿ ದೇವಸ್ಥಾನಗಳಲ್ಲಿ ಬಳಕೆಯಾಗುವ ಸಂಪ್ರದಾಯಗಳಿಂದ ಹಿಡಿದು ಪಂಡ್ವಾನಿ ಎಂದೇ ಪ್ರಸಿದ್ಧವಾದ ಜಾನಪದ ಕಲೆಯನ್ನು ಸಹ ವೇದಿಕೆಯ ಮೇಲೆ ತರಲು ಪ್ರಯತ್ನಿಸಿದರು.

೧೯೭೨ರಲ್ಲಿ ರಾಯಪುರದಲ್ಲಿಯೇ ತನ್ವೀರ್ ನಡೆಸಿದ 'ನಾಚಾ ಜಾನಪದ ಕಲೆ'ಯ ಶಿಬಿರವೊಂದರಲ್ಲಿ ಮತ್ತೊಂದು ಹೊಸಬಗೆಯ ಸಾಧ್ಯತೆ ಹುಟ್ಟುಕೊಂಡಿತು. ಈ ಶಿಬಿರದಲ್ಲಿ ದೆಹಲಿ, ಕಲ್ಕತ್ತಾ ಮುಂತಾದ ನಗರಗಳಿಂದ ಬಂದಿದ್ದ ಕಲಾವಿದರಲ್ಲದೆ ನೂರಕ್ಕೂ ಹೆಚ್ಚು ಜಾನಪದೀಯ ಕಲಾವಿದರು ಭಾಗವಹಿಸಿದ್ದರು. ಈ ಶಿಬಿರದಲ್ಲಿ ನಾಚಾ ಜಾನಪದ ಕಲೆಯಿಂದಾಯ್ದ ಮೂರು ನಾಟಕಗಳನ್ನು ಆಯ್ದುಕೊಂಡು, ಅವುಗಳನ್ನು ಒಂದರೊಳಗಿನ್ನೊಂದು ಕತೆ ಎಂಬಂತೆ ಮಿಶ್ರಣ ಮಾಡಿ ಹೊಸದೊಂದು ನಾಟಕ ಸಿದ್ಧಪಡಿಸಲಾಯಿತು. ಕೆಲವು ಸಣ್ಣ ದೃಶ್ಯಗಳನ್ನು ಬರೆದುಕೊಂಡು ವಿಭಿನ್ನ ಕತೆಗಳಿಗೆ ಕೊಂಡಿಗಳನ್ನು ಸೃಷ್ಟಿಸಲಾಗಿತ್ತು. ಆವರೆಗೆ ಭಾರತೀಯ ರಂಗಭೂಮಿಯಲ್ಲಿ ಬಳಸದೆ ಉಳಿದಿದ್ದ ಅನೇಕ ಹಾಡು, ಹಾಡುಗಾರಿಕೆಯ ಶೈಲಿಯನ್ನು ಬಳಸಿಕೊಂಡು 'ಗಾಂವ್ ಕಾ ನಾಮ್ ಸಸುರಾಲ್, ಮೋರ್ ನಾಮ್ ದಾಮಾದ್' ಎಂಬ ನಾಟಕವನ್ನು ಸಿದ್ಧಪಡಿಸಲಾಯಿತು.

ಈ ನಾಟಕವು ಹಬೀಬ್ ತನ್ವೀರ್ ಅವರ ಪ್ರಯೋಗಗಳಲ್ಲಿ ತುಂಬಾ ಶಿಷ್ಟವೆನಿಸುವ ಬೆಳವಣಿಗೆಯಾಗಿತ್ತು. ಈ ನಾಟಕವು ಚತ್ತೀಸ್‌ಘಡ್‌ನಲ್ಲಿ ಮಾತ್ರವಲ್ಲ ದೇಶದಾದ್ಯಂತ ಜನಪ್ರಿಯವಾಯಿತು. ಹಬೀಬ್ ತನ್ವೀರ್ ಈ ನಾಟಕದ ಮೂಲಕ ಹೊಸದೊಂದು ಲಂಘನವನ್ನು ಸಾಧಿಸಿದ್ದರು. ಇಷ್ಟೂ ಕಾಲ ತಾನು ಹುಡುಕುತ್ತಿದ್ದ ರಂಗಶೈಲಿಯೊಂದು ಈ ನಾಟಕದ ಮೂಲಕ ದೊರೆಯಿತು ಎಂಬ ಧನ್ಯತೆಯ ಭಾವ ಹಬೀಬ್ ತನ್ವೀರ್‌ಗೆ ಸಿಕ್ಕಿತ್ತು. ೧೯೭೩ರಲ್ಲಿ ಆದ ಈ ರಂಗಶಿಬಿರದ ನಂತರ ಕೇವಲ ಸ್ಫೂರ್ತ ಸ್ತರಣೆಯಿಂದಲೇ ನಾಟಕಗಳನ್ನು ಕಟ್ಟುವ ಶಕ್ತಿಯು ಹಬೀಬ್ ತನ್ವೀರ್‌ಗೆ ಸಿದ್ಧಿಸಿತ್ತು. ಹಬೀಬ್ ಜೀವನದ ಸರ್ವಶ್ರೇಷ್ಠ ಕೃತಿಯೆಂದೆನಿಸಿಕೊಂಡಿರುವ 'ಚರಣದಾಸ್ ಚೋರ್' ಸಿದ್ಧವಾಗಿದ್ದು ಇದೇ ಅವಧಿಯಲ್ಲಿ. ಈ ನಾಟಕದಲ್ಲಿ ಹಬೀಬ್ ತನ್ವೀರ್ ಅವರ ರಂಗಶೈಲಿ ಪಕ್ವವಾಯಿತು ಎನ್ನಬಹುದು.

ಹಬೀಬ್ ತನ್ವೀರ್‌ರ ನಯಾ ಥಿಯೇಟರ್ ಅನಂತರ ಪೂರ್ಣಪ್ರಮಾಣದಲ್ಲಿ ಜಾನಪದ ರಂಗಭೂಮಿಯಲ್ಲಿ ತೊಡಗಿತು. ಆದರೂ ಆಗೀಗ ಹಬೀಬ್ ತನ್ವೀರ್ ಇತರ ತಂಡಗಳಿಗೆ, ನಗರ ಕೇಂದ್ರಿತ ನಟವರ್ಗದವರಿಗೆ ಬೇರೆಯ ನಾಟಕಗಳನ್ನೂ ಮಾಡಿಸುತ್ತಿದ್ದರು. ಹಾಗೆ ಎನ್‌ಎಸ್‌ಡಿ ರೆಪರ್ಟರಿಗೆ ಮ್ಯಾಕ್ಸಿಂ ಗಾರ್ಕಿಯ 'ಎನಿಮೀಸ್' ಕೃತಿಯನ್ನು 'ದುಷ್ಮನ್' ಎಂಬ ಹೆಸರಿನಲ್ಲಿ ನಿರ್ದೇಶಿಸಿದರು. ಶ್ರೀರಾಂ ಸೆಂಟರ್‌ನ ರೆಪರ್ಟರಿಗೆ ಅಸ್ಗರ್ ವಜಾಹತಿ ಅವರ 'ಜಿಸ್ನೆ ಲಾಹೋರ್ ನಹಿ ದೇಖಾ ವೋ ಜಾಮಾಯಿ ನಹಿ' ಸಿದ್ಧಪಡಿಸಿದರು. ಇವೆರಡು ನಾಟಕಗಳಲ್ಲಿ ಈಗಾಗಲೇ ಹಬೀಬ್ ತನ್ವೀರ್ ಬೆಳೆಸಿಕೊಂಡಿದ್ದ ತಮ್ಮದೇ ಆದ ಛಾಪನ್ನು ಒತ್ತಿದ್ದರು. ಇಷ್ಟಾದರೂ ಹಬೀಬ್ ತನ್ವೀರ್ ಅವರ ರಂಗಭೂಮಿಯನ್ನು ಜಾನಪದ ರಂಗಭೂಮಿ ಎನ್ನಲಾಗದು. ಅವರು ಸಂಕೀರ್ಣ ವ್ಯಕ್ತಿತ್ವದ ನಗರ ಕಲಾವಿದರಾಗಿದ್ದರು. ಸಮಕಾಲೀನ ಸಾಮಾಜಿಕ ಮತ್ತು ರಾಜಕೀಯ ಪಲ್ಲಟಗಳನ್ನು ಕುರಿತಂತೆ ಅತೀವ ಕಾಳಜಿ ಹಬೀಬ್ ತನ್ವೀರ್ ಅವರಿಗಿತ್ತು.



'ಚರಣ್‌ದಾಸ್ ಚೋರ್' ನಾಟಕದಲ್ಲಿ ಪೊಲೀಸ್ ಪಾತ್ರದಲ್ಲಿ ಹಬೀಬ್

ಜಾನಪದ ಮತ್ತು ಸಾಂಪ್ರದಾಯಿಕ ರಂಗಭೂಮಿಯನ್ನು ಹಬೀಬ್ ತನ್ವೀರ್ ಆಯ್ಕೆ ಮಾಡಿಕೊಂಡದ್ದು ಕೂಡ ಅತೀವ ಎಚ್ಚರಿಕೆಗಳ ಜೊತೆಗೆ. ಅವರಿಗಿದ್ದ ಎಡಪಂಥೀಯ ಆಲೋಚನೆಗಳಿಗೂ ಮತ್ತು ಜನಪ್ರಿಯ ಕಲೆಯ ಬಗ್ಗೆ ಅವರಿಗಿದ್ದ ನಿಲುವುಗಳಿಗೂ ನೇರ ಸಂಬಂಧವಿತ್ತು. ಅವರಿಗೆ ಅನಾರೋಗ್ಯ ಹೆಚ್ಚಾಗಿ ಓಡಾಟವೇ ಅಸಾಧ್ಯವಾದ ದಿನಗಳವರೆಗೆ ಹಬೀಬ್ ತನ್ವೀರ್ ಸಮಾಜವಾದೀ ಸಂಘಟನೆಗಳ ಜೊತೆಗೆ ನಿಕಟ ಸಂಪರ್ಕದಲ್ಲಿದ್ದರು. ಹೀಗಾಗಿ ಅವರು ಭಾರತದ ಶ್ರೀಸಾಮಾನ್ಯನ ಸಂಕಷ್ಟ ನಿವಾರಣೆಗೆ ಬದ್ಧರಾಗಿಯೇ ತಮ್ಮ ಸೃಜನಶೀಲ ಚಟುವಟಿಕೆ ನಡೆಸಿದರು. ಹಬೀಬ್ ತನ್ವೀರ್ ಅವರ ಎಲ್ಲಾ ನಾಟಕಗಳಲ್ಲಿಯೂ ಅವರಿಗೆ ಇದ್ದ ಸಾಮಾಜಿಕ ಬದ್ಧತೆ ಮತ್ತು ಜನಸಾಮಾನ್ಯರನ್ನು ಕುರಿತ ಕಾಳಜಿಯನ್ನು ಸ್ಪಷ್ಟವಾಗಿ ಗುರುತಿಸಬಹುದಾಗಿದೆ.

ಹಬೀಬ್ ತನ್ವೀರ್ ಅವರಿಗೆ ಜಾನಪದ ಕಲೆಗಳ ಜೊತೆಗೆ ಮೂಡಿದ್ದ ಅನುಸಂಧಾನದ ಕಾರಣವಾಗಿಯೇ ಅವರು ರೂಪಾಂತರಗೊಳಿಸಿ ನಿರ್ದೇಶಿಸಿದ ಶೇಕ್ಸ್‌ಪಿಯರ್‌ನ 'ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್' (ಕಾಮದೇವ್ ಕಾ ಅಪ್ನ, ಬಸಂತಿ ರಿತು ಕಾ ಸಪ್ನ) ಮತ್ತು ಬ್ರೆಕ್ಟ್‌ನ 'ಗುಡ್ ವುಮನ್ ಆಫ್ ಸೆಜುವಾನ್' (ಷಾಜಾಪುರ್ ಕಿ ಶಾಂತಿಬಾಯ್) ನಾಟಕಗಳು ಹಬೀಬ್‌ರದ್ದೇ ಎಂದು ಗುರುತಿಸಬಹುದಾದ ಸಂಗೀತಮಯ, ಉತ್ಸವರೂಪೀ ರಂಗಪ್ರಯೋಗಗಳಾದವು. ಹಬೀಬ್ ತನ್ವೀರ್ ಅವರ 'ದೇಖ್ ರಹೇ ಹೈ ನೈನ್' (ಸ್ಟೀಫನ್ ಜ್ವೈಗ್‌ನ ಸಣ್ಣ ಕತೆಯನ್ನಾಧರಿಸಿದ್ದು) ನಾಟಕದಲ್ಲಿಯಂತೂ ಜಾನಪದ ಸಂಗೀತ ಮತ್ತು ನೃತ್ಯಗಳ ಬಳಕೆ ಹಾಗೂ ಇಂಪ್ರೂವೈಸೇಶನ್ ಶೈಲಿಯೂ ಉಚ್ಛ್ರಾಯಕ್ಕೆ ತಲುಪಿತು. ಮೂಲಕತೆಯ ಸಂಕೀರ್ಣ ವಿವರಗಳನ್ನು ಜಾನಪದ ಕಲಾವಿದರನ್ನು ಬಳಸಿಕೊಂಡೇ ಮೂಡಿಸುವಲ್ಲಿ ಹಬೀಬ್ ತನ್ವೀರ್ ಸಫಲರಾಗಿದ್ದರು. ಆದರೆ ಮೂಲಕತೆಯೊಂದನ್ನು ನಾಟಕವಾಗಿಸುವಾಗ ಹಬೀಬ್ ತನ್ವೀರ್ ತಮ್ಮ ಕಲ್ಪನೆಯನ್ನು ಹರಿಯಬಿಟ್ಟು ಅನೇಕ ಹೊಸ ದೃಶ್ಯಗಳನ್ನು ಹಾಗೂ ಸನ್ನಿವೇಶಗಳನ್ನು ಸೃಷ್ಟಿಸಿದ್ದರು. ಹೀಗಾಗಿ ಈ ನಾಟಕದಲ್ಲಿ ಅಸಂಗತ, ಆಧ್ಯಾತ್ಮಿಕ ಮತ್ತು ಸಂಕೀರ್ಣ ಪ್ರತಿಮೆಗಳ ಕೊಲಾಜ್ ತಯಾರಾಗಿತ್ತು. ಯುದ್ಧ ಕಾಲದಲ್ಲಿ ಸಾಮಾನ್ಯ ಜನ ಅನುಭವಿಸುವ ಸಂಕಷ್ಟಗಳನ್ನು ಹೇಳುತ್ತಲೇ ಹಬೀಬ್ ತನ್ವೀರ್ ತಮ್ಮ ಯುದ್ಧವಿರೋಧಿ ನಿಲುವನ್ನು ಮತ್ತು ರಾಜಕೀಯ ಶಕ್ತಿಗಳು ಶ್ರೀಸಾಮಾನ್ಯರಿಗೆ ಸಿಕ್ಕು ಎಲ್ಲವೂ ಶಾಂತವಾಗಬೇಕು ಎಂಬ ವಾದವನ್ನು ಪ್ರತಿಪಾದಿಸಿದ್ದರು.

ತಮ್ಮ ತಂಡದಲ್ಲಿದ್ದ ಶಾಲೆಯನ್ನೇ ಕಂಡಿಲ್ಲದ, ಅಕ್ಷರಸ್ಥರಲ್ಲದ ಜಾನಪದ ಕಲಾವಿದರ ಜೊತೆಗೆ ಸ್ವತಃ ಅಕ್ಷರಸ್ಥರು, ಕವಿಗಳು, ಸಂಗೀತಗಾರರು, ನಿರ್ದೇಶಕರು ಆಗಿ ದುಡಿಯುವಾಗ ಹಬೀಬ್ ತನ್ವೀರ್ ಎಂದೂ ಹೈರಾರ್ಕಿಯನ್ನು ಸೃಷ್ಟಿಸಲಿಲ್ಲ. ಬದಲಿಗೆ ಎಲ್ಲಾ ಕಲಾವಿದರಿಗೂ ಮುಕ್ತವಾಗಿ ತೆರೆದುಕೊಳ್ಳುವ ಅವಕಾಶ ಒದಗಿಸಿದರು. ಹೀಗಾಗಿಯೇ ಅವರ ನಾಟಕಗಳಲ್ಲಿ ವಿಸ್ತೃತ ಸೆಟ್‌ಗಳ ಬಳಕೆಗಿಂತ ಕಲಾವಿದ ತನ್ನನ್ನು ತಾನು ಬಿಚ್ಚಿಟ್ಟುಕೊಳ್ಳಬಹುದಾದ ತೆರಪನ್ನು ಸೃಷ್ಟಿಸುತ್ತಾ ಇದ್ದರು. ಈ ಎಲ್ಲಾ ಕಾರಣಗಳಿಗಾಗಿಯೇ ಹಬೀಬ್ ತನ್ವೀರ್ ಅವರ ನಾಟಕಗಳು ಹೊಸತನವನ್ನು ಪಡೆಯುತ್ತಿದ್ದವು ಹಾಗೂ ಜನಪ್ರಿಯವಾಗುತ್ತಿದ್ದವು.

ಇಂತಹ ಅಪರೂಪದ ಕಲಾವಿದನೊಬ್ಬನನ್ನು ಕಳೆದುಕೊಂಡದ್ದು ಭಾರತೀಯ ರಂಗಭೂಮಿಗೆ ದೊಡ್ಡ ನಷ್ಟವೇ ಆದರೂ ಹಬೀಬ್ ಬಿಟ್ಟು ಹೋಗಿರುವ ಪರಂಪರೆ ನಮ್ಮೊಂದಿಗೆ ಇದೆ. ಅತ್ಯಂತ ಪ್ರಜಾಪ್ರಭುತ್ವವಾದೀ ನಿಲುವುಗಳ ನಗರ-ಗ್ರಾಮೀಣ ಕಲೆಗಳ ಸಂಬಂಧ ಬೆಸೆಯುವ ಗುಣ ಹಬೀಬ್ ಬಿಟ್ಟುಹೋಗಿರುವ ಪರಂಪರೆಗೆ ಇದೆ. ಆ ಪರಂಪರೆಯನ್ನು ಉಳಿಸಿಕೊಂಡು ಹೋದರೂ ಸಾಕು ನಮ್ಮ ರಂಗಭೂಮಿಯು ಜೀವಂತವಾಗಿ ಇರುತ್ತದೆ.

*(ಆಕರಗಳು : 1. ಸಮರ್ ಪತ್ರಿಕೆಯಲ್ಲಿ ಜಾವೇದ್ ಮಲ್ಲಿಕ್ ಬರೆದಿದ್ದ ಲೇಖನ, 2. ಅಂತರ್ಜಾಲ ವಿಶ್ವಕೋಶ ವಿಕಿಪೀಡಿಯಾ, 3. ದಿ ಹಿಂದೂಸ್ತಾನ್ ಟೈಮ್ಸ್ ಪತ್ರಿಕೆಯಲ್ಲಿ ಬಂದಿದ್ದ ಲೇಖನ, 4. ಅಂತರ್ಜಾಲದಲ್ಲಿ ದೊರೆತ ಹಬೀಬ್ ತನ್ವೀರ್ ಕುರಿತ ಅನೇಕ ವಿವರಗಳು. 5. ಹಂಪಿಯಲ್ಲಿ ಬಿ. ವಿ. ಕಾರಂತರು ನಡೆಸಿದ ರಂಗಚಿಂತನಾ ಶಿಬಿರದಲ್ಲಿ ಆಡಿದ ಮಾತುಗಳಿಂದ ಆಯ್ದ ಟಿಪ್ಪಣಿಗಳು.)*

ಬಿ. ಸುರೇಶ
ಮೀಡಿಯಾ ಹೌಸ್ ಸ್ಟುಡಿಯೊ, ನಂ. ೧೧೬೨, ೨೩ನೇ ಮೇನ್, ೨೨ನೇ ಕ್ರಾಸ್
ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦



ನವಕರ್ನಾಟಕ ಪ್ರಕಟಿಸಿರುವ ಶ್ರೀಮತಿ ಶಾಂತಾ ನಾಗರಾಜ್ ಅವರ 'ದುಗುಡ ಕಳೆಯುವ ಮಾರ್ಗ' ಕೃತಿಯ ಅನಾವರಣ ಸಮಾರಂಭ ತಾ॥ ೧೪-೬-೨೦೦೯ರಂದು ನೆರವೇರಿತು.

ಡಾ॥ ಸಿ. ಆರ್. ಚಂದ್ರಶೇಖರ್ ಕೃತಿಯನ್ನು ಅನಾವರಣಗೊಳಿಸಿದರು. ಅಂದು ಶಾಂತಾ ನಾಗರಾಜ್ ಅವರ ಮತ್ತೊಂದು ಕೃತಿ 'ಪಟ್ಟದ ಗೊಂಬೆ' ಸಹ ಅನಾವರಣಗೊಂಡಿತು.

ಚಿತ್ರದಲ್ಲಿ (ಎಡದಿಂದ ಬಲಕ್ಕೆ) ಶ್ರೀಮತಿ ಶಾಂತಾ ನಾಗರಾಜ್, ಡಾ॥ ಪಿ. ಎಸ್. ಗೀತಾ, ಡಾ॥ ಸತ್ಯವತಿ, ಡಾ॥ ಅನಂತಪದ್ಮನಾಭ ರಾವ್ ಡಾ॥ ಸಿ. ಆರ್. ಚಂದ್ರಶೇಖರ್ ಮತ್ತು ಶ್ರೀ ನಾಗರಾಜ್.

**ಹೋ**ದ ವರ್ಷ ಕನ್ನಡ ವಿಶ್ವವಿದ್ಯಾಲಯಕ್ಕೆ ಕಾರ್ಯಾರ್ಥವಾಗಿ ಕುರುಕ್ಷೇತ್ರ ವಿಶ್ವವಿದ್ಯಾಲಯದಿಂದ ಆಧುನಿಕ ಚರಿತ್ರೆಯ ವಿದ್ವಾಂಸರಾಗಿ ಖ್ಯಾತರಾಗಿರುವ ಪ್ರೊ|| ಕೆ. ಎಲ್. ತುಟೇಜಾ ಬಂದಿದ್ದರು. ಅವರು ಬಂದಾಗ ಕರ್ನಾಟಕದಲ್ಲಿ ಆಗತಾನೇ ಸಂಸ್ಕೃತ ವಿವಿಯ ಸ್ಥಾಪನೆಯ ಬಗ್ಗೆ ಆದೇಶವು ಹೊರಬಿದ್ದಿತ್ತು. ತುಟೇಜಾ ಈ ಸುದ್ದಿ ಕೇಳಿ ಮಾರ್ಮಿಕವಾಗಿ ನಕ್ಕರು. ಕಾರಣ, ಅವರದು ಮೂಲತಃ ಸಂಸ್ಕೃತ ವಿಶ್ವವಿದ್ಯಾಲಯವಾಗಿ ಸ್ಥಾಪನೆಯಾಗಿತ್ತು. ಆದರೆ ತದನಂತರ ಸಂಸ್ಕೃತದಲ್ಲಿ ಏನು ಮಾಡಬೇಕೆಂದರಿಯದೆ ಅವರು ಇತರೆ ಸಾಂಪ್ರದಾಯಿಕ ವಿಷಯಗಳಲ್ಲಿರುವಂತೆ ಎಲ್ಲ ಕೋರ್ಸುಗಳನ್ನು ಸ್ಥಾಪಿಸಿದರು. ತುಟೇಜ ಹೇಳಿದರು: ''ಇದು ನಿಮ್ಮಲ್ಲೂ ಆಗುತ್ತದೆ. ಸ್ವಲ್ಪ ಕಾಯಿರಿ''.

ಬೇಕಾದ ಇಂಗ್ಲಿಷ್' ಎಂಬ ಲೇಖನ ನೆನಪಾಗುತ್ತಿದೆ. ಇಂಗ್ಲಿಷಿನಲ್ಲಿ ಅಪಾರ ತಿಳಿವಳಿಕೆಯಿದ್ದ ಆದರೆ ಉತ್ಕಟ ಕನ್ನಡಾಭಿಮಾನಿಯೂ ಆಗಿದ್ದ ಕುವೆಂಪು, ಇಂಗ್ಲಿಷನ್ನು ತಿರಸ್ಕರಿಸಲಿಲ್ಲ. ಬದಲಿಗೆ ಅದು ಹೇಗೆ, ಯಾಕೆ ಮತ್ತು ಎಷ್ಟು ಬೇಕು ಎಂಬುದನ್ನು ವಿಶ್ಲೇಷಿಸಿದರು. ಈ ಹಿನ್ನೆಲೆಯಲ್ಲಿ ಸಂಸ್ಕೃತವನ್ನು ಒಳಗೊಂಡಂತೆ ಜಗತ್ತಿನ ಯಾವುದೇ ಭಾಷೆಯನ್ನು ಕಲಿಯುವ ವಿಷಯದಲ್ಲಿ ಯಾಕೆ ಹೇಗೆ ಮತ್ತು ಎಷ್ಟು ಎಂಬ ಮೂರು ಘಟ್ಟದ ವಿವೇಚನೆಯಲ್ಲಿ ತೀರ್ಮಾನಿಸಬೇಕು. ಈ ನಿರ್ಣಯಗಳನ್ನು ಕನ್ನಡ ಮತ್ತು ಕರ್ನಾಟಕಗಳ ವಿಶಾಲ ಅಗತ್ಯಗಳು ರೂಪಿಸಬೇಕು.

ಅಧ್ಯಯನ ಮಾಡುವವರಿಗೆ ಬಹುಭಾಷಿಕ ಅರಿವಿನ ಆಯಾಮ ಇಲ್ಲದಿರುವುದೇ ಒಂದು ದೊಡ್ಡ ಕೊರತೆಯಾಗಿದೆ. ಹಿರಿಯ ಸಂಶೋಧಕರಾದ ಗೋವಿಂದ ಪೈ

# ಸಂಸ್ಕೃತ ವಿಶ್ವವಿದ್ಯಾಲಯ: ನಮಗೆ ಬೇಕೆ?

## – ಹಾಗಿದ್ದರೆ ಎಂಥದು ?

ಕರ್ನಾಟಕದಲ್ಲೀಗ ವಿಶ್ವವಿದ್ಯಾಲಯಗಳನ್ನು ಅಥವಾ ಅವುಗಳಲ್ಲಿ ಬೇರೆ ಬೇರೆ ಪೀಠಗಳನ್ನು ಭರದಿಂದ ಸ್ಥಾಪಿಸುವ ಕೆಲಸ ನಡೆದಿದೆ. ಆದರೆ ಅವನ್ನು ಸ್ಥಾಪಿಸುವ ಮುನ್ನ, ಇವು ಯಾಕೆ ಬೇಕೆಂಬ ಬಗ್ಗೆ ಪರಿಣತರ ಮೂಲಕ ಸರ್ಕಾರಗಳು ಪೂರ್ವಚಿಂತನೆ ನಡೆಸಿದೆಯೇ ಎಂಬುದು ಸ್ಪಷ್ಟವಾಗುವುದಿಲ್ಲ. ಯಾವ್ಯಾವುದೊ ರಾಜಕೀಯ ಧಾರ್ಮಿಕ ಸಾಮಾಜಿಕ ಒತ್ತಡಗಳಿಗೆ ಮಣಿದು ಸಂಸ್ಥೆಗಳನ್ನು ಸ್ಥಾಪಿಸುವುದು, ನಂತರ ಏನು ಮಾಡುವುದೆಂದು ಚಿಂತಿಸುವುದು – ಇದು ಸರ್ಕಾರಗಳು ಕೆಲಸ ಮಾಡುವ ವಿಧಾನವಾಗಿದೆ. ಇದೇ ಪದ್ಧತಿಯಲ್ಲಿ ಪ್ರಸ್ತುತ ಸಂಸ್ಕೃತ ವಿಶ್ವವಿದ್ಯಾಲಯವೂ ಸ್ಥಾಪನೆಯಾಗುವಂತಿದೆ. ಈಗಿರುವ ಬಲಪಂಥೀಯ ಸರ್ಕಾರದ ಹಿನ್ನೆಲೆಯಲ್ಲಿ ನೋಡುವುದಾದರೆ, ಇದರ ಸ್ಥಾಪನೆಯ ಹಿಂದೆ ಅಡಗಿಸಿಟ್ಟ ಉದ್ದೇಶಗಳೂ ಇದ್ದಂತಿವೆ. ಇದರಿಂದಾಗಿಯೇ, ಇದು ಯಾವ ಉದ್ದೇಶಕ್ಕಾಗಿ ಸ್ಥಾಪನೆಯಾಯಿತು ಎಂಬುದು ತಮಗೆ ಗೊತ್ತಿಲ್ಲವೆಂದು ನಮ್ಮ ನಾಡಿನ ಹಿರಿಯ ಚಿಂತಕರೂ ಲೇಖಕರೂ ಆದ ಜಿ. ಎಸ್. ಶಿವರುದ್ರಪ್ಪ, ಚಂದ್ರಶೇಖರ ಕಂಬಾರ, ಎಂ. ಎಂ. ಕಲಬುರ್ಗಿ, ಹಂಪ ನಾಗರಾಜಯ್ಯ – ಮುಂತಾದವರು ತಮ್ಮ ಸೋಜಿಗ ವ್ಯಕ್ತಪಡಿಸುತ್ತಿರುವರು. ಆದರೆ ಇದನ್ನು 'ಸಂಸ್ಕೃತದ ಬಗ್ಗೆ ಗೊತ್ತಿಲ್ಲದವರು ಸಂಸ್ಕೃತದ ವಿರುದ್ಧ ಕಾಯುತ್ತಿರುವ ದ್ವೇಷ' ಎಂಬಂತೆ ತಿಳಿದು ಕೆಲವರು ಪ್ರತಿಕ್ರಿಯಿಸುತ್ತಿದ್ದಾರೆ. ಇದು ಸರಿಯಲ್ಲ.

ಈ ಸನ್ನಿವೇಶದಲ್ಲಿ ನನಗೆ ಕುವೆಂಪು ಅವರ 'ನಮಗೆ

ಅವರಿಗೆ ೧೮ ಭಾಷೆಗಳಲ್ಲಿ ಪರಿಶ್ರಮವಿತ್ತು. ಸಂಸ್ಕೃತದ ಹಿನ್ನೆಲೆಯಿದ್ದರೆ, ಅದರ ಜಾತಿಭಾಷೆಗಳಾದ ಫಾರಸಿ ಉರ್ದು ಇಂಗ್ಲಿಷುಗಳನ್ನು ಭಾಷಿಕವಾಗಿ ಚೆನ್ನಾಗಿ ತಿಳಿಯಬಹುದು. ಸಂಸ್ಕೃತದಿಂದ ಮಾತ್ರವಲ್ಲ, ಕನ್ನಡವನ್ನು ಅದು ಕೊಡುಕೊಳೆ ಮಾಡಿರುವಂತಹ ತುಳು, ತೆಲುಗು, ಫಾರಸಿ, ಅರಬ್ಬಿ, ಇಂಗ್ಲಿಷ್, ಪ್ರಾಕೃತ, ಮರಾಠಿಗಳ ಮೂಲಕ ಅದನ್ನರಿಯುವ ಕೆಲಸವನ್ನು ನಾವಿನ್ನೂ ಮಾಡಬೇಕಿದೆ. ಅದರಲ್ಲೂ ಕನ್ನಡ ಸಾಹಿತ್ಯದ ವಿದ್ಯಾರ್ಥಿಗಳಿಗೆ ಜತೆಭಾಷೆಯಾಗಿ ಸಂಸ್ಕೃತ ಮತ್ತು ಸಂಸ್ಕೃತ ಸಾಹಿತ್ಯ ತಿಳಿಯುವುದರ ಅಗತ್ಯ ಬಹಳವಿದೆ. ಸಂಸ್ಕೃತದ ಪ್ರಾಥಮಿಕ ಜ್ಞಾನವಿದ್ದರೆ ಸಂಸ್ಕೃತ ಶಬ್ದಗಳ ವಿಷಯದಲ್ಲಿ ಸಾಮಾನ್ಯವಾಗಿ ಆಗುವ ಕಾಗುಣಿತ ದೋಷಗಳನ್ನು ತಡೆಯಬಹುದು ಎನ್ನುವುದು ಒಂದು ಸಣ್ಣ ಸಂಗತಿ. ನಿಜವಾಗಿ ಒದಗುವ ಸಹಾಯವೆಂದರೆ, ಕನ್ನಡದಲ್ಲಿ ಬಳಕೆಯಾಗುತ್ತಿರುವ ಸಂಸ್ಕೃತ ಶಬ್ದಗಳು ಹೇಗೆ ರಚನೆಗೊಂಡಿವೆ ಮತ್ತವು ಹೇಗೆ ರೂಪಾಂತರ ಪಡೆಯುತ್ತವೆ ಎಂಬುದನ್ನು ತಿಳಿಯುವುದು; ಪಂಪ ವಚನಕಾರರು ಸೇರಿದಂತೆ, ಕನ್ನಡ ಸಾಹಿತ್ಯದಲ್ಲಿ ನಡೆದಿರುವ ಸಂಸ್ಕೃತ ಭಾಷೆ ಮತ್ತು ಸಾಹಿತ್ಯದ ಅನುಸಂಧಾನವನ್ನು ಅರಿಯುವುದು. ಸಂಸ್ಕೃತ ತಿಳಿವಳಿಕೆಯು ಬೇರೆ ಬೇರೆ ಕ್ಷೇತ್ರಗಳಲ್ಲಿ ಸಮೃದ್ಧ ವಾಙ್ಮಯವನ್ನು ಹೊಂದಿದೆ. ಉದಾಹರಣೆಗೆ, ಸಿದ್ಧಸಿದ್ಧಾಂತ ಪದ್ಧತಿ, ವಚನಸೂಚಿ, ಕುಲಾರ್ಣವ ತಂತ್ರವೇ ಮೊದಲಾದ ನೂರಾರು

ಯಾವ ಭಾಷೆಯೂ ಅದರೊಳಗಿನ ತಿಳಿವಳಿಕೆಯೂ ತನಗೆ ತಾನೇ ಕೇಡಲ್ಲ. ಆದರೆ ಅದನ್ನು ಯಾರು ಅಧ್ಯಯನ ಮಾಡುತ್ತಾರೆ, ಯಾವ ದೃಷ್ಟಿಕೋನದಲ್ಲಿ ಅಧ್ಯಯನ ಮಾಡುತ್ತಾರೆ ಮತ್ತು ಯಾಕಾಗಿ ಮಾಡುತ್ತಾರೆ ಎಂಬುದರ ಮೇಲೆ ಅದು ಒಳಿತೂ ಕೆಡುಕೂ ಆಗುತ್ತದೆ. ಯಾವುದೇ ಭಾಷೆಯಿರಲಿ, ಅದು ರಾಷ್ಟ್ರ ಜಾತಿ ಮತ್ತು ವರ್ಗಗಳ ಹಿತಾಸಕ್ತಿಯ ಜತೆಗೆ, ರಾಜಕೀಯ ಅಧಿಕಾರದ ಜತೆಗೆ ಸಮೀಕರಣಗೊಳ್ಳುತ್ತಿದ್ದಂತೆ, ಅಸಮಾನತೆಯ ಶ್ರೇಣೀಕರಣವನ್ನು ಸೃಷ್ಟಿಸುತ್ತದೆ. ಅದು ತಾನು ಭಿನ್ನ ಮತ್ತು ಶ್ರೇಷ್ಠನೆಂಬ ಅಹಮಿಕೆಯನ್ನು ಪಡೆದುಕೊಳ್ಳುತ್ತದೆ. ಹಿಂದೆ ಚರಿತ್ರೆಯಲ್ಲಿ ಇಂಗ್ಲಿಷಿಗೆ, ಫಾರಸಿಗೆ ಆಗಿದ್ದೂ ಹೀಗೆಯೇ. ಸಂಸ್ಕೃತಕ್ಕೆ ಆಗಿದ್ದು ಹೀಗೆಯೇ.

ವಿಚಿತ್ರವೆಂದರೆ, ಹೀಗೆ ತಮ್ಮನ್ನು ಶ್ರೇಷ್ಠವೆಂದು ಜನರಿಂದ ದೂರವುಳಿದ ಕೆಲವು ಭಾಷೆಗಳು, ಜನಪರತೆಯ ದೃಷ್ಟಿಯಿಂದ 'ನಿರ್ಜೀವ' ಸ್ಥಿತಿಗೆ ಹೋಗಿದ್ದು ಸಂಸ್ಕೃತ, ಫಾರಸಿ ಮುಂತಾದ ಈ ಅಭಿಜಾತ ಭಾಷೆಗಳಿಗೆ ಭಾರತದಲ್ಲಿ ಮರುಹುಟ್ಟು ಒದಗಿದ್ದರೆ, ಜನಭಾಷೆಗಳಲ್ಲಿ ಅವಕ್ಕೆ ಬದಲಿ ಆದಾನದ ಮತ್ತು ಪುನರ್ರೂಪಗಳಲ್ಲಿ, ಕುವೆಂಪು, ಬೇಂದ್ರೆ, ಮಾಸ್ತಿಯಂಥವರು ಇವರೆಲ್ಲ ಸಂಸ್ಕೃತ ವಾಙ್ಮಯಕ್ಕೆ ಹೀಗೆ ಮರುಹುಟ್ಟು ಕೊಟ್ಟವರು.

ಡಾ|| ರಹಮತ್ ತರೀಕೆರೆ

ದಾರ್ಶನಿಕ ಪಠ್ಯಗಳನ್ನು ನಾವು ಅರಿಯಬೇಕಿದೆ. ಸಂಸ್ಕೃತ ವಾಙ್ಮಯದ ಒಡನಾಟದಿಂದ ಬಂದಿರುವ ಶಕ್ತಿಯನ್ನು ಕುವೆಂಪು ಅವರ ಗದ್ಯದಲ್ಲಿ, ಕುರ್ತಕೋಟಿಯವರ ಸಾಹಿತ್ಯ ವಿಶ್ಲೇಷಣೆಯಲ್ಲಿ, ಮೂರ್ತಿರಾಯರ ಚಿಂತನೆಯಲ್ಲಿ ಕಾಣಬಹುದು. ಶಂಬಾ ಜೋಶಿಯವರ ಚಿಂತನೆಯಲ್ಲಿ ಸಹ ಕಾಣಬಹುದು.

ಆದರೆ ಕರ್ನಾಟಕದಲ್ಲಿ ನಡೆದಿರುವ ಸಂಸ್ಕೃತ ಅಧ್ಯಯನಗಳಲ್ಲಿ ಇಂತಹ ಆಯಾಮಗಳು ಕಡಿಮೆ. ಇದಕ್ಕೆ ಕಾರಣ, ಸಂಸ್ಕೃತವಲ್ಲ, ಅದನ್ನು ಕಲಿಸುವ ಮತ್ತು ಅಧ್ಯಯನ ಮಾಡುವ ವ್ಯವಸ್ಥೆಯಲ್ಲಿರುವ ದೋಷ. ಮೊದಲನೆಯದಾಗಿ – ಕನ್ನಡವೇ ಮುಂತಾದ ದೇಶಭಾಷೆಗಳಿಗೆ ಶಕ್ತಿಪ್ರದಾನ ಮಾಡಿದ ಭಾಷೆಯೆಂಬ ಗರ್ವ ಹಾಗೂ ಸಂಸ್ಕೃತದ ಋಣದಲ್ಲಿ ನಾವಿದ್ದೇವೆ ಎಂಬ ತಪ್ಪು ಹಿರಿಮೆಯಿಂದ ತಪ್ಪಿಸಿಕೊಳ್ಳಲಾಗದೆ ಇರುವುದು. ಎರಡು ಭಾಷೆಗಳ ನಡುವೆ ಹಾಗೆ ಏಕಮುಖ ಸಂಬಂಧವಿರುವುದಿಲ್ಲ. ಎರಡನೆಯದಾಗಿ – ಸಂಸ್ಕೃತ, ಫಾರಸಿ, ಪ್ರಾಕೃತ, ಪಾಲಿ ಇತ್ಯಾದಿ 'ಕ್ಲಾಸಿಕಲ್' ಎನಿಸಿಕೊಂಡ ಭಾಷೆಗಳ ಅಧ್ಯಯನಗಳು, ಕರ್ನಾಟಕದ ಭಾಷೆ, ಜನಜೀವನ ಮತ್ತು ಸಂಸ್ಕೃತಿಯ ಜತೆಗೆ ಇಟ್ಟುಕೊಳ್ಳಬೇಕಾದ ಸಂಬಂಧದ ಸ್ವರೂಪವೇನು ಎಂಬ ಪ್ರಶ್ನೆಯನ್ನು ಬಿಡಿಸಿಕೊಳ್ಳದೆ ಇರುವುದು. ಈ ಪ್ರಶ್ನೆಯನ್ನು ಕರ್ನಾಟಕದ ಆಚೆ ಕೂಡ ಅಸ್ತಿತ್ವವುಳ್ಳ ಉರ್ದು, ಫಾರಸಿಗಳ ಮತ್ತು ಸಂಸ್ಕೃತಗಳ ವಿಷಯದಲ್ಲಿ ಕೇಳಿಕೊಳ್ಳಲೇಬೇಕಿದೆ.

ಆದರೆ, ಈಗ ಸ್ಥಾಪನೆಯಾಗಿರುವ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತವನ್ನು ಈ ಬಗೆಯಲ್ಲಿ ಕನ್ನಡ ಮತ್ತು ಕರ್ನಾಟಕಗಳಿಗೆ ಸಂಗಾತಿ ಮತ್ತು ಸಹವರ್ತಿಯಾಗುವ ಅಧ್ಯಯನ ಗೈಯ್ಯುವ ಸಾಧ್ಯತೆಗಳು ತುಂಬ ಕಡಿಮೆಯಿವೆ. ಇದಕ್ಕೆ ಕಾರಣ, ಡಾ|| ಟಿ. ಆರ್. ಚಂದ್ರಶೇಖರ್ ಅವರು 'ಪ್ರಜಾವಾಣಿ'ಯಲ್ಲಿ ಬರೆದ ಲೇಖನದಲ್ಲಿ ಸೂಚಿಸಿರುವಂತೆ, ಈ ಕುರಿತು ಪೂರ್ವಭಾವಿ ಚರ್ಚೆಯೇ ನಡೆದಂತಿಲ್ಲ. ಆದರೆ ಕನ್ನಡ ವಿಶ್ವವಿದ್ಯಾಲಯ ಸ್ಥಾಪನೆಯ ಹೊತ್ತಿನಲ್ಲಿ ಅದರ ಸ್ವರೂಪದ ಬಗ್ಗೆ ದೊಡ್ಡ ಮಟ್ಟದ ಸಾರ್ವಜನಿಕ ಚರ್ಚೆ ನಡೆದಿತ್ತು. ಆದ್ದರಿಂದಲೇ ಕೆಲವರು ತಮಗೆ ಅನುಕೂಲವಾದ ರಾಜಕೀಯ ಆಳ್ವಿಕೆ ಇರುವಾಗಲೇ, ತಮಗೆ ಬೇಕಾದ ಕೆಲಸವನ್ನು ಉಪಾಯವಾಗಿ ಮಾಡಿಕೊಳ್ಳುವ ನೆಲೆಯಲ್ಲಿ ಇದು ಆರಂಭವಾಗಿದೆ ಎಂಬ ಗುಮಾನಿ ಬಂದಿತು; ಅದಕ್ಕೆ 'ವೇದ'ವೆಂಬ ಶಬ್ದವು ಲಗತ್ತಾದ ಬಳಿಕವಂತೂ ಈ ಗುಮಾನಿ ಮತ್ತಷ್ಟು ದೃಢವಾಯಿತು.

ಹಿಂದೆ ಜಾನಪದ ಅಕಾಡೆಮಿ ಆರಂಭವಾಗುವಾಗ, ಅದಕ್ಕೆ ಯಕ್ಷಗಾನ ಎಂಬ ಪದವನ್ನು ಸೇರಿಸಿದಾಗಲೂ ಇಂತಹುದೇ ಪಕ್ಷಪಾತ ನಡೆದಿತ್ತು. ಕರ್ನಾಟಕದ ಜನಪದ ರಂಗಭೂಮಿಗಳಾದ ಬಯಲಾಟ, ಸಣ್ಣಾಟ, ಕೃಷ್ಣ ಪಾರಿಜಾತಗಳಂತೆ ತಾನೂ ಒಂದು ರಂಗಪ್ರಕಾರವಾಗಿದ್ದ ಯಕ್ಷಗಾನವು, ಅದನ್ನು ಪ್ರತಿನಿಧಿಸುವವರ ಜಾತಿ ಮತ್ತು ಪ್ರದೇಶದ ಬಲದ ಕಾರಣ, ಅಕಾಡೆಮಿಯ ಶೀರ್ಷಿಕೆಯಲ್ಲಿಯೇ ಜಾಗವನ್ನು ಪಡೆದುಕೊಂಡಿತ್ತು. ಈಗಂತೂ ಅದು ತನ್ನದೇ ಆದ ಅಕಾಡೆಮಿಯನ್ನು ಮಾಡಿಕೊಂಡು ಹೊರಗೆಹೋಗಿದೆ. ಆದರೆ ಈ ಯಾವ ಭಾಗ್ಯವೂ ದೊಡ್ಡಾಟ, ಬಯಲಾಟ, ಸಣ್ಣಾಟ, ಕೃಷ್ಣಪಾರಿಜಾತಗಳಿಗೆ ಸಿಕ್ಕಲಿಲ್ಲ. ಜನರ ತೆರಿಗೆಯ ಹಣದಲ್ಲಿ ಸ್ಥಾಪನೆಯಾಗುವ ಸಾರ್ವಜನಿಕ ಸಂಸ್ಥೆಗಳು ಹಲವನ್ನು ಒಳಗೊಳ್ಳುವ ವಿಶಾಲತೆಯನ್ನು ಪಡೆದುಕೊಳ್ಳದಿದ್ದರೆ, ಕೆಲವು ವರ್ಗ ಇಲ್ಲವೇ ಪ್ರದೇಶಗಳ ಹಿತಾಸಕ್ತಿಯನ್ನು ರಕ್ಷಿಸುವಷ್ಟಕ್ಕೆ ನಿಂತುಬಿಡುತ್ತವೆ. ಈ ಹಿನ್ನೆಲೆಯಲ್ಲಿ, ಕರ್ನಾಟಕದ ಎಲ್ಲ ಜನಭಾಷೆಗಳು ಹಾಗೂ ಅವುಗಳಲ್ಲಿರುವ ತಿಳಿವಳಿಕೆಯ ಜತೆ ಬೆಸೆದುಕೊಳ್ಳುವ ರೀತಿಯಲ್ಲಿ ಸಂಸ್ಕೃತ ಮತ್ತು ವೇದ ವಿಶ್ವವಿದ್ಯಾಲಯವನ್ನು ಹೇಗೆ ಮಾರ್ಪಡಿಸುವ ಅಗತ್ಯವಿದೆ ಎಂಬ ಚರ್ಚೆ ಶುರುವಾಗಬೇಕಿದೆ. ಈ ದಿಸೆಯಲ್ಲಿ ಎದುರಾಗುವ ಮುಖ್ಯ ಸಮಸ್ಯೆಗಳು ಎರಡು:

೧. ಸಂಸ್ಕೃತ ಅಧ್ಯಯನಗಳಲ್ಲಿ ನಿರ್ದಿಷ್ಟ ಸಾಮಾಜಿಕ ಹಿನ್ನೆಲೆಯಿಂದ ಬಂದ ಜನರು ತೊಡಗಿಕೊಂಡು, ಅದನ್ನು ತಮ್ಮ ಜಾತಿ ಅಸ್ಮಿತೆಯ ಕೋಟೆಯನ್ನಾಗಿ ಮಾಡಿಕೊಂಡಿರುವ ಸಂಗತಿ. ಇದಕ್ಕೆ ವಿನಾಯಿತಿಯಂತೆ, ಸಂಸ್ಕೃತ ಅಧ್ಯಯನಗಳಲ್ಲಿ ವಿಭಿನ್ನ ಸಾಮಾಜಿಕ ಹಿನ್ನೆಲೆಯವರ ಹೆಸರುಗಳನ್ನು ಹೇಳಲಾಗುತ್ತದೆ. ಆದರೆ ಅವರ ಸಂಖ್ಯೆ ಶೇಕಡ ೧ಕ್ಕಿಂತಲೂ ಕಡಿಮೆ. ಹೀಗಾಗಿಯೇ ಸಂಸ್ಕೃತ ಅಧ್ಯಯನ ಸಂಸ್ಥೆಗಳು ಅಗ್ರಹಾರಗಳಂತೆ ಕಾಣುತ್ತವೆ. ಕರ್ನಾಟಕದ ಉರ್ದು ಅಕಾಡೆಮಿಯ ಬಗ್ಗೆ ಕೂಡ ಈ ಮಾತನ್ನು ಹೇಳಬೇಕು. ಅಲ್ಲಿ ಕೇವಲ ಮುಸ್ಲಿಮರು ಇರಬೇಕಾದ್ದಿಲ್ಲ. ಉರ್ದು ಭಾಷೆ ಮತ್ತು ಸಾಹಿತ್ಯ ಬಲ್ಲ ಎಲ್ಲ ಧರ್ಮದ ಜನರೂ ಇರುವುದು ಸಾಧ್ಯವಾಗಬೇಕು. ಅದರಲ್ಲೂ ದಿ. ಶಾಂತರಸರಂತಹ ಕನ್ನಡ ಸಾಹಿತ್ಯ ಹಿನ್ನೆಲೆಯುಳ್ಳ ಉರ್ದು ಬಲ್ಲವರು ಇರುವಂತೆ ಆಗಬೇಕು. ಆಗ ಅದಕ್ಕೆ ಅರ್ಥಪೂರ್ಣ ಆಯಾಮ ಸಿಗುತ್ತದೆ. ಕನ್ನಡ ವಿವಿಯು ಕರ್ನಾಟಕದ ಎಲ್ಲ ಸಾಮಾಜಿಕ ವರ್ಗಗಳಿಂದ ಎಲ್ಲ ಭಾಗಗಳಿಂದ ಹಲವು ದೃಷ್ಟಿಕೋನಗಳಿರುವ ಅಧ್ಯಾಪಕರು ಇರುವ ಕಾರಣದಿಂದ ಸಾಂಸ್ಕೃತಿಕ ಬಹುಮುಖತೆಯನ್ನು ಪಡೆದುಕೊಂಡಿದೆ ಎಂಬುದನ್ನು ಇಲ್ಲಿ ನೆನೆಯಬಹುದು. ಸಂಸ್ಕೃತವನ್ನು ಮೇಲ್ಜಾತಿಗೆ ಸೇರಿದ ಸಂಪ್ರದಾಯವಾದಿ ಮನಸ್ಸುಗಳು ಜಾತಿ ಆಸ್ತಿಯಂತೆ ಪರಿಭಾವಿಸಿರುವುದರಿಂದ, ಅನ್ಯಾಯವಾಗಿರುವುದು ಸಂಸ್ಕೃತಕ್ಕೆ ಮತ್ತು ಅದರೊಳಗಿನ ಜ್ಞಾನಕ್ಕೆ ಎಂಬುದನ್ನು ಮನಗಾಣಬೇಕು.

೨. ಎರಡನೆಯದು ಸಂಸ್ಕೃತ ಅಧ್ಯಯನಗಳನ್ನು ಯಾವ ದೃಷ್ಟಿಕೋನಗಳಲ್ಲಿ ಮಾಡಲಾಗುತ್ತದೆ ಎಂಬ ಸಂಗತಿ. ಕರ್ನಾಟಕದಲ್ಲಿ ಮಾಡಲಾಗಿರುವ ಸಂಸ್ಕೃತ ಅಧ್ಯಯನಗಳು ಬಹುತೇಕ ಸಾಂಪ್ರದಾಯಿಕ ನೆಲೆಯವು. ಕಳೆದ ಕೆಲವು ವರ್ಷಗಳಿಂದ ಮನುಧರ್ಮ ಶಾಸ್ತ್ರ, ರಾಮಾಯಣ, ಮಹಾಭಾರತ ಮುಂತಾದವನ್ನು ಕನ್ನಡದ ಹಲವು ಸಂಸ್ಕೃತ ವಿದ್ವಾಂಸರು ಮಾಡುತ್ತಿರುವುದನ್ನು ನೋಡಿದರೆ ಕೂಡ ಈ ಅಂಶ ಸ್ಪಷ್ಟವಾಗುತ್ತದೆ. ಸಂಸ್ಕೃತದೊಳಗಿರುವ ಅನೇಕ ಜನಪರ ಪಠ್ಯಗಳನ್ನು ಮತ್ತು ಚಿಂತನೆಗಳನ್ನು ಉಪಾಯವಾಗಿ ಪಕ್ಕಕ್ಕಿಡುವುದು ಇಲ್ಲವೇ ದುರುಳೀಕರಿಸುವುದು; ಸಾಂಪ್ರದಾಯಿಕ ಚಿಂತನೆ ಇರುವ ಪಠ್ಯಗಳನ್ನು ವೈಭವೀಕರಿಸುವುದು; ಕನ್ನಡದ ಕವಿಗಳಲ್ಲಿ ಸಂಸ್ಕೃತದ ಋಣವನ್ನು ಹುಡುಕುವುದು – ಈ ಪ್ರವೃತ್ತಿ ನಡೆದಿದೆ.

ಒಂದೊಮ್ಮೆ ಸಂಸ್ಕೃತ ವಾಙ್ಮಯವನ್ನು ಮೇಲ್ಕಾಣಿಸಿದ ಜಡವೂ ಸಾಂಪ್ರದಾಯಿಕವೂ ಆದ ದೃಷ್ಟಿಕೋನಕ್ಕೆ ಭಿನ್ನವಾಗಿ, ಜನಪರ ಆಶೋತ್ತರಗಳ ಹಿನ್ನೆಲೆಯಲ್ಲಿ ಅಧ್ಯಯನ ಮಾಡುವವರಿದ್ದರೆ, ಅವರನ್ನು ನಿರ್ಲಕ್ಷ್ಯದ

ಮೂಲಕ ಬದಿಗೆ ಸರಿಸಲಾಗುತ್ತದೆ. ನಮ್ಮ ದೇಶದ ಬಹುದೊಡ್ಡ ವಿದ್ವಾಂಸರೂ ಸಂಸ್ಕೃತಿ ಚಿಂತಕರೂ ಆದ ಶಂಬಾ ಜೋಶಿಯವರ ವಿಷಯದಲ್ಲಿ ಇಂತಹ ಮೌನದ ರಾಜಕಾರಣ ಮಾಡಲಾಯಿತು. ಈಗ ಮತ್ತೊಬ್ಬ ಸಂಸ್ಕೃತ ವಿದ್ವಾಂಸರಾದ ಡಾ॥ ಡಿ. ಎನ್. ಶಂಕರ ಭಟ್ಟರ ವಿಷಯ ದಲ್ಲಿಯೂ ಇದನ್ನು ಮಾಡಲಾಗುತ್ತಿದೆ. ಡಾ॥ ಜಿ. ರಾಮಕೃಷ್ಣ ಅವರಂತಹ ವಿದ್ವಾಂಸರನ್ನು ಈ ಹಿತಾಸಕ್ತಿಗಳು ಒಳಗೊಳ್ಳುವುದು ಸಾಧ್ಯವೇ ಇಲ್ಲ. ಆದರೆ ಜಾತಿ ಮತ್ತು ವರ್ಣವಾದಿ ಮೌಲ್ಯಗಳಿಗೆ ಪೂರಕವಾಗಿ, ಫ್ಯೂಡಲಿಸಂಗೆ ಪೂರಕವಾಗಿ ಅಧ್ಯಯನ ಮಾಡುವವರು ಕೆಳಜಾತಿ ಯವರಲ್ಲಿ ಇದ್ದರೆ, ಅವರನ್ನು ಉಪಕರಣದಂತೆ ಬಳಸ ಲಾಗುತ್ತದೆ. ಇದು ಲಾಗಾಯಿತ್ತಿನಿಂದ ನಡೆದುಕೊಂಡು ಬಂದ ಯುದ್ಧತಂತ್ರ.

ಈ ಹಿನ್ನೆಲೆಯಲ್ಲಿ ಕರ್ನಾಟಕದಲ್ಲಿ ಆರಂಭವಾಗುವ ಯಾವುದೇ ಭಾಷಾ ವಿಶ್ವವಿದ್ಯಾಲಯಕ್ಕೆ ಅದರಲ್ಲಿ ತೊಡಗುವ ಜನರ ಸಾಮಾಜಿಕ ಹಿನ್ನೆಲೆ ಯಾವುದು ಎನ್ನುವಷ್ಟೇ, ಸಂಸ್ಕೃತವನ್ನು ಯಾವ ದೃಷ್ಟಿಕೋನದಿಂದ ಅಧ್ಯಯನ ಮಾಡಬೇಕು ಎಂಬುದು ಸಹ ಮುಖ್ಯ ಸಂಗತಿಯಾಗಿದೆ.

ಆದರೆ ಬಲಪಂಥೀಯರು ಸಂಸ್ಕೃತ ರಕ್ಷಣೆಯ ಹೆಸರಲ್ಲಿ ಈ ವಿದ್ವತ್ ಲೋಕದಲ್ಲಿ ಸೇರಿಕೊಂಡು, ಅಲ್ಲಿ ಬೇರೆಬೇರೆ ದೃಷ್ಟಿಕೋನಗಳು ಮತ್ತು ಪ್ರತಿಭೆಗಳು ಹತ್ತಿರಬಾರದಂತೆ ಒಂದು ಬೇಲಿ ಹಾಕಿಬಿಡುತ್ತಾರೆ. ಕರ್ನಾಟಕದಲ್ಲಿ ಈಗಿರುವ ರಾಜಕೀಯ ಸನ್ನಿವೇಶವು ಇಂತಹ ಸಂಸ್ಥೆಗಳನ್ನು ಸ್ಥಾಪಿಸಿಕೊಳ್ಳುವುದಕ್ಕೂ ಅದರೊಳಗೆ ತಮಗೆ ಬೇಕಾದವರನ್ನು ಹೊಗಿಸುವುದಕ್ಕೂ ಬಲಪಂಥೀಯರಿಗೆ ಸುವರ್ಣ ಅವಕಾಶ ಒದಗಿಸಿದೆ. ಎನ್‌ಡಿಎ ಸರ್ಕಾರವಿದ್ದಾಗಲೂ ಶ್ರೀ ಮುರಳಿ ಮನೋಹರ ಜೋಶಿಯವರನ್ನು ಮಾನವ ಸಂಪನ್ಮೂಲ ಮಂತ್ರಿ ಯನ್ನಾಗಿಸಿ ದೇಶಾದ್ಯಂತ ಸಂಸ್ಕೃತ ಅಧ್ಯಯನಕ್ಕೆ ಸಂಸ್ಥೆ ಗಳನ್ನು ಸ್ಥಾಪಿಸಲಾಯಿತು. ದೆಹಲಿಯ ಜವಹರಲಾಲ್ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತಕ್ಕಾಗಿ ದೊಡ್ಡ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಹಿಂದಿನಿಂದಲೂ ಇದ್ದ ಸಂಸ್ಕೃತ ಸಂಸ್ಥೆಗಳಿಗೆ ಯಥೇಚ್ಛ ಆರ್ಥಿಕ ಸಂಪನ್ಮೂಲಗಳನ್ನು ಒದಗಿಸಲಾಯಿತು. ಇದೆಲ್ಲ ಹಿಂದೆ ರಾಜರ ಕಾಲದಲ್ಲಿ ಪುರೋಹಿತಶಾಹಿಗಳು ಅಗ್ರಹಾರಗಳಿಗೆ ದತ್ತಿದಾನಗಳನ್ನು ಬರುವಂತೆ ಮಾಡಿಕೊಂಡು ಹಸನಾಗಿ ಬದುಕಿದ ರೀತಿಯನ್ನು ನೆನಪಿಸುತ್ತದೆ. ಸಮಸ್ತ ಹಿಂದುಗಳ ಸಂಘಟನೆಯ ಹೆಸರಲ್ಲಿ ಬ್ರಾಹ್ಮಣವಾದಿ ಅಜೆಂಡಗಳನ್ನು ಜಾರಿಗೊಳಿಸುವಂತೆಯೇ, ಸಂಸ್ಕೃತ ಸಮಸ್ತ ಭಾರತದ ಪ್ರಾಚೀನ ಭಾಷೆಯೆಂಬ ಹೆಸರಲ್ಲಿ ಬ್ರಾಹ್ಮಣವಾದಿ ಆಶಯ ಗಳನ್ನು ಉಪಾಯವಾಗಿ ಈಡೇರಿಸಿಕೊಳ್ಳುವಿಕೆಯು ಸಂಸ್ಕೃತ ಮತ್ತು ವೇದ ವಿಶ್ವವಿದ್ಯಾಲಯದಲ್ಲಿ ಕೆಲಸ ಮಾಡಿರುವುದು ಸ್ಪಷ್ಟವಾಗಿದೆ.

ಆದರೆ ಈ ಕುರಿತು ಪ್ರಶ್ನೆ ಮಾಡಿದ ಕೂಡಲೆ, ಅವರನ್ನು ಹಿಂದುವಿರೋಧಿಗಳು ಭಾರತೀಯ ಸಂಸ್ಕೃತಿಯ ವಿರೋಧಿಗಳು ಎಂದು ಹೆಸರಿಟ್ಟು ಹಲ್ಲೆ ನಡೆಸಲಾಗುತ್ತದೆ. ಸಂಸ್ಕೃತ ವಾಙ್ಮಯವನ್ನು ಜನಪರವಾದ ದೃಷ್ಟಿಕೋನದಲ್ಲಿ ವಿಮರ್ಶಾತ್ಮಕವಾಗಿ ವಿಶ್ಲೇಷಿಸಲು ಇಲ್ಲವೇ ಸೃಜನಶೀಲ ವಾದ ಮರುಸೃಷ್ಟಿ ಕೊಡಲು ಯತ್ನಿಸಿದರೆ, ಅದನ್ನು




ವಿರೋಧಿಸಲಾಗುತ್ತದೆ. 'ಶೂದ್ರತಪಸ್ವಿ' ನಾಟಕ ಬರೆದಾಗ ಕುವೆಂಪು ಅವರ ಮೇಲೆ ನಡೆದ ವಾಗ್ದಾಳಿಗಳನ್ನು ಇಲ್ಲಿ ನೆನೆಯಬೇಕು. ಈ ದಾಳಿಗಳು ಇನ್ನೂ ನಿಂತಿಲ್ಲ. ಇದಕ್ಕೆ ಸಾಕ್ಷಿ, ಈಚೆಗೆ ಪ್ರವಚನವನ್ನು ತಮ್ಮ ಕಸುಬು ಮಾಡಿ ಕೊಂಡಿರುವ ಶ್ರೀ ನಾರಾಯಣಾಚಾರ್ಯ ಎಂಬ ಇಂಗ್ಲಿಷ್-ಸಂಸ್ಕೃತ ಪಂಡಿತರು, ಮೈಸೂರಿನ ಕಾರ್ಯಕ್ರಮವೊಂದರಲ್ಲಿ ಕುವೆಂಪು ಅವರಿಗೆ ಸಂಸ್ಕೃತ ಗೊತ್ತಿರಲಿಲ್ಲ ಎಂದು ಮಾಡಿರುವ ಕೆಳಮಟ್ಟದ ಮತ್ತು ಅಸಹನೆಯ ಟೀಕೆ. ಇದು ಜಾತಿ ಮತ್ತು ಸಂಸ್ಕೃತ ಕಲಿಕೆಯಿಂದ ಬಂದ ಗರ್ವ. ಈ ಗರ್ವ ಎಳ್ಳಷ್ಟೂ ಕಡಿಮೆ ಯಾಗಿಲ್ಲ ಎನ್ನುವುದಕ್ಕೆ ಶ್ರೀಯುತರು ೧೫.೬.೦೮ರಂದು ತಮ್ಮ ಹೇಳಿಕೆ ಸಮರ್ಥಿಸಿಕೊಂಡು ಬರೆದಿರುವ ವಾಚಕರ ವಾಣಿ ಪತ್ರ ಸಾಕ್ಷಿ. ಇಂಥವರನ್ನು ಬದಲಿಸಲು ಸಾಧ್ಯವಿಲ್ಲ. ತನಗೆ ತಿಳಿದದ್ದು ಬೇರಾರಿಗೂ ತಿಳಿದಿಲ್ಲವೆಂಬ

## ಧನ್ಯವಾದ

**(ರೆಡ್ ಇಂಡಿಯನ್ ಕವಿತೆಗಳು)**

ನೀನರಿಯದವನಿಗೂ
ಇರಲಿ ನಿನ್ನ
ಧನ್ಯವಾದ
ಹಾರೈಕೆಗಳಿರುತ್ತವೆ
ನಿನ್ನೊಂದಿಗೆ

– ಇಂಡಿಯನ್ ಒಬ್ಬನ
ಹೃದಯ ವೈಶಾಲ್ಯ

ಕನ್ನಡಕ್ಕೆ : ಕೆ. ಎಸ್. ರವಿಕುಮಾರ್
ಭಾರತೀಯ ಜೀವ ವಿಮಾ ನಿಗಮ, ಹಾಸನ - ೫೭೩೨೦೧

ಅಹಂಕಾರವು ಅಧ್ಯಯನಗಳಿಗೆ ಪೂರಕವಲ್ಲ.

ಮಾರ್ಮಿಕ ಸಂಗತಿಯೆಂದರೆ, ಕುವೆಂಪು ಅವರಿಗೆ ಸಂಸ್ಕೃತ ಗೊತ್ತಿರಲಿಲ್ಲ ಎಂದು ಹೀಯಾಳಿಸಿದ ಸಭೆಯು, ಮೂಲತಃ ಮತಾಂತರ ವಿರೋಧಿಸುವ ಪುಸ್ತಕವೊಂದರ ಬಿಡುಗಡೆಯ ಕಾರ್ಯಕ್ರಮವಾಗಿದ್ದುದು. ಅದರಲ್ಲಿ ಬ್ರಾಹ್ಮಣ್ಯದ ಸೂಕ್ಷ್ಮ ಪ್ರತಿಪಾದಕರಾದ ಲೇಖಕ ಎಸ್. ಎಲ್. ಭೈರಪ್ಪನವರು ಅಧ್ಯಕ್ಷರಾಗಿದ್ದರು. ಅವರು ಆಚಾರ್ಯರ ಟೀಕೆಗೆ ತಮ್ಮ ಅಸಮ್ಮತಿಯನ್ನೇನೂ ವ್ಯಕ್ತಮಾಡಲಿಲ್ಲ. ಬದಲಿಗೆ ಕುವೆಂಪು ಅವರ ಮೇಲೆ ಆಚಾರ್ಯರು ಮಾಡಿದ ಹಲ್ಲೆಯನ್ನು ತಮ್ಮ ಮೌನದ ಮೂಲಕ ಪರೋಕ್ಷವಾಗಿ ಸಮ್ಮತಿಸಿದರು. ಮತಾಂತರ, ಸಂಸ್ಕೃತ, ಹಿಂದುಧರ್ಮ ಮುಂತಾದವುಗಳ ವಿಷಯ ಬಂದಾಗ, ಈ ನಾಡಿನ ಸಾಮಾಜಿಕವಾಗಿ ಅತ್ಯಂತ ಅಲ್ಪ ಸಂಖ್ಯಾತ ಸಾಮಾಜಿಕ ಸಮುದಾಯಕ್ಕೆ ಸೇರಿದ, ಅದರಲ್ಲೂ ಕೆಲವೇ ಸಂಖ್ಯೆಯಲ್ಲಿರುವ, ಸಂಪ್ರದಾಯ ವಾದಿಗಳು ಯಾಕಿಷ್ಟು ಕೆರಳುತ್ತಾರೆ? ಕುವೆಂಪು ಹಿಂದೆ ದ್ವೈತತತ್ವವನ್ನು ವಿಮರ್ಶಿಸಿದಾಗಲೂ (೧೯೮೨) ಅವರಿಗೆ ಈ ದೇಶಬಿಟ್ಟು ಹೋಗಬೇಕೆಂದು ಇಂತಹ ಜನರು ಕರೆಗೊಟ್ಟಿದ್ದರು. ಹಿಂದುತ್ವವು ಕ್ರೈಸ್ತ ಮತ್ತು ಮುಸ್ಲಿಮರ ಶತ್ರು ಎಂದು ನಂಬಿಕೊಂಡು, ಅದರ ಊಳಿಗಕ್ಕೆ ಟೊಂಕ ಕಟ್ಟಿರುವ ಎಲ್ಲ ದಲಿತರು ಮತ್ತು ಕೆಳಜಾತಿಯ ಜನರಿಗೆ, ಅದು ಎಲ್ಲ ಜಾತಿಧರ್ಮಗಳಲ್ಲಿ ಉದಾರಮನಸ್ಸಿನ, ಆರೋಗ್ಯಕರವಾಗಿ ಚಿಂತಿಸುವ, ಜನರ ಶತ್ರು ಎಂಬುದು ಅರಿವಾಗಬೇಕಿದೆ. ಅದು ಅರಿವಾಗದೆ ಇರುವುದು ನಮ್ಮ ಕಾಲದ ದುರಂತವಾಗಿದೆ.

ಈ ಹಿನ್ನೆಲೆಯಲ್ಲಿ ಸಂಸ್ಕೃತದ ವಿಷಯವು ನಮ್ಮ ದೇಶದಲ್ಲಿ ಕೇವಲ ಭಾವುಕ ಅಥವಾ ಶೈಕ್ಷಣಿಕ ಸಂಗತಿ ಮಾತ್ರವಲ್ಲ. ಅದು ಸಾಮಾಜಿಕ ಸಂಗತಿಯೂ ಆಗಿದೆ. ಇದು ಹಿಂದುತ್ವವಾದ, ಬ್ರಾಹ್ಮಣವಾದ, ಜಡ ಸಂಪ್ರದಾಯ, ಜಾತಿಪದ್ಧತಿ ಹಾಗೂ ಕೋಮುವಾದಗಳ ಜತೆ ಒಳಸಂಬಂಧ ಸ್ಥಾಪಿಸಿಕೊಂಡಿದೆ. ಒಂದು ವರ್ಷದ ಕಾಲಾವಧಿಯಲ್ಲಿ ಶ್ರೀ ಪೇಜಾವರಸ್ವಾಮಿಗಳು ಕೊಡುವ ಸಾರ್ವಜನಿಕ ಹೇಳಿಕೆಗಳನ್ನೆಲ್ಲ ಪಟ್ಟಿ ಮಾಡಿ ನೋಡಿದರೆ ಇದರ ಸ್ವರೂಪ ಸ್ಪಷ್ಟವಾಗುತ್ತದೆ. ಕುತೂಹಲವೆಂದರೆ, ಕೊಡವ, ಕೊಂಕಣಿ, ತುಳು, ಬ್ಯಾರಿ ಅಕಾಡೆಮಿಗಳ ಸ್ಥಾಪನೆಗೆ ವಿರೋಧ ವ್ಯಕ್ತಮಾಡಿದ ಕೆಲವು ಸಂಶೋಧಕರು ಮತ್ತು ಕನ್ನಡ ಚಳುವಳಿಗಾರರು ಈಗ ಮೌನದ ಮೊರೆಹೊಕ್ಕಿರುವುದು; ಇವರು ನಾಡಿನ ಜನರಾಡುವ ಜೀವಂತ ಭಾಷೆಗಳ ವಿರುದ್ಧದ ಸೊಲ್ಲೆತ್ತುವುದು ಮತ್ತೂ ಈ ನಾಡಿನ ಯಾರ ಜನಭಾಷೆಯೂ ಅಲ್ಲದ ಸಂಸ್ಕೃತದ ಪರವಾಗಿ ಮೌನವಹಿಸುವುದು ಒಂದು ವ್ಯಂಗ್ಯವಾಗಿದೆ.

ಯಾವ ಭಾಷೆಯೂ ಅದರೊಳಗಿನ ತಿಳಿವಳಿಕೆಯೂ ತನಗೆ ತಾನೇ ಕೇಡಲ್ಲ. ಆದರೆ ಅದನ್ನು ಯಾರು ಅಧ್ಯಯನ ಮಾಡುತ್ತಾರೆ, ಯಾವ ದೃಷ್ಟಿಕೋನದಲ್ಲಿ ಅಧ್ಯಯನ ಮಾಡುತ್ತಾರೆ ಮತ್ತು ಯಾಕಾಗಿ ಮಾಡುತ್ತಾರೆ ಎಂಬುದರ ಮೇಲೆ ಅದು ಒಳಿತೊ ಕೆಡುಕೊ ಆಗುತ್ತದೆ. ಯಾವುದೇ ಭಾಷೆಯಿರಲಿ, ಅದು ಉಚ್ಚ ಜಾತಿ ಮತ್ತು ವರ್ಗಗಳ ಹಿತಾಸಕ್ತಿಯ ಜತೆಗೆ, ರಾಜಕೀಯ ಅಧಿಕಾರದ ಜತೆಗೆ ಸಮೀಕರಣಗೊಳ್ಳುತ್ತಿದ್ದಂತೆ, ಅಸಮಾನತೆಯ ಶ್ರೇಣೀಕರಣವನ್ನು ಸೃಷ್ಟಿಸುತ್ತದೆ. ಅದು ತಾನು ಭಿನ್ನ ಮತ್ತು

ಶ್ರೇಷ್ಠವೆಂಬ ಅಹಮಿಕೆಯನ್ನು ಪಡೆದುಕೊಳ್ಳುತ್ತದೆ. ಹಿಂದೆ ಚರಿತ್ರೆಯಲ್ಲಿ ಇಂಗ್ಲಿಷಿಗೆ, ಫಾರಸಿಗೆ ಆಗಿದ್ದು ಹೀಗೆಯೇ. ಸಂಸ್ಕೃತಕ್ಕೆ ಆಗಿದ್ದೂ ಹೀಗೆಯೇ.

ವಿಚಿತ್ರವೆಂದರೆ, ಹೀಗೆ ತಮ್ಮನ್ನು ಶ್ರೇಷ್ಠವೆಂದು ಜನರಿಂದ ದೂರವುಳಿದ ಕೆಲವು ಭಾಷೆಗಳು, ಜನಬಳಕೆಯ ದೃಷ್ಟಿಯಿಂದ 'ನಿರ್ಜೀವ' ಸ್ಥಿತಿಗೆ ಹೋಗಿದ್ದು; ಸಂಸ್ಕೃತ, ಫಾರಸಿ ಮುಂತಾದ ಈ ಅಭಿಜಾತ ಭಾಷೆಗಳಿಗೆ ಭಾರತದಲ್ಲಿ ಮರುಹುಟ್ಟು ಒದಗಿರುವುದೇ, ಜನಭಾಷೆಗಳಲ್ಲಿ ಅವಕ್ಕೆ ನಡೆದ ಅನುವಾದ ಮತ್ತು ಮರುರೂಪಗಳಲ್ಲಿ. ಕುವೆಂಪು, ಬೇಂದ್ರೆ, ವಚನಕಾರರು – ಇವರೆಲ್ಲ ಸಂಸ್ಕೃತ ವಾಙ್ಮಯಕ್ಕೆ ಹೀಗೆ ಮರುಜೀವ ಕೊಟ್ಟವರು. ಆದರೆ ತನಗೆ ಮರುಜೀವ ಕೊಡುವ ಭಾಷೆ ಮತ್ತು ಭಾಷಿಕರ ವಿಷಯದಲ್ಲಿ ಸಂಪ್ರದಾಯವಾದಿಗಳು ಸಂಸ್ಕೃತದ ಹೆಸರಿನಲ್ಲಿ ಅಸ್ಪೃಶ್ಯತೆ ಆಚರಿಸಿದರು, ದ್ವೇಷಿಸಿದರು. ಇಂತಹ ಅಸ್ಪೃಶ್ಯತೆಯ ಮನಃಸ್ಥಿತಿಯವರು ಸಂಸ್ಕೃತವಿಟ್ಟುಕೊಂಡು ಅಧ್ಯಯನ ಮಾಡುವುದಾದರೆ, ಅದರಿಂದ ಕನ್ನಡಕ್ಕಾಗಲಿ, ಕರ್ನಾಟಕದ ಜನಭಾಷೆಗಳಿಗಾಗಲಿ, ಕರ್ನಾಟಕದ ವಿಶಾಲ ಸಮುದಾಯಗಳಲ್ಲಿರುವ ಜ್ಞಾನಕ್ಕಾಗಲಿ ಯಾವ ಲಾಭ ?

ಈ ಹಿನ್ನೆಲೆಯಲ್ಲಿ, ಭಾರತದ ಪ್ರಾಚೀನ ಭಾಷೆಗಳಲ್ಲಿ ಒಂದಾದ ಸಂಸ್ಕೃತ ಮತ್ತು ಅದರೊಳಗಿನ ವಾಙ್ಮಯದ ಅಧ್ಯಯನಕ್ಕೆಂದು ಸ್ಥಾಪನೆಯಾಗಿರುವ ವಿಶ್ವವಿದ್ಯಾಲಯದಲ್ಲಿ ನಡೆಯುವ ಅಧ್ಯಯನಗಳ ವಿಷಯ, ಉದ್ದೇಶ ಮತ್ತು ಅಧ್ಯಯನ ವಿಧಾನಗಳು ಸ್ಪಷ್ಟಗೊಳ್ಳಬೇಕಿದೆ. ವಿಶ್ವವಿದ್ಯಾಲಯವನ್ನು ನಿರ್ದಿಷ್ಟ ಸಾಮಾಜಿಕ ಹಿತಾಸಕ್ತಿಗಳ ನೆಲೆಯಿಂದ ಬಿಡಿಸಿ, ನಾಡಿನ ಎಲ್ಲ ಜನವರ್ಗಗಳಿಂದ ಬಂದವರು ಕೆಲಸ ಮಾಡುವಂತೆ ವಿಶಾಲಗೊಳಿಸಬೇಕಿದೆ. ಜನಪರವಾದ, ಸ್ತ್ರೀವಾದಿಯಾದ, ಹಿನ್ನೆಲೆಗಳಿಂದ, ಜಾತಿ ಪದ್ಧತಿ, ವರ್ಣಪದ್ಧತಿ ಮತ್ತು ಊಳಿಗಮಾನ್ಯ ವಿರೋಧಿ ಯಾವ ದೃಷ್ಟಿಯಿಂದ ಅಧ್ಯಯನ ಮಾಡುವುದಕ್ಕೆ ಬೇಕಾದಂತೆ ಅದರ ರಚನೆಯನ್ನು ರೂಪಿಸಬೇಕಿದೆ. ಮುಖ್ಯವಾಗಿ, ಹಿರಿಯ ಸಂಶೋಧಕರಾದ ಎಂ. ಎಂ. ಕಲಬುರ್ಗಿ ಹಾಗೂ ಹಂಪನಾ ಅವರು ಸೂಚಿಸಿರುವಂತೆ, ಅದನ್ನು ಸಂಸ್ಕೃತವನ್ನು ಒಳಗೊಂಡಂತೆ, ಪ್ರಾಕೃತ, ಪಾಲಿ, ಫಾರಸಿ ಮುಂತಾದ ಎಲ್ಲ ಪ್ರಾಚೀನ ಭಾಷೆಗಳ ಅಧ್ಯಯನ ಸಂಸ್ಥೆಯನ್ನಾಗಿ ರೂಪಿಸಬೇಕಿದೆ.

ಕರ್ನಾಟಕದ ಧರ್ಮ, ಚರಿತ್ರೆ, ಸಂಸ್ಕೃತಿಗಳ ಅಧ್ಯಯನ ಮಾಡುವವರಿಗೆ, ಈ ವಿಷಯದಲ್ಲಿರುವ ಅಪಾರವಾದ ಫಾರಸಿ ಗ್ರಂಥ ಮತ್ತು ಶಾಸನಗಳನ್ನು ಅಧ್ಯಯನ ಮಾಡಲಾಗಿಲ್ಲ. ಪಾಲಿ, ಅಪಭ್ರಂಶ ಮತ್ತು ಪ್ರಾಕೃತ ಗ್ರಂಥಗಳನ್ನು ಅಧ್ಯಯನ ಮಾಡಲಾಗಿಲ್ಲ. ಕರ್ನಾಟಕದಲ್ಲಿ ಅನೇಕ ಪ್ರಾಕೃತ ಕವಿಗಳು ಆಗಿಹೋಗಿದ್ದಾರೆ. ಸದ್ಯಕ್ಕೆ ಕರ್ನಾಟಕದಲ್ಲಿ ಪಾಲಿ ಭಾಷೆಯನ್ನು ಮಹಾಬೋಧಿ ಸೊಸೈಟಿಯಲ್ಲಿಯೂ ಪ್ರಾಕೃತವನ್ನು ಕೆಲವು ಜೈನಮಠಗಳಲ್ಲಿಯೂ ಸಣ್ಣ ಪ್ರಮಾಣದಲ್ಲಿ ಅಧ್ಯಯನ ಮಾಡಲಾಗುತ್ತಿದೆ. ಒಮ್ಮೊಮ್ಮೆ ಅನಿಸುತ್ತದೆ: ಫಾರಸಿ, ಪ್ರಾಕೃತ ಮತ್ತು ಪಾಲಿ ಭಾಷೆ ಮತ್ತು ವಾಙ್ಮಯಗಳನ್ನು ಅವು ಇಸ್ಲಾಂ, ಜೈನ ಮತ್ತು ಬೌದ್ಧ ಧರ್ಮಗಳಿಗೆ ಹೆಚ್ಚು ಸಂಬಂಧಪಟ್ಟವೆಂಬ ಕಾರಣದಿಂದಲೇ ಅವಕ್ಕೆ ಸಂಸ್ಕೃತಕ್ಕೆ ಸಿಗುವ ಅನುಕೂಲಗಳು ಸಿಗುತ್ತಿಲ್ಲವೇ ಎಂದು ? ಹಿಂದೆ ಬೇರೆ ಬೇರೆ ವಿಶ್ವವಿದ್ಯಾಲಯಗಳಲ್ಲಿ ಈ ಪ್ರಾಚೀನ ಭಾಷೆಗಳ ಅಧ್ಯಯನಕ್ಕೆ ಕೊಂಚವಾದರೂ ಅವಕಾಶವಿತ್ತು. ಈಗ ಅದೂ ಇಲ್ಲವಾಗಿದೆ. ಮತ್ತೊಂದು ಸಂಗತಿಯೆಂದರೆ, ಕರ್ನಾಟಕದ ಅಧ್ಯಯನಗಳಿಗೆ ಸಂಬಂಧಪಟ್ಟಂತೆ ೧೫ರಿಂದ ೧೯ನೇ ಶತಮಾನದ ತನಕ ಪಾದ್ರಿಗಳು, ಅಧಿಕಾರಿಗಳು ಮತ್ತು ಪ್ರವಾಸಿಗರು, ಲೇಖಕರು ಇಟಾಲಿಯನ್, ಲ್ಯಾಟಿನ್, ಪೋರ್ಚುಗೀಸ್, ಫ್ರೆಂಚ್ ಭಾಷೆಗಳಲ್ಲಿ ಮಾಡಿರುವ ವರದಿ, ಬರೆದಿರುವ ಪತ್ರಗಳು ಹಾಗೂ ರಚಿಸಿರುವ ಕೃತಿಗಳ ಬಹುದೊಡ್ಡ ಭಾಂಡಾರವೇ ಯೂರೋಪು ದೇಶಗಳಲ್ಲಿದೆ. ಕರ್ನಾಟಕದ ಚರಿತ್ರೆ, ಧರ್ಮ, ಭಾಷೆ, ಸಂಸ್ಕೃತಿಗಳ ಅಧ್ಯಯನಕ್ಕೆ ಬಹಳ ಉಪಯುಕ್ತವಾಗಿರುವ ಈ ಆಕರಗಳನ್ನು ನಾವು ಕನ್ನಡಕ್ಕೆ ತಂದುಕೊಂಡಿಲ್ಲ. ಈ ಭಾಷೆಗಳ ವಿಷಯದಲ್ಲಿ ಭಾರತದಲ್ಲಿರುವ ವಿದ್ವಾಂಸರು ಈಗ ಅಳಿವಿನಂಚಿನ ಜೀವಿಗಳಂತೆ ಇದ್ದಾರೆ. ಈಚೆಗೆ ಭಾರತಕ್ಕೆ ಬಂದಿದ್ದ ಇಂಡಾಲಜಿಸ್ಟ್ ಮತ್ತು ಸಂಸ್ಕೃತ ವಿದ್ವಾಂಸ ಶೆಲ್ಡನ್ ಪೋಲಾಕ್ ಕೂಡ, ಭಾರತದಲ್ಲಿ ಪ್ರಾಚೀನ ಭಾಷೆಗಳನ್ನೂ ಅವುಗಳಲ್ಲಿರುವ ಸಾಹಿತ್ಯವನ್ನೂ ಅಧ್ಯಯನ ಮಾಡುವ ವಿದ್ವಾಂಸರು ಹೊಸ ತಲೆಮಾರಿನಲ್ಲಿ ಇಲ್ಲವಾಗುತ್ತಿರುವುದಕ್ಕೆ ಗಾಢ ವಿಷಾದ ವ್ಯಕ್ತಪಡಿಸಿದರು.

ಈ ಹಿನ್ನೆಲೆಯಲ್ಲಿ ಸಂಸ್ಕೃತ ವಿವಿಯನ್ನು ಸಂಸ್ಕೃತವನ್ನೂ ಒಳಗೊಂಡಂತೆ ಎಲ್ಲ ಪ್ರಾಚೀನ ಮತ್ತು ಅಭಿಜಾತ ಭಾಷೆಗಳ ಅಧ್ಯಯನದ ಕೇಂದ್ರವನ್ನಾಗಿ ಬದಲಿಸುವುದು ಅಗತ್ಯವಾಗಿದೆ. ಅದು ಕರ್ನಾಟಕದ ಜನ ಭಾಷೆಗಳನ್ನೂ ಅವುಗಳಲ್ಲಿರುವ ಜ್ಞಾನವನ್ನೂ ರೂಪಿಸಿರುವ ಸಂಸ್ಕೃತ, ಪ್ರಾಕೃತ, ಪಾಲಿ, ಫಾರಸಿ, ಮುಂತಾದ ಎಲ್ಲ ಪ್ರಾಚೀನ ಭಾಷೆಗಳ ಅಧ್ಯಯನ ಕೇಂದ್ರವಾಗುವ ಅಗತ್ಯವಿದೆ. ಕರ್ನಾಟಕ ಚರಿತ್ರೆಯ ಅಧ್ಯಯನದ ದೃಷ್ಟಿಯಿಂದ ಅಗತ್ಯವಾಗಿರುವ ಲ್ಯಾಟಿನ್, ಪೋರ್ಚುಗೀಸ್, ಇಟಾಲಿಯನ್, ಫ್ರೆಂಚ್ ಭಾಷೆಗಳ ವಿಷಯದಲ್ಲಿ ಕೆಲಸ ಮಾಡಲು ಅಲ್ಲಿ ಸಾಧ್ಯವಾಗಬೇಕಿದೆ. ಮುಖ್ಯವಾಗಿ ಸಂಸ್ಕೃತದ ಜತೆ ನಾನಾ ಬಗೆಯಲ್ಲಿ ಅನುಸಂಧಾನ ಮಾಡಿರುವ ಕನ್ನಡ ಸಾಹಿತ್ಯದ ವಿಭಿನ್ನ ಆಯಾಮಗಳನ್ನು ಶೋಧಿಸಲು ಸಾಧ್ಯವಾಗಬೇಕಿದೆ. ಉದಾಹರಣೆಗೆ, ಸಂಸ್ಕೃತದಲ್ಲಿ ಕನ್ನಡ ಭಾಷೆಯ ಪ್ರವೇಶ, ಸಂಸ್ಕೃತ ಸಾಹಿತ್ಯದಲ್ಲಿ ಕರ್ನಾಟಕದ ಚಿತ್ರ, ಶರಣರ ವಚನಗಳಲ್ಲಿ ಸಂಸ್ಕೃತದ ಬಳಕೆ, ಕುವೆಂಪು ಸಂಸ್ಕೃತ ಬಳಕೆ ಮಾಡಿಕೊಂಡ ವಿಧಾನ, ಜನಪದ ಕಾವ್ಯಗಳಲ್ಲಿ ಸಂಸ್ಕೃತದ ಬಳಕೆ, ಸಂಸ್ಕೃತದಲ್ಲಿ ಕನ್ನಡ, ಫಾರಸಿ, ಮರಾಠಿ ಶಬ್ದಗಳು ಸೇರಿರುವ ಬಗೆ, ಫಾರಸಿ-ಸಂಸ್ಕೃತ ದ್ವಿಭಾಷಿಕ ಶಾಸನಗಳು, ಸಂಸ್ಕೃತ-ಕನ್ನಡ ದ್ವಿಭಾಷಿಕ ಶಾಸನಗಳು, ಹೀಗೆ ಅನೇಕ ಬಗೆಯಲ್ಲಿ ಅಧ್ಯಯನ ಮಾಡಲು ಸಾಧ್ಯವಿದೆ. ಇದಕ್ಕಾಗಿ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಹಲವಾರು ಭಾಷೆಗಳಲ್ಲಿ ಪರಿಣತ ವಿದ್ವಾಂಸರು ಇರುವುದರ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಆಗಬೇಕಾಗಿರುವುದು ಸಂಸ್ಕೃತ ವಿಶ್ವವಿದ್ಯಾಲಯದ ಅರ್ಥಪೂರ್ಣ ವಿಸ್ತರಣೆ. ಇಂತಹ ವಿಸ್ತರಣೆ ಪಡೆಯದಿದ್ದರೆ, ಕರ್ನಾಟಕಕ್ಕೆ ಸಂಸ್ಕೃತ ಮತ್ತು ವೇದದ ಹೆಸರಲ್ಲಿ ಒಂದು ವಿಶ್ವವಿದ್ಯಾಲಯವಾದರೂ ಯಾಕೆ ಬೇಕು ?

**ಡಾ॥ ರಹಮತ್ ತರೀಕೆರೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

## ಆಸೆ

ಸಾಯುವ ಮುನ್ನೊಮ್ಮೆ
ಅಸಮಾನ ವ್ಯವಸ್ಥೆಯ
ಗೋರಿಯ ಮೇಲೆ
ಹುಟ್ಟುವ ಹೊಸ ಮನುಷ್ಯನ
ಮುಖವ ನೋಡುವ ಆಸೆ

ಚರಿತ್ರೆಯ ಹಾದಿಯಲಿ
ಮೆಟ್ಟಿಲುಗಳ ಸಾಲಿನಲಿ
ನಾನೊಂದು ಕಲ್ಲಾಗಿ
ನಿಲ್ಲುವಾ ಆಸೆ

ಬಂದೂಕಿನ ಗುಂಡುಗಳಿಂದ
ಬೀದಿಯಲಿ ಮಕ್ಕಳು
ಗೋಲಿ ಆಡುವ ಆಟ
ನೋಡುವಾ ಆಸೆ
ನೋಡುತ್ತ ನಾನೊಮ್ಮೆ
ಕುಣಿದಾಡುವ ಆಸೆ



**ಹುಲಿಕಟ್ಟಿ ಚನ್ನಬಸಪ್ಪ**
ಶಿಕ್ಷಕರು, ಮನೆ ಸಂಖ್ಯೆ. ಇ.ಡಬ್ಲ್ಯು.ಎಸ್-೬೦, ಹುಡ್ಕೋ ಬಡಾವಣೆ,
ಸಿರುಗುಪ್ಪ - ೫೮೩೧೨೧, ಬಳ್ಳಾರಿ ಜಿಲ್ಲೆ

# ಪಡ್ಯಾರಿನ ಪಾಠಗಳು

## ಸಣ್ಣ ಪುಟ್ಟ ಆಸೆ ಹಾಗೂ ಊರಿನ ಜಾತ್ರೆ

ಎಸ್. ಆರ್. ವಿಜಯಶಂಕರ

**ಈಚೆಗೆ ಊರ ಹಾಗೂ ಸೀಮೆಯ ಜಾತ್ರೆಗಳನ್ನು ಕೇಸರಿ ಬ್ಯಾನರು, ಪತಾಕೆ, ಧ್ವಜಗಳ ವಿಜೃಂಭಣೆಯಿಂದ ಪ್ರಾರಂಭಿಸಿ ಅಬ್ಬರದ ಹಿಂದುತ್ವದ ಕಾರ್ಯಕ್ರಮವೆಂಬಂತೆ ಬಿಂಬಿಸಲಾಗುತ್ತಿದೆ. ದೇವಸ್ಥಾನಗಳ ಜೀರ್ಣೋದ್ಧಾರ, ಬ್ರಹ್ಮಕಲಶ ಇತ್ಯಾದಿ ಎಲ್ಲಾ ಕಾರ್ಯಕ್ರಮಗಳನ್ನೂ ಹಿಂದುತ್ವದ ಪುನರುತ್ಥಾನದಂತೆ ಬಿಂಬಿಸಲಾಗುತ್ತಿದೆ. ಜಾತ್ರೆಯ ಸಂತೆಗಳಲ್ಲೂ ಬಂಟ್ವಾಳ ತಾಲೂಕಿನಲ್ಲಂತೂ ಹಿಂದೂಗಳಿಗೆ ಪ್ರಥಮ ಪ್ರಾಶಸ್ತ್ಯ ಎಂಬ ಅಲಿಖಿತ ಕಾನೂನು ಬಂದಂತಾಗಿದೆ. ಮುಸ್ಲಿಮರು ಮತ್ತಿತರರು ಸಾಲ ಮಾಡಿ ಬಂಡವಾಳ ಹಾಕಿ ಸರಕು ತಂದು ಮಾರಬೇಕು. ಅವರಿಗೆ ಏನಾದರೂ ಹೆಚ್ಚುಕಮ್ಮಿ, ಗಲಾಟೆ ಆಗಿ ಲುಕ್ಸಾನ ಆದರೆ ಸಾಲದ ಹೊರೆ, ಬಡ್ಡಿಯ ಬರೆ ಎರಡೂ ಸೇರುತ್ತವೆ.**

ನಮ್ಮ ಊರಿನ ಸಣ್ಣಪುಟ್ಟ ಸಂತೋಷಗಳಲ್ಲಿ ಸುತ್ತಮುತ್ತಲಿನ ದೇವಸ್ಥಾನಗಳ ಜಾತ್ರೆಗಳಿಗೆ ಹೋಗುವುದು ಬಹುದೊಡ್ಡ ಸಂಭ್ರಮ. ನಮ್ಮದು ವಿಟ್ಲ ಸೀಮೆ. ವಿಟ್ಲದ ಪಂಚಲಿಂಗೇಶ್ವರ ದೇವಸ್ಥಾನದ ಜಾತ್ರೆ ಬಹಳ ಗೌಜಿ. ಒಂದು ವಾರದ ಸಂಭ್ರಮ.

ಯಕ್ಷಗಾನ, ದೊಂಬರ ತೊಟ್ಟಿಲು, ಮಣಿಸರಕಿನ ಅಂಗಡಿಗಳು, ಮಿಠಾಯಿ ಅಂಗಡಿಗಳು, ದೇವರ ದರ್ಶನ, ಕಬ್ಬಿನ ಹಾಲು ಇತ್ಯಾದಿ ಇತ್ಯಾದಿ. ವಿಟ್ಲ, ಪುತ್ತೂರು ಮೊದಲಾದ ಕಡೆ ಯಾವಾಗ ಜಾತ್ರೆ ಎಂಬುದು ಎಲ್ಲರಿಗೂ ತಿಳಿದ ವಿಚಾರ. ಈಗಿನಂತೆ ಹತ್ತಾರು ಮೈಲುಗಳಿಂದ ಕೇಸರಿ ಬ್ಯಾನರ್ 'ಓಂ' ಹಾಕಿದ ಕೇಸರಿ ಧ್ವಜಗಳ ಮೈಲುಗಟ್ಟಲೆ ಪತಾಕೆ ಪ್ರದರ್ಶನ ಇತ್ಯಾದಿ ಯಾವುದೂ ಇರಲಿಲ್ಲ. ಬಿಸು ಪರ್ಬದ ಇಂತಹ ದಿನಕ್ಕೆ ಪುತ್ತೂರು ಜಾತ್ರೆ. ಮಕರ ಸಂಕ್ರಾಂತಿಯ ಇಂತಹ ದಿನಕ್ಕೆ ವಿಟ್ಲ ಜಾತ್ರೆ ಇತ್ಯಾದಿ ಜನಕ್ಕೆ ಬಾಯಿಪಾಠ. ನಾನು ಓದಿದ ವಿಟ್ಲ ಹೈಸ್ಕೂಲಿಗೆ ರಥೋತ್ಸವದ ದಿನ ರಜೆ. 'ಬಯ್ಯತ ಬಲಿ' (ಸಂಜೆಯ ದೇವರ ಬಲಿ) ದಿನ ಸಂಜೆ ಲಾಸ್ಟ್ ಪಿರಿಯಡ್ ಶಾಲೆಗೆ ರಜೆ – ಇತ್ಯಾದಿ ಸಹಜ ಪಾಠಗಳು. ಈಗಿನ ಹಾಗೆ ಅವು ಕೇಸರಿ ಧ್ವಜ, ವರ್ಣಗಳ ಝುಳಪಿಸುವ ಪ್ರಚಾರದ, ಹಿಂದುತ್ವದ ಅಬ್ಬರ ಇಲ್ಲದೆ ಎಲ್ಲಾ ಧರ್ಮಗಳವರೂ ಒಟ್ಟಿಗೆ ಜಾತ್ರೆಗೆ ಹೋಗುತ್ತಿದ್ದ ಕಾಲ.

### ಜಾತ್ರೆ ಅಡ್ಕದಲ್ಲಿ ಸರ್ವಧರ್ಮ ವಿದ್ಯಾರ್ಥಿಗಳು

ವಿಟ್ಲ ಜಾತ್ರೆಗೆ ನನ್ನ ಕ್ಲಾಸಿನಲ್ಲಿದ್ದ ಇಬ್ರಾಯಿಂ ಎಂಬ ಮುಸ್ಲಿಂ ಹಾಗೂ ಇತರೆ ಮಂತೆರೋ ಎಂಬ ಕ್ರಿಶ್ಚಿಯನ್ ಇಬ್ಬರೂ ಬರುತ್ತಿದ್ದರು. ನಾವು ಕೆಲವರು ಗೆಳೆಯರ ಕಾರ್ಯಕ್ರಮ ಸಂಜೆ ವಿಟ್ಲದಲ್ಲಿದ್ದ ಬೊಂಬಾಯಿ ಹೋಟೆಲ್‌ನಲ್ಲಿ ಹತ್ತು ಪೈಸೆಕೊಟ್ಟು ಒಂದೊಂದು ಬನ್ಸ್ ತಿನ್ನುವುದರಿಂದ ಪ್ರಾರಂಭವಾಗುತ್ತಿತ್ತು. (ಬನ್ಸ್ ಎಂದರೆ ಮೈದಾ ಹಾಗೂ ಬಾಳೆ ಹಣ್ಣು ಹಾಕಿ ಎಣ್ಣೆಯಲ್ಲಿ ಹುರಿದು ಮಾಡುವ ಸ್ವಲ್ಪ ಸಿಹಿಯಾದ ಕರಿದ ತಿಂಡಿ). ಅಲ್ಲಿಂದ ಜಾತ್ರೆಯ ಸಂತೆಗೆ ಪ್ರವೇಶ. ಮೊದಲಿಗೆ ಒಂದು ರೌಂಡ್ ದೊಂಬರ ತೊಟ್ಟಿಲು. ಒಂದೊಂದು ತೊಟ್ಟಿಲಲ್ಲಿ ಇಬ್ಬಿಬ್ಬರು. ಅದು ಮೇಲೆ ಏರಿ ಕೆಳಗೆ ಇಳಿವ ವೃತ್ತಾಕಾರದ ಚಲನೆ.

ಆ ಕಡೆ ಈ ಕಡೆ ಕಂಬ ಹಾಕಿ ನಡುವೆ ಆಕ್ಸಲ್‌ನಲ್ಲಿ ಮರದೊಳಗೆ ಕಬ್ಬಿಣ ತೂರಿಸಿದ ಹನೆ ಕೊಟ್ಟು ಅದಕ್ಕೆ ತೂಗಿಸಿದ ನಾಲ್ಕು ತೊಟ್ಟಿಲುಗಳು. ಕಂಬದ ಒಂದೊಂದು ಕಡೆ ಗಟ್ಟಿಯಾದ ಆಳುಗಳು ನಿಂತು ಅದನ್ನು ಮೇಲಕ್ಕೆ ನೂಕುವುದು. ವಿಟ್ಲದ ದೊಂಬರ ತೊಟ್ಟಿಲುಗಳನ್ನು ನೂಕುತ್ತಿದ್ದವರಲ್ಲಿ ಮುಸ್ಲಿಮರು ಹಾಗೂ ಹಿಂದೂಗಳು ಇಬ್ಬರೂ ಇದ್ದರು. ನನ್ನ ಗೆಳೆಯ ಇಬ್ರಾಯಿಂನ ಪರಿಚಯದ ಮುಸ್ಲಿಂ ಒಬ್ಬ ದೊಂಬರ ತೊಟ್ಟಿಲು ನೂಕುತ್ತಿದ್ದ. ನನ್ನ ಸಹಪಾಠಿಯಾಗಿದ್ದ ಪಮ್ಮಣ್ಣನ



(ಪರಮೇಶ್ವರ) ಪರಿಚಯದ ಹಿಂದೂ ಒಬ್ಬ ತೊಟ್ಟಿಲು ತೂಗುತ್ತಿದ್ದ.

ನಾನು ೧೯೬೦ನೇ ಇಸವಿವರೆಗೆ ಪ್ರತಿ ವರುಷ ನನ್ನ ತಾಯಿ ಜೊತೆ ಪುತ್ತೂರು ಜಾತ್ರೆಗೆ ಹೋಗುತ್ತಿದ್ದೆ. ೧೯೬೦ರವರೆಗೆ ನನ್ನ ತಂದೆಯವರು ಪುತ್ತೂರಿನಲ್ಲಿ ಬಿಡಾರ ಮಾಡಿಕೊಂಡು ವಕೀಲ ವೃತ್ತಿ ನಡೆಸುತ್ತಿದ್ದರು. ಬಹಳ ಹಿಂದೆ ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲೂಕಿನಲ್ಲಿ ಈಗಿನ ಕಾಸರಗೋಡು (ಕೇರಳ ರಾಜ್ಯಕ್ಕೆ ಈಗ ಸೇರಿದೆ), ಬಂಟ್ವಾಳ, ಬೆಳ್ತಂಗಡಿ, ಸುಳ್ಯ (ಹಾಗೂ ಪುತ್ತೂರು)ತಾಲೂಕುಗಳು ಸೇರಿದ್ದವು. ನನ್ನ ತಂದೆ ವಕೀಲರಾಗಿದ್ದರಿಂದ ತಾಯಿಯವರು ಹೆಚ್ಚಾಗಿ ಎಲ್ಲಿಗೂ ಒಬ್ಬರೇ ಹೋಗುತ್ತಿರಲಿಲ್ಲ. ಯಾರಾದರೂ ಜೊತೆಗಿರುತ್ತಿದ್ದರು. ಪುತ್ತೂರು ಜಾತ್ರೆ, ವಿಷು ಸಮಯದಲ್ಲಿ, ಅಂದರೆ ಏಪ್ರಿಲ್ ತಿಂಗಳಲ್ಲಿ ನಡೆಯುತ್ತಿತ್ತು. ಆಗ ಪರೀಕ್ಷೆಗಳು ಮುಗಿಯುತ್ತಿದ್ದುದರಿಂದ ತಾಯಿಯವರ ಜೊತೆ ಪ್ರತಿ ಸಲ ಜಾತ್ರೆಗೆ ಹೋಗುತ್ತಿದ್ದೆ.

**ಪುತ್ತೂರು ಜಾತ್ರೆಯ ರಂಗು**

ಪುತ್ತೂರು ಮಹಾಲಿಂಗೇಶ್ವರ ದೇವಸ್ಥಾನಕ್ಕೆ ಎರಡು ಕಡೆಯಿಂದ ಪ್ರವೇಶ. ಒಂದು ಕೆರೆ ಕಡೆಯಿಂದ – ಈಗಿನ ಪೊಲೀಸ್ ಸ್ಟೇಷನ್ ಬಳಿ. ಮತ್ತೊಂದು ಕೊಂಬೆಟ್ಟಿಗೆ ಹೋಗುವ ದಾರಿಯಿಂದ. ನಮ್ಮ ಮನೆಯಿಂದ ಒಳದಾರಿಯಲ್ಲಿ ಹೋದರೆ ಕೊಂಬೆಟ್ಟು ಕಡೆಯಿಂದ ಪ್ರವೇಶ ಹತ್ತಿರ. ಹಾಗೆ ಹೋಗುವಾಗ ಮೊದಲಿಗೆ ಸಿಕ್ಕುವುದೇ ಸುಬ್ರಾಯರ ಕಬ್ಬಿನ ಹಾಲಿನ ಅಂಗಡಿ. ಆ ಮಡಲ ತಟ್ಟಿ ಅಂಗಡಿ ಒಳಗೆ ಬಿದಿರಿನ ಗಳು ಸಿಕ್ಕಿಸಿದ ಉದ್ದದ ಗಾಣ. ನಾಲ್ಕು ಬೆಂಚುಗಳು. ಸುಬ್ರಾಯರು ಗಾಣ ತಿರುಗಿಸಿ ಕಬ್ಬಿನ ಹಾಲು ತಯಾರಿಸಬೇಕು. ಅದರ ಜೊತೆ ಚುರುಮುರಿ (ಮಂಡಕ್ಕಿ). ಹಾಲಿಗೆ ಮೂರು ಪೈಸೆ. ಚುರುಮುರಿಗೆ ಐದು ಪೈಸೆ. ನನಗೆ ಪ್ರತಿ ಸಲವೂ ಜಾತ್ರೆಗೆ ಹೋಗುವಾಗ ಕಬ್ಬಿನ ಹಾಲು ಚುರುಮುರಿ ಬೇಕು. ಹಾಗಾಗಿ ಅಮ್ಮನ ಜೊತೆ ಅಲ್ಲಿಗೆ ಪ್ರವೇಶ.

ಸುಬ್ರಾಯರ ಕಬ್ಬಿನ ಹಾಲಿನ ಅಂಗಡಿ ಒಳಗೆ ಬಿಸಿಲು ಬರುವ ಚಪ್ಪರದ ಕೋಲಲ್ಲಿ ಕೆಲವೊಂದು ಮುಸ್ಲಿಂ ಹೆಂಗಸರೂ ಇರುತ್ತಿದ್ದರು. ಅವರಿಗೊಂದು ಬುರ್ಖಾ, ಅವರಲ್ಲಿ ಒಂದಿಬ್ಬರು ಬುರ್ಖಾದ ಪರದೆಯನ್ನು ಮೇಲೆ ಮಾಡಿ ನನ್ನ ಅಮ್ಮನ ಜೊತೆ ಮಾತಾಡಿದ್ದು



ನನಗೆ ನೆನಪಿದೆ. ಈಗ ಹಿಂತಿರುಗಿ ನೋಡುವಾಗ ಪುತ್ತೂರಿನಂತಹ ಸಣ್ಣ ಊರಿನಲ್ಲಿ ನನ್ನ ಅಮ್ಮ ಹೇಗೆ ಮಕ್ಕಳನ್ನು ಕರಕೊಂಡು ಜಾತ್ರೆಯ ಸಂಭ್ರಮ ಸಂತೋಷ ಪಡುತ್ತಿದ್ದಳೋ ಹಾಗೆ ಆ ಒಂದೆರಡು ಮುಸ್ಲಿಂ ಹೆಂಗಸರೂ ಅವರ ಕುಟುಂಬದವರೊಡನೆ ಸಂಭ್ರಮ ಸಂತೋಷ ಪಡುತ್ತಿದ್ದರು. ಜೀವನದ ಸಣ್ಣ ಪುಟ್ಟ ಸಂತೋಷಗಳೆಂದರೆ ಇಷ್ಟೆ. ಸುಬ್ರಾಯರ ಅಂಗಡಿಯಲ್ಲಿ ಕಬ್ಬಿನ ಹಾಲು ಕುಡಿಯುವುದು, ಜಾತ್ರೆಯ ಸಂತೆಯಲ್ಲಿ ಮಣಿ ಸರಕಿನ ಅಂಗಡಿ ನೋಡುವುದು, ತನ್ನ ಪರ್ಸಿನೊಳಗೆ ಇಟ್ಟುಕೊಳ್ಳುವಂತಹ ಪುಟ್ಟ ಕನ್ನಡಿ ಒಂದನ್ನು ಇಪ್ಪತ್ತು ಪೈಸೆ ಕೊಟ್ಟು ಕೊಳ್ಳುವುದು, ಮಿಠಾಯಿ ಅಂಗಡಿಯಿಂದ ಸ್ವಲ್ಪ ಕಡ್ಡಿ ಮಿಠಾಯಿ ಮತ್ತು ಕೋಲು ಮಿಠಾಯಿ ತಂದು, ಜಾತ್ರೆಯಿಂದ ತಂದದ್ದೆಂದು ಹೇಳಿ ಮನೆಯವರೆಲ್ಲಾ ಹಂಚಿ ತಿನ್ನುವುದು, ದೇವಸ್ಥಾನದಲ್ಲಿ ಒಂದು ಹಣ್ಣು-ಕಾಯಿ ಸೇವೆ ಮಾಡಿಸುವುದು ಇತ್ಯಾದಿ.

**ಮಣಿ ಸರಕಿನ ಅಂಗಡಿ**

ಪುತ್ತೂರು ಹಾಗೂ ವಿಟ್ಲ ಎರಡೂ ಜಾತ್ರೆಗಳಲ್ಲಿ ಮಣಿ ಸರಕಿನ ಅಂಗಡಿ ಎದುರು ನಿಂತು ಅದರ ವೈಭವ ನೋಡುವುದೇ ಒಂದು ಆನಂದ. ಫಿಲ್ಮ್ ಹಾಕಿ ನೋಡುವ ಕ್ಯಾಮೆರಾ, ಹೊಳೆಯುವ ಪಟ್ಟಿ ಕನ್ನಡಿಯ ಪಟ್ಟಕ, ಭೂತಕನ್ನಡಿ, ಮಣಿಸರ, ಟಿಪ್ ಎನ್ನುವ ಪಿಸ್ತೂಲ್, ಚಿಕ್ ಚಿಕ್ ಮಾಡುವ ಪ್ರೆಸ್ಸರ್, ಅನೇಕ ವಿಧದ ಬಿಗಿಲುಗಳು, ಕುತ್ತಿದಾಗ ಒಳಹೋಗುವ ಸ್ಪ್ರಿಂಗ್ ಚೂರಿ ಹೀಗೆ ಏನೇನೋ. ಮಣಿ ಸರಕಿನ ಅಂಗಡಿಗಳಲ್ಲಿ ಹೆಚ್ಚಿನವು ಮುಸ್ಲಿಮರದ್ದು. ಅವರಲ್ಲಿ ಅನೇಕರು ಸ್ಯಾಬ್ಬರ್‌ಗಳು. ಸ್ಯಾಯಿಬ್ಬರ್‌ಗಳು ಎಂದರೆ ಉರ್ದು ಮಾತನಾಡುವ ಮುಸ್ಲಿಮರು, ಬ್ಯಾರಿಗಳು ಎಂದರೆ ಮಲಯಾಳಂ ಮಾತಾಡುವ ಮುಸ್ಲಿಮರು.

ಪುತ್ತೂರು, ವಿಟ್ಲದ ಜಾತ್ರೆಗಳಿಗೆ ಬರುತ್ತಿದ್ದ ಮಣಿ ಸರಕಿನ ಅಂಗಡಿಯ ಒಬ್ಬ ಸಾಯಿಬ್ಬನಿಗೆ ನನ್ನ ತಂದೆಯವರ ಪರಿಚಯ ಚೆನ್ನಾಗಿತ್ತು. ಬಹುಶಃ ಅವನು ಅಥವಾ ಅವನ ಯಾರೋ ಸಂಬಂಧಿಕರು ನನ್ನ ತಂದೆಯವರ ಕಕ್ಷಿಗಾರರು. ವಕೀಲರಾಗಿ ನನ್ನ ತಂದೆಯವರಿಗೆ ಕಕ್ಷಿಗಾರರು ಕೊಟ್ಟ ಫೀಸನ್ನು ತೆಗೆದುಕೊಂಡು ಅಭ್ಯಾಸವೇ ಹೊರತು ತಾವಾಗಿ ಫೀಸು ಹೇಳಿ ವಸೂಲು ಮಾಡುವುದು ತಿಳಿದವರಲ್ಲ. ಹಾಗಾಗಿ ಅವರ ಕಕ್ಷಿಗಾರರು ಫೀಸು ಕೊಡದಿದ್ದರೂ ಪ್ರೀತಿ ಕೊಡುತ್ತಿದ್ದರು. ಅವರಲ್ಲಿ ಯಾವುದೋ ಒಬ್ಬ ಮಣಿ ಸರಕಿನ ಅಂಗಡಿಯವ ನಾವು ಮಾಡಿದ ವ್ಯಾಪಾರಕ್ಕೆ ಐದು, ಹತ್ತು ಪೈಸೆ ಕಮ್ಮಿ ಮಾಡುತ್ತಿದ್ದ. ನನ್ನ ತಾಯಿಯವರಲ್ಲಿ ''ನಿಮ್ಮಿಂದ ಲಾಭ ಬೇಡ ಅಮ್ಮ. ಅಸಲು ಮಾತ್ರ ಸಾಕು'' ಎಂದು ಹೇಳುತ್ತಿದ್ದ. ಅದು ಅವನ ವ್ಯಾಪಾರದ ವರಸೆಯೋ ನಿಜವಾದ ಮಾತೋ ಹೇಳಲಾರೆ. ಆದರೆ ಆ ಮಣಿ ಸರಕಿನ ಅಂಗಡಿಗಳಿಗೆ ಹೋಗುವುದು ಒಂದು ಸಂತೋಷ.

ವಿಟ್ಲದ ಜಾತ್ರೆಯಲ್ಲಿ ನನ್ನದು ಜಾತ್ರೆಯ ಸಂತೆಗೆ ಮೂರು ಸಲ ಮೂರು ರೀತಿ ಭೇಟಿ ಇರುತ್ತಿತ್ತು. ಒಂದು ಸಲ ವಿಟ್ಲದಲ್ಲಿ ಇದ್ದ ನನ್ನ ತಾಯಿಯ ಚಿಕ್ಕಮ್ಮನ ಮನೆಯವರೊಡನೆ ಅಥವಾ ನನ್ನ ತಾಯಿಯೊಡನೆ. ಇನ್ನೊಮ್ಮೆ ಸಂಜೆ ಹೈಸ್ಕೂಲು ಮುಗಿದ ಬಳಿಕ. ನನ್ನ ಸಕಲ ಸ್ನೇಹಿತರೊಡನೆ. ಅದರಲ್ಲಿ ಮುಸ್ಲಿಂ, ಕ್ರಿಶ್ಚಿಯನ್, ಹಿಂದೂ ಹೀಗೆ ಎಲ್ಲಾ ಧರ್ಮದವರೂ ಇದ್ದರು. ಆಮೇಲೆ ಕತ್ತಲು ಕಂತಿದ ಬಳಿಕ ನನ್ನ ಮೂವರು ಖಾಸಾಸ್ನೇಹಿತರಲ್ಲಿ ಯಾರು ಸಿಕ್ಕಿದರೋ ಅವರೊಡನೆ. ಈ ಮೂವರಲ್ಲಿ ಒಬ್ಬ ಕೂಡೂರಿನ ಲಕ್ಷ್ಮೀನಾರಾಯಣಪ್ಪಯ್ಯ ಈಗ ವಿಟ್ಲದ ಬಹುದೊಡ್ಡ ನಾಯಕ, ಪಂಚಲಿಂಗೇಶ್ವರ ದೇವಸ್ಥಾನದ ಪುನರುಜ್ಜೀವನಕ್ಕೆ ತೊಡಗಿದವ. ಮತ್ತೊಬ್ಬ ಸದಾಶಿವ ಮೂರ್ತಿ, ಉದ್ಯಮಿಯಾಗಿ ನಗರದಲ್ಲಿ ನೆಲೆ ನಿಂತವ. ಇನ್ನೊಬ್ಬ ಖಂಡಿಗೆ ರಾಧಾಕೃಷ್ಣ. ಓದು ಮುಗಿಸಿ ಕೊನೆಗೆ ಕೃಷಿಕನಾದ. ಆ ಜಾತ್ರೆಯ ಸಂತೆ ನೋಡುವುದು, ಮಣಿ ಸರಕಿನ ಬೆಲೆ ಕೇಳುವುದು, ಬೇಕಾದ್ದು ತಿನ್ನುವುದು ಎಲ್ಲವೂ ಒಂದು ಹಬ್ಬದ ಹಾಗೆ ಬಾಲ್ಯದ ನೆನಪು.

**ಮಣಿ ಸರಕಿನ ಅಂಗಡಿಗಳ ಗತಿ**

ಅಂತಹ ಮಣಿ ಸರಕಿನ ಅಂಗಡಿಗಳಿಗೆ ಈಗ ಏನಾಯಿತು ? ಜಾತ್ರೆಗಳಲ್ಲಿ ಅವು ಈಗ ಯಾಕೆ ಇಲ್ಲ ಎಂಬುದನ್ನು ಹೇಳುವುದಕ್ಕೆ ಈ ಪೀಠಿಕೆ ಬಳಸಬೇಕಾಯಿತು. ನಗರಕ್ಕೆ ನಾನು ಉದ್ಯೋಗ ನಿಮಿತ್ತ ಬಂದ ಬಳಿಕ ಇತ್ತೀಚೆಗೆ ವಿಟ್ಲ, ಪುತ್ತೂರಿನ ಜಾತ್ರೆಗಳಿಗೆ ಹೋಗುವುದು ತುಂಬಾ ಕಮ್ಮಿಯಾಗಿದೆ. ಮಕ್ಕಳಿಗೆ ಜಾತ್ರೆಯ ಗೌಜಿ ತೋರಿಸಬೇಕೆಂದು ಹೊರಟರೆ ಅವರಿಗೆ ಮಲ್ಲೇಶ್ವರಂ ಎಂಟನೇ ಕ್ರಾಸಿನ ಸಂಜೆಯ ಸಂತೆ ವಿಟ್ಲದ ನನ್ನ ಬಾಲ್ಯದ ಜಾತ್ರೆಗಿಂತ ಗೌಜಿಯಾಗಿ ಕಾಣುತ್ತದೆ. ಆದರೆ ಊರಲ್ಲೆ ಇರುವ ನನ್ನ ಸೋದರ ಅತ್ತಿಗೆ (ಅಪ್ಪನ ಅಕ್ಕನ ಮಗಳು) ಈಗೆಲ್ಲ ವಿಟ್ಲ ಜಾತ್ರೆಯ ಸಂತೆಗೆ ಒಮ್ಮೆ ಹೋಗಿಬರುವ ಕ್ರಮ ಉಂಟು. ಹೆಚ್ಚು ಕಮ್ಮಿ ನನ್ನ ತಾಯಿಯ ಪ್ರಾಯ. ಚಿಕ್ಕಂದಿನಲ್ಲಿ

ಅವಳೂ ನನ್ನ ಅಮ್ಮನ ಜೊತೆ ಜಾತ್ರೆ ಸಂತೆಗೆ ಬರುತ್ತಿದ್ದಳು.

ಕಳೆದ ಒಂದೆರಡು ವರುಷಗಳಲ್ಲಿ ಈ ನನ್ನ ಅತ್ತಿಗೆ ಈಗ ವಿಟ್ಲ ಜಾತ್ರೆಯ ಸಂತೆಗೆ ಹೋಗುವುದೇ ಬೇಜಾರ ಎನ್ನುತ್ತಿದ್ದಳು. ಅಲ್ಲಿ ಈಗ ಮೊದಲಿನ ಹಾಗೆ ಸಂತೆಯಿಲ್ಲ ಎನ್ನುತ್ತಿದ್ದಳು. ಮಣಿ ಸರಕಿನ ಅಂಗಡಿಗಳು ಈಗ ತುಂಬಾ ಕಮ್ಮಿಯಾಗಿವೆ ಎಂದು ಊರಿನಲ್ಲಿ ಎಲ್ಲರ ಅಭಿಪ್ರಾಯ. ಪೇಟೆಗಳಲ್ಲೆಲ್ಲಾ ಬಿಗ್ ಬಜಾರ್‌ನಂತಹ ಅಂಗಡಿಗಳು ಬಂದು ಪೇಟೆಯ ದೊಡ್ಡ ಬಜ಼ಾರ್ ಅಂಗಡಿಗಳಲ್ಲಿ ಪ್ರತಿದಿನ ಸಂತೆ ಇರುವುದೇ ಕಾರಣವಾಗಿ ಜನರು ಜಾತ್ರೆ ಸಂತೆಗೆ ಬರುವುದು ಕಡಿಮೆಯಾದುದೇ ಕಾರಣ ಎಂಬುದೊಂದು ಅಭಿಪ್ರಾಯ. ನನ್ನ ಸೋದರ ಅತ್ತೆ ಒಬ್ಬರು ಈಗ ಮೊದಲಿನ ಹಾಗೆ ಸಾಯಿಬ್ಬರ ಮಣಿ ಸರಕಿನ ಅಂಗಡಿಗಳೇ ಜಾತ್ರೆಯಲ್ಲಿ ಕಾಣಸುವುದಿಲ್ಲ ಎನ್ನುತ್ತಿದ್ದರು. ಅವಳ ಒಂದು ಅಂದಾಜಿನಂತೆ ಹಿಂದಿನ ಮಣಿ ಸರಕಿನ ಸ್ಯಾಬರೆಲ್ಲಾ ಈಗ ಮುದುಕರಾಗಿದ್ದಾರೆ. ಅವರಿಗೆ ಹಂದಲಿಕ್ಕೆ ಕೂಡುವುದಿಲ್ಲ. ಅವರ ಮಕ್ಕಳೆಲ್ಲಾ ನನ್ನ ಹಾಗೆ ಪೇಟೆಗೆ ಒಳ್ಳೆಯ ಉದ್ಯೋಗಕ್ಕೆ ಹೋಗಿದ್ದಾರೆ. ಹಾಗಾಗಿ ಈಗ ಜಾತ್ರೆಯಲ್ಲಿ ಮಣಿ ಸರಕಿನ ಅಂಗಡಿ ಇಡುವವರು ಯಾರೂ ಇಲ್ಲ.



...ಚುನಾವಣೆಯಲ್ಲಿ ಬರೀ ಆರು ಗೆದ್ದು ಕೈ ಸುಟ್ಟುಕೊಂಡ್ರು... ! ಅಲ್ಲಿ ಐದು ಗೆದ್ದು ಕೈವಾಡ ನಡೆಸಿದ್ರು... !!

ಎಂತಹ ಮುಗ್ಧ ವ್ಯಾಖ್ಯಾನ ಈ ಹಿರಿಯ ಪ್ರಾಯದ ಅತ್ತೆಯದು ಅನಿಸಿತು. ಎಲ್ಲರಿಗೂ ಎಲ್ಲಿ ಅವಳ ಮಕ್ಕಳ ಹಾಗೆ ಪೇಟೆಯಲ್ಲಿ ಉತ್ತಮ ಉದ್ಯೋಗಕ್ಕೆ ಹೋಗಲು ಸಾಧ್ಯ ? ಇಷ್ಟಕ್ಕೂ ಕಳೆದ ಮೂರು ನಾಲ್ಕು ವರುಷಗಳಿಂದ ಯಾಕೆ ಸಂತೆಯಲ್ಲಿ ಮಣಿ ಸರಕಿನ ಅಂಗಡಿಗಳು ಕಮ್ಮಿಯಾಗುತ್ತಾ ಹೋದವು ? ಅವರ ಮಕ್ಕಳಿಗೆಲ್ಲಾ ಒಮ್ಮೆಗೆ ಕೆಲಸ ಸಿಕ್ಕುಬಿಟ್ಟಿತೆ ಎಂದು ಕೇಳಿದೆ. ಅತ್ತೆಗೆ ಏನು ಉತ್ತರ ಸರಿ ಎಂದು ಗೊತ್ತಾಗದೆ ''ಎಂತದಪ್ಪ, ಗೊಂತಾವುತ್ತಿಲ್ಲೆ'' (ಏನೋ, ತಿಳಿಯುವದಿಲ್ಲಪ್ಪ) ಎಂದು ಹೇಳಿದರು.

ಈಚೆಗೆ ಊರ ಹಾಗೂ ಸೀಮೆಯ ಜಾತ್ರೆಗಳನ್ನು ಕೇಸರಿ ಬ್ಯಾನರು, ಪತಾಕೆ, ಧ್ವಜಗಳ ವಿಜೃಂಭಣೆಯಿಂದ ಪ್ರಾರಂಭಿಸಿ ಅಬ್ಬರದ ಹಿಂದುತ್ವದ ಕಾರ್ಯಕ್ರಮವೆಂಬಂತೆ ಬಿಂಬಿಸಲಾಗುತ್ತಿದೆ. ದೇವಸ್ಥಾನಗಳ ಜೀರ್ಣೋದ್ಧಾರ, ಬ್ರಹ್ಮಕಲಶ ಇತ್ಯಾದಿ ಎಲ್ಲಾ ಕಾರ್ಯಕ್ರಮಗಳನ್ನೂ ಹಿಂದುತ್ವದ ಪುನರುತ್ಥಾನದಂತೆ ಬಿಂಬಿಸಲಾಗುತ್ತಿದೆ. ಜಾತ್ರೆಯ ಸಂತೆಗಳಲ್ಲೂ ಬಂಟ್ವಾಳ ತಾಲೂಕಿನಲ್ಲಂತೂ ಹಿಂದೂಗಳಿಗೆ ಪ್ರಥಮ ಪ್ರಾಶಸ್ತ್ಯ ಎಂಬ ಅಲಿಖಿತ ಕಾನೂನು ಬಂದಂತಾಗಿದೆ. ಮುಸ್ಲಿಮರು ಮತ್ತಿತರರು ಸಾಲ ಮಾಡಿ ಬಂಡವಾಳ ಹಾಕಿ ಸರಕು ತಂದು ಮಾರಬೇಕು. ಅವರಿಗೆ ಏನಾದರೂ ಹೆಚ್ಚುಕಮ್ಮಿ, ಗಲಾಟೆ ಆಗಿ ಲುಕ್ಸಾನ ಆದರೆ ಸಾಲದ ಹೊರೆ, ಬಡ್ಡಿಯ ಬರೆ ಎರಡೂ ಸೇರುತ್ತವೆ. ಜಾತ್ರೆಯ ದೊಂಬಿಯಲ್ಲಿ ಮಣಿ ಸರಕುಗಳ ಲೂಟಿ ಬಹಳ ಸುಲಭ. ಅದನ್ನು ಸಂತೆಯ ಅಂಗಡಿಯಲ್ಲಿ ಕದಿಯುವುದೂ ಸುಲಭ.

**ಮಣಿ ಸರಕಿನ ಕಳ್ಳರು**

ಜಾತ್ರೆಯ ಮಣಿ ಸರಕಿನ ಟೆಂಟು ಅಂಗಡಿಗಳಲ್ಲಿ ಅಂಗಡಿ ಹಾಕಿದವನಲ್ಲದೆ ಅವನ ಜೊತೆ ಇನ್ನೂ ನಾಲ್ಕಾರು ಮಂದಿ ಇರುತ್ತಾರೆ. ನಡುವೆ ಕುಣಿ. ಹಿಂದೆ ಸ್ವಲ್ಪ ಎತ್ತರದ ಗ್ಯಾಲರಿ. ಎದುರು ತಗ್ಗಿನಲ್ಲಿ ಹರಡಿದ ಸರಕು ಸಾಮಾನುಗಳು. ಹೀಗೆ ಸುತ್ತಲೂ ಮಣಿ ಸರಕು, ನಡುವೆ ಅಂಗಡಿಯವ ಕೂತು ವ್ಯಾಪಾರ. ಈ ಮಣಿ ಸರಕಿನ ಸಣ್ಣ ಸಾಮಾನುಗಳನ್ನು ಕದಿಯುವವರೂ ಹೆಚ್ಚು. ಗಿಲಿಟಿನ ಉಂಗಿಲ, ಮಣಿ ಕೂರಿಸಿದ ಟಿಕ್ಲಿ, ಅಂಗೈಯೊಳಗೆ ನಿಲ್ಲುವ ಗಿಲಿಗಿಲಿ, ಹೆಂಗಸರಿಗೆ ಬೇಕಾದ ಬಣ್ಣದ ಸಣ್ಣ ಸೇಫ್ಟಿಪಿನ್‌ಗಳು, ಪುಟ್ಟ ಕನ್ನಡಿ, ಪ್ಲಾಸ್ಟಿಕ್ಕಿನ ಚಿಕ್ಕ ಬೈನಾಕ್ಯುಲರ್, ಜಡೆಗೆ ಸಿಕ್ಕಿಸಬಹುದಾದ ಬಣ್ಣದ ಕ್ಲಿಪ್ಪು, ದೇವರ ಮುಂದೆ ನೆಣೆದೀಪದಂತೆ ಕಾಣುವ ಬೆರಳಷ್ಟು ಉದ್ದದ ಬ್ಯಾಟರಿ ದೀಪ ಇತ್ಯಾದಿ.

ಜಾತ್ರೆಯ ಸಂತೆಯಲ್ಲಿ ಮಣಿ ಸರಕಿನ ಅಂಗಡಿ ಎದುರು ಜನ ಗುಂಪು ಸೇರಿರುತ್ತಾರೆ. ಅದರ ಇದರ ಬೆಲೆ ಎಷ್ಟು ಎಂದು ಕೇಳುವುದು ಇತ್ಯಾದಿ ವ್ಯಾಪಾರದ ಭರಾಟೆ ಇರುವಾಗ ನಿಂತ ಜನರ ಹಿಂದಿನಿಂದ ಮೆಲ್ಲಗೆ ಕೈ ನುಸುಳಿಸಿ ಸಾಮಾನು ಕದಿಯುವುದು ಸಾಮಾನ್ಯವಾಗಿ ಎಲ್ಲಾ ಕಡೆ ನಡೆಯುತ್ತದೆ.

ಮಣಿ ಸರಕಿನ ಅಂಗಡಿಯವರಿಗೆ ಈ ಕಳ್ಳರನ್ನು ನಿಯಂತ್ರಿಸುವುದು ಬಹಳ ಮುಖ್ಯ. ಅಂಗಡಿಯವನ ಜೊತೆ ಇರುವವರ ಮತ್ತು ಮಣಿ ಸರಕಿನ ಅಂಗಡಿಯವನ ಕಣ್ಣು ವ್ಯಾಪಾರಕ್ಕೆ ಇಟ್ಟ ಸಾಮಾನುಗಳ ಮೇಲೆ ಇರುತ್ತದೆ. ಅಂಗಡಿಯವರ ಕೈಯಲ್ಲಿ ಬಿಡಿಸಿದ ಸೇಫ್ಟಿಪಿನ್ ಅಥವಾ ಒಂದು ಸೂಜಿ ಸದಾ ಇರುತ್ತದೆ. ಜನರ ಗುಂಪಿನೊಳಗಿಂದ ಅಥವಾ ಹಿಂದಿನಿಂದ ಕದ್ದುಕೊಳ್ಳಲು ಬಂದು ಕೈ ಮಣಿ ಸರಕಿನ ಮೇಲೆ ಬಂದ ಕೂಡಲೆ ಈ ಸೂಜಿಯಿಂದ ಕದ್ದುಕೊಳ್ಳಲು ಚಾಚಿದ ಕೈಯನ್ನು ಚುಚ್ಚುತ್ತಾರೆ. ಕಳ್ಳರು ಕೈಯನ್ನು ಹಿಂದೆ ಎಳಕೊಂಡು ಮೆಲ್ಲಗೆ ಸದ್ದಾಗದೆ ಜಾಗ ಖಾಲಿಮಾಡುತ್ತಾರೆ. ಎಲ್ಲಾ ಮಣಿ ಸರಕಿನ ಅಂಗಡಿಯವರೂ ಜಾತ್ರೆಯಲ್ಲಿ ಕದಿಯುವವರ ಕೈಗೆ ಸೂಜಿ ಚುಚ್ಚುವುದು ಒಂದು ನಡೆದುಕೊಂಡು ಬಂದ ಕ್ರಮ.

**ಸೂಜಿ ಚುಚ್ಚಿ ಏಡ್ಸ್ ರೋಗ**

ಹೀಗೆ ಜಾತ್ರೆಗಳಲ್ಲಿ ಕಳ್ಳರನ್ನು ನಿಯಂತ್ರಿಸಲು ಸೂಜಿ ಚುಚ್ಚಿದ್ದೆ ಈಗ ನಾಲ್ಕು ವರುಷದ ಹಿಂದೆ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಕುಂದಾಪುರದ ಹತ್ತಿರ ದೊಡ್ಡ ಕೋಮುಗಲಭೆಗೆ ಕಾರಣವಾಯಿತು. ಅಲ್ಲಿ ಜಾತ್ರೆಯಲ್ಲಿ ಮಣಿ ಸರಕಿನ ಅಂಗಡಿ ಇಟ್ಟ ಸಾಯಿಬ್ಬನೊಬ್ಬ ಅಂಗಡಿಯಲ್ಲಿದ್ದ ಸಾಮಾನು ಕದಿಯಲು ಕೈ ಚಾಚಿದ ಒಂದಿಬ್ಬರಿಗೆ ಸೂಜಿಯಲ್ಲಿ ಚುಚ್ಚಿರಬೇಕು. ಅವರಲ್ಲಿ ಒಬ್ಬನಿಗೆ ಕೈಯಲ್ಲಿ ಒಂದು ಹನಿ ರಕ್ತ ಬಂದಿದೆ ಎಂಬ ಸುದ್ದಿ ಹಬ್ಬಿ ಅದೊಂದು ದೊಡ್ಡ ಷಡ್ಯಂತ್ರ ಎಂಬ ವದಂತಿಯಾಗಿ ಹರಡಿತು.

ಆಗ ಹರಡಿದ ವದಂತಿ ಹೀಗೆ : ಜಾತ್ರೆಯಲ್ಲಿ ಮುಸ್ಲಿಮರು ರಕ್ತ ಲೇಪಿತ ಸೂಜಿಯನ್ನು ಹಿಂದುಗಳಿಗೆ ಚುಚ್ಚಿ ಏಡ್ಸ್‌ರೋಗ ಹಬ್ಬಿಸುತ್ತಾರೆ. ಹಿಂದೂಗಳಿಗೆ ಹೀಗೆ ಏಡ್ಸ್‌ರೋಗ ಹಬ್ಬಿಸುವ ಮೂಲಸ್ಥಾನ ಜಾತ್ರೆಯಲ್ಲಿರುವ ಮುಸ್ಲಿಮರ ಅಂಗಡಿಗಳು. ಈ ವದಂತಿಯಿಂದಾಗಿ ಅನೇಕ ಅಂಗಡಿಗಳ ಮೇಲೆ ಧಾಳಿಯಾಯಿತು. ಸಾಮಾನುಗಳ ಲೂಟಿಯಾಯಿತು. ಇದು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಿಂದೂಗಳ ದೇವಸ್ಥಾನಗಳ ಜಾತ್ರೆಯಲ್ಲಿ ಮುಸ್ಲಿಮರ ಅಂಗಡಿ ಯಾಕೆ ಬೇಕು ಎಂಬ ವಾದಕ್ಕೆ ಇನ್ನಷ್ಟು ಪುಷ್ಟಿ ನೀಡಿತು. ಹೀಗೆ ಪ್ರಾರಂಭವಾದ ಬಿರುಸು ಕ್ರಮೇಣ ಮುಸ್ಲಿಂ ಅಂಗಡಿಗಳೇ ಜಾತ್ರೆಗಳಲ್ಲಿ ಕಮ್ಮಿಯಾಗಲು ಕಾರಣವಾಯಿತು ಎಂದು ನಾನು ತಿಳಿದಿದ್ದೇನೆ.

ವಿಟ್ಲದ ಸುತ್ತಮುತ್ತಲಂತೂ ಹಿಂದೂ-ಮುಸ್ಲಿಂ ಇಬ್ಬರಿಗೂ ಸಮಾನವಾಗಿ ಬಣ್ಣದ ಗೋಲಿ ಸೋಡಾ ವ್ಯಾಪಾರ ಇತ್ತು. ಕೆಲವೆಡೆ ಹಿಂದೂಗಳ ಸೋಡಾ ಅಂಗಡಿ ಜನಪ್ರಿಯ. ಇನ್ನು ಕೆಲವೆಡೆ ಜಿಂಜರ್ ಸೋಡಾ ಹಾಗೂ ಗರಂ ಸೋಡಾ ಶರ್ಬತ್ತುಗಳಿಗೆ ಮುಸ್ಲಿಂ ಅಂಗಡಿಗಳು ಪ್ರಖ್ಯಾತ. ನಮ್ಮ ಹಳ್ಳಿಯ ಯಕ್ಷಗಾನ ಬಯಲಾಟಗಳಾಗುವಾಗ ನಮ್ಮೂರಲ್ಲಿ ಒಬ್ಬ ಮುಸ್ಲಿಂ ಹಾಗೂ ಹಿಂದೂವಿನ 'ಜೊಯಿಂಟ್ ಅಂಗಡಿ'ಯೂ ಇರುತ್ತಿತ್ತು. ಬಾಜಲ್, ಕೋಕಾಕೋಲಾ, ಪೆಪ್ಸಿ ಮೊದಲಾದವು ಹೆಚ್ಚಾಗುತ್ತಾ ಹೋದಂತೆ ಗೋಲಿ ಸೋಡಾ ಅಂಗಡಿಗಳೂ ಕಮ್ಮಿಯಾಗುತ್ತಾ ಹೋದವು. ಜಾತ್ರೆಗಳಲ್ಲಿ ಕ್ರಮೇಣ ಮುಸ್ಲಿಂ ಸೋಡಾ ಅಂಗಡಿಗಳು, ಹಿಂದೂ-ಮುಸ್ಲಿಮರ ಕೆಲವು 'ಜೊಯಿಂಟ್ ಅಂಗಡಿಗಳೂ' ಕಮ್ಮಿಯಾದವು.

ನನ್ನ ಅತ್ತಿಗೆ ಹಾಗೂ ಸೋದರತ್ತೆ ಹಾಗೂ ನನ್ನ ಅನೇಕ ಬಂಧುವರ್ಗದವರು ಸ್ವಭಾವತಃ ಉದಾರ ಮಾನವತಾವಾದದಲ್ಲಿ ನಂಬಿಕೆ ಇರುವವರು. ಆದರೂ ಅಂತಹ ಅರಿವಿರುವವರ ಮನಸ್ಸಲ್ಲೂ ಯಾಕೋ ಏನೋ ದಕ್ಷಿಣ ಕನ್ನಡ ಜಿಲ್ಲೆಯಾದ್ಯಂತ ವಿನಾ ಕಾರಣ ತಮಗೆ ಪರಿಚಯ ಇಲ್ಲದ ಮುಸ್ಲಿಂ ಎಂಬ ಸಮುದಾಯದ ಬಗ್ಗೆ ಒಂದು ರೀತಿಯ ಅಸಹನೆ ಬೆಳೆಯುತ್ತಾ ಹೋದುದನ್ನು ಗಮನಿಸಬಹುದು. ಆದರೆ ತಮಗೆ ಪರಿಚಯ ಇರುವ, ತಮ್ಮ ಮನೆಗಳಿಗೆ ಕೂಲಿ ಕೆಲಸ ಇತ್ಯಾದಿಗಳಿಗೆ ಬರುವ ಮುಸ್ಲಿಮರ ಜೊತೆ ಬಹಳ ಸಹಜ ವ್ಯವಹಾರ ಇರುತ್ತದೆ. ಅವರ ಸಿಟ್ಟಿನ ಒಂದು ಮೂಲಕಾರಣ ಚರಿತ್ರೆಯಲ್ಲಿ ಹಿಂದೂಗಳಿಗೆ ಅನ್ಯಾಯವಾಗಿದೆ ಎಂಬುದು.

(ಮುಂದುವರಿಯುವುದು)

ಎಸ್. ಆರ್. ವಿಜಯಶಂಕರ
ಸಿ - ೨/೧೦೩, ಓಂಕಾರ್ ಅಪಾರ್ಟ್‌ಮೆಂಟ್ಸ್, ೪ನೇ ಮುಖ್ಯರಸ್ತೆ
೧೨ನೇ ಅಡ್ಡರಸ್ತೆ, ಮಲ್ಲೇಶ್ವರ, ಬೆಂಗಳೂರು - ೫೬೦ ೦೦೩

**ಬ್ಯಾಂಕ್** ಸೇವೆಯಲ್ಲಿ ಪ್ರತಿ ಮೂರು ವರ್ಷಕ್ಕೊಮ್ಮೆ ವರ್ಗಾವಣೆಯಾಗುವುದು ಅನಿವಾರ್ಯ. ಹೀಗಾಗಿ ಮೂರುವರೆ ದಶಕಗಳ ಸೇವಾವಧಿಯಲ್ಲಿ ಅನೇಕ ಸ್ಥಳಗಳಿಗೆ ವರ್ಗಾವಣೆಯಾಗಿರುವ ನನಗೆ ವೈವಿಧ್ಯಮಯ ಅನುಭವಗಳಾಗಿವೆ.

ಇತ್ತೀಚೆಗೆ ಕೋಲಾರಕ್ಕೆ ವರ್ಗಾವಣೆಯಾಗಿ ಪ್ರತಿಷ್ಠಿತ ಬಡಾವಣೆಯೊಂದರಲ್ಲಿ ವಿಶಾಲವಾದ ಬಾಡಿಗೆ ಮನೆಯಲ್ಲಿ ವಾಸಿಸುವ ಸಂದರ್ಭ ಒದಗಿಬಂತು.

ಒಂದು ದಿನ ಬೆಳಗ್ಗೆ ಮನೆ ಮಾಲೀಕರ ಮಗಳು ಬಂದು ಕಾಂಪೌಂಡ್ ಒಳಗಿನ ಮನೆ ಮುಂದಿನ ಹಿತ್ತಲಿನಲ್ಲಿ ಕಷ್ಟಪಟ್ಟು ನೆಟ್ಟಿದ್ದ, ನಂತರ ಚಿಗುರೊಡೆದಿದ್ದ ನುಗ್ಗೆ ಗಿಡವನ್ನು ಕಿತ್ತು ಹೊರಗೆಸೆದಳು. ಜೊತೆಗೆ, ನಾವು ಆರೋಗ್ಯದ ದೃಷ್ಟಿಯಿಂದ (ಆಯುರ್ವೇದ ಉಪಯುಕ್ತ) ಬೆಳೆದಿದ್ದ ಲೋಳೆಸರ (ಆಲೊವೇರ) ಮತ್ತು ಗುಳ್ಬದನೆ ಗಿಡಗಳನ್ನೂ ಕಿತ್ತು ದೂರ ಎಸೆದುಬಂದಳು. ಎರಡನೇ ವರ್ಷದ ಇಂಜಿನಿಯರಿಂಗ್ ಪದವಿಯಲ್ಲಿ ವ್ಯಾಸಂಗ ಮಾಡುತ್ತಿದ್ದ ವಿದ್ಯಾವಂತ ಈ ಯುವತಿಯನ್ನು ಏಕೆ ಈ ರೀತಿಯ ಏಕಪಕ್ಷೀಯ ತೀರ್ಮಾನ ತೆಗೆದುಕೊಂಡೆ ಎಂದು ವಿಚಾರಿಸಿದೆ. ಇತ್ತೀಚೆಗೆ ಅವರ ತಾಯಿಗೆ ಬೆಂಗಳೂರಿನಲ್ಲಿ ಒಂದು ಸಣ್ಣ ಅಪಘಾತವಾಯಿತಂತೆ. ಆಗ ಅವರ ಕುಟುಂಬದ ಸದಸ್ಯರು ಮನೆ ಮುಂದೆ ನುಗ್ಗೆ ಗಿಡವಿದ್ದರೆ ಅನಿಷ್ಟ. ಅದು ಅಪಶಕುನ, ಬೆಳಿಗ್ಗೆ ಎದ್ದಾಗ ಅದನ್ನು ಎದುರಿನಲ್ಲಿ ನೋಡಬಾರದು. ನಿಮ್ಮ ಬಾಡಿಗೆದಾರರು ಇಂತಹ ಅಪಶಕುನದ ಗಿಡಗಳನ್ನು, ಬೆಳೆಸಿರುವುದರಿಂದ ನಿಮಗೆ ಕೇಡಾಗುತ್ತಿದೆ. ಮೊದಲು ಅದನ್ನು ತೆಗೆಯಿರಿ ಎಂದೆಲ್ಲಾ ಉಪದೇಶ ನೀಡಿದ್ದಾರೆ ಎಂದೆಲ್ಲಾ ವಿವರಿಸಿದಳು.

ಪ್ರಖ್ಯಾತ ವಿಚಾರವಾದಿ ಡಾ॥ ಎಚ್. ನರಸಿಂಹಯ್ಯನವರ ಶಿಷ್ಯನಾದ ನಾನು ವೈಜ್ಞಾನಿಕವಾಗಿ ವಿಶ್ಲೇಷಿಸಿದೆ. ಮನುಷ್ಯನಿಗೆ ಇಂತಹ ಅವೈಚಾರಿಕ ನಡವಳಿಕೆಗಳು ಹೇಗೆ ಕುರುಡು ನಂಬಿಕೆಗಳಾಗಿ, ನಂತರ ಪೀಳಿಗೆಯಿಂದ ಪೀಳಿಗೆಗೆ ಪಾರಂಪರಿಕ ಸಂಪ್ರದಾಯವಾಗಿ ಬೆಳೆದುಬಿಡುತ್ತವೆ ಎಂಬುದಕ್ಕೆ ಅಸಂಖ್ಯಾತ ಉದಾಹರಣೆಗಳಿವೆ. ಕೊನೆಗೆ ಈ ಮೌಢ್ಯ ಮನೆಯ ಹಿತ್ತಲನ್ನೂ ಬಿಡದೆ ಸರ್ವವ್ಯಾಪಿಯಾಗಿ ಹರಡಿಕೊಂಡಿದೆ. ಇದರಲ್ಲಿ ಆಬಾಲವೃದ್ಧರಾದಿಯಾಗಿ ಅಮಾಯಕ ಮನಸ್ಸುಗಳಿಂದ ಹಿಡಿದು ಅಕ್ಷರ ಕಲಿತ ಶಿಕ್ಷಕರವರೆಗೂ ಹಾಸುಹೊಕ್ಕಾಗಿದೆ. ಡಾ॥ ಎಚ್.ಎನ್. ಹೇಳುವಂತೆ ''ಶಿಕ್ಷಿತ ಕಂದಾಚಾರಿ ಅಶಿಕ್ಷಿತ ಕಂದಾಚಾರಿಗಿಂತ ಹೆಚ್ಚು ಅಪಾಯಕಾರಿ.''

ಕರ್ನಾಟಕದ ಅನೇಕ ಭಾಗಗಳಲ್ಲಿ ಕೆಲಸ ಮಾಡಿರುವ ನಾನು ಮನೆಯ ಮುಂದಿನ ನುಗ್ಗೆ ಗಿಡದ ಮೇಲೆ ಅವಾಸ್ತವದ ಮೌಢ್ಯವನ್ನು ತಳಕುಹಾಕಿದ್ದಾರೆ ಎಂಬುದನ್ನು ಕಂಡುಕೊಂಡೆ. ವಾಸ್ತವದಲ್ಲಿ ನುಗ್ಗೆಕಾಯಿ ಅತ್ಯಂತ ಶ್ರೇಷ್ಠ ಪೌಷ್ಟಿಕಾಂಶಗಳನ್ನು ನೀಡುವ ಕಲ್ಪವೃಕ್ಷ. ಆಯುರ್ವೇದದ ದೃಷ್ಟಿಯಲ್ಲಿ ಉತ್ಕೃಷ್ಟ ಔಷಧಿ ಗುಣಗಳನ್ನು ಹೊಂದಿರುವ ಅಪರೂಪದ ಸಸ್ಯ. ಅದರ ಎಲೆ, ಹೂ ಮತ್ತು ಕಾಯಿಗಳು ಮನುಷ್ಯರ ಪರಮಪ್ರಿಯ ಖಾದ್ಯಗಳನ್ನು ಮಾಡಲು ಬಳಕೆಯಾಗುತ್ತವೆ. ಇವುಗಳಲ್ಲಿ ಹೆಚ್ಚು ಕಬ್ಬಿಣದ ಅಂಶ ಮತ್ತು ವಿಟಮಿನ್-ಎ ಇರುತ್ತವೆ. ಅಪೌಷ್ಟಿಕತೆಯಿಂದ ನರಳುವವರಿಗೆ, ರಕ್ತಹೀನತೆ ಸಮಸ್ಯೆ ಇರುವವರಿಗೆ ಇದು ದಿವ್ಯಔಷಧ. ಇದೊಂದು ಜನಪದ ಅಡುಗೆಯ ಪ್ರಕಾರ. ಕಬ್ಬಿಣದ ಅಂಶ ಹೆಚ್ಚಿಸುವ ಇಂಜಕ್ಷನ್‌ಗೆ ಬದಲಾಗಿ ನುಗ್ಗೆಸೊಪ್ಪು, ನುಗ್ಗೆಹೂವಿನ ಪಲ್ಯ ಮತ್ತು ಕಾಯಿ ಗೊಜ್ಜನ್ನು ಸೇವಿಸುವುದರಿಂದ ಗರ್ಭಿಣಿಯರಿಗೆ ನೈಸರ್ಗಿಕ ಪರಿಹಾರ ದೊರೆಯುತ್ತದೆ. ಅದರ ಕಾಂಡದ ಭಾಗವು ವೀಳ್ಯದ ಎಲೆಬಳ್ಳಿ ಹಬ್ಬಿಸಲು ಉಪಯುಕ್ತವಾಗುತ್ತದೆ. ಹಿತ್ತಲಲ್ಲಿ ಬೆಳೆಸುವುದರಿಂದ ಇತರೆ ಮರಗಳಂತೆ ಹೆಚ್ಚಿನ

ಡಾ॥ ವೆಂಕಟಯ್ಯ ಅಪ್ಪಗೆರೆ

# ಹಿತ್ತಲ ಮೌಢ್ಯ



ಬೇರನ್ನು ಆಳಕ್ಕಿಳಿಸಿ ಮನೆ ಪಾಯಕ್ಕಾಗಲೀ ಅಥವಾ ಕಾಂಪೌಂಡಿಗಾಗಲೀ ಅಪಾಯವಿರದು. ಇದನ್ನು ಅತ್ಯಂತ ಸುಲಭವಾಗಿ ಬೆಳೆಸಬಹುದಾಗಿದೆ. ಯಾವುದೇ ವಿಶೇಷವಾದ ಗೊಬ್ಬರ, ನೀರುಣಿಸುವ ಅಗ್ರತೆಗಳಿಲ್ಲದೆ ನುಗ್ಗೆ ಮರವನ್ನು ಎಲ್ಲಾ ಋತುಮಾನಗಳಲ್ಲೂ ಸಮೃದ್ಧವಾಗಿ ಬೆಳೆಯ ಬಹುದು. ಇದೊಂದು ಶೂನ್ಯ ಬಂಡವಾಳದ ಬೆಳೆ. ವಾಸ್ತವದಲ್ಲಿ ಪ್ರತಿ ಮನೆಯ ಹಿತ್ತಲಲ್ಲಿ ಕನಿಷ್ಠ ಮೂರು ಗಿಡಗಳನ್ನು ಕಡ್ಡಾಯವಾಗಿ ಬೆಳೆಸಿದರೆ ಚೆನ್ನ. ಅವೆಂದರೆ ನುಗ್ಗೆ, ಬಾಳೆ ಮತ್ತು ಪರಂಗಿ (ಪಪ್ಪಾಯಿ) ಗಿಡಗಳು.



ಆದಾಗ್ಯೂ ಏಕೆ ಈ ಉಪಯುಕ್ತ ನುಗ್ಗೆ ಗಿಡದ ಕುರಿತು ಮೌಢ್ಯ ಸೃಷ್ಟಿಸಿದ್ದಾರೆ ?

ಈ ಗಿಡದ ರೆಂಬೆ ಅತಿ ಸುಲಭವಾಗಿ ಮುರಿದು ಹೋಗುತ್ತದೆ. ಅದರ ಮೇಲೆ ಸ್ವಲ್ಪ ಭಾರ ಬಿದ್ದರೂ ಗಿಡ ಮುರಿದುಬೀಳುತ್ತದೆ. ಅದಕ್ಕಾಗಿಯೇ ಇರಬೇಕು, ''ನುಗ್ಗೆ ಗಿಡದ ರೆಂಬೆಮುರಿದಂಗೆ ನಿನ್ನ ಕೈಕಾಲುಗಳನ್ನು ಮುರಿದು ಹಾಕುತ್ತೇನೆ'' ಎಂಬ ನಾಣ್ಣುಡಿ ರೂಢಿಯಲ್ಲಿದೆ. ಮನೆಯ ಮುಂದಿನ ಈ ನುಗ್ಗೆ ಗಿಡದ ಮೇಲೆ ಮಕ್ಕಳು ಆಟವಾಡಲು ಮರವೇರಿದರೆ ರೆಂಬೆ ಮುರಿದು ಮಕ್ಕಳಿಗೆ ಪೆಟ್ಟಾಗಿರುವ ಪ್ರಕರಣಗಳಿವೆ. ಅದು ಅಪಶಕುನವಂತೆ. ಆದ್ದರಿಂದ ಅನಿಷ್ಟದ ಗಿಡವೆಂಬ ಅಪಖ್ಯಾತಿಗೆ ಒಳಗಾಗಿದೆ. ಅದೊಂದೇ ಕಾರಣಕ್ಕೆ ಅಂತಹ ಉತ್ಕೃಷ್ಟ ಪೌಷ್ಟಿಕಾಂಶಗಳಿಂದ ಕೂಡಿದ ಬಹುಉಪಯೋಗಿ ಗಿಡವನ್ನು ವಿನಾಕಾರಣ ದೂಷಿಸುವುದು ಮೌಢ್ಯದ ಪರಮಾವಧಿಯೇ ಸರಿ. ಅದರ ಸಾಲಿಗೆ ಈಗ ನೆಲ್ಲಿ ಗಿಡವೂ ಸೇರಿದೆ. ಪಕ್ಕದ ಮನೆಮಕ್ಕಳು ಕಳ್ಳತನದಿಂದ ಕಾಂಪೌಂಡ್ ಏರಿ ನೆಲ್ಲಿ ಕಾಯಿ ಕೀಳುವಾಗ ಆಗುವ ಅನಾಹುತ, ಜೊತೆಗೆ ಅಕ್ಕಪಕ್ಕದವರು ಇದನ್ನೇ ಮುಂದಿಟ್ಟುಕೊಂಡು ಜಗಳ ತೆಗೆಯುವುದಕ್ಕೆ ಮತ್ತು ದ್ವೇಷ ವೈಷಮ್ಯಗಳಿಗೆ ಆಸ್ಪದ ಕೊಡುವುದರಿಂದ ಆ ಗಿಡಕ್ಕೂ ಮೌಢ್ಯದ ಕಳಂಕ ಅಂಟಿಕೊಂಡಿದೆ.

ಬಾಳೆಗಿಡ ಹಾಕದಿರುವುದಕ್ಕೆ ಕಾರಣ, ಅದು ಒಂಟಿ ಬಾಳೆಗೊನೆ ಕೊಡುತ್ತದೆ ಎಂದು. ನಂತರ ಆ ಗಿಡ ಇದ್ದರೂ ಸತ್ತಂತೆ; ಅಂದರೆ ಒಂದು ಗಿಡಕ್ಕೆ ಒಂದೇ ಗೊನೆ. ಆದ್ದರಿಂದ ಅದನ್ನು ನೆಡುವವನಿಗೆ ಒಂಟಿ ಸಂತಾನವಾಗುವುದೆಂಬ ಮೌಢ್ಯವನ್ನು ಅಂಟಿಸಲಾಗಿದೆ. ಪ್ರತಿದಿನ ಅದನ್ನು ನೋಡುವವರಿಗೂ ಒಂಟಿ ಸಂತಾನ ವಾಗುವುದೆಂಬ ನಿರಾಧಾರ ನಂಬಿಕೆಯನ್ನು ಬಿತ್ತಿದ್ದಾರೆ. ಅದಕ್ಕೆ ಅದನ್ನು ನೆಡಬಾರದೆಂಬ ಮೌಢ್ಯವೂ ಹುಟ್ಟಿಕೊಂಡಿದೆ.

ಇದರಂತೆಯೇ ಲೋಳೆಸರ (ಅಲೋವೇರ) ಏಕೆ ಬೆಳೆಸಬಾರದೆಂದರೆ ಅದು ನೋಡಲು ಹಾವಿನಂತೆ ಕಾಣುತ್ತದಂತೆ. ಜೊತೆಗೆ ಹಿತ್ತಲಿಗೆ ನುಗ್ಗಿದ ಹಾವು ತಪ್ಪಿಸಿಕೊಳ್ಳಲು ತನ್ನಂತೆ ಕಾಣುವ ಲೋಳೆಸರದ ಗಿಡದ ಮರೆಯಲ್ಲಿ ಅವಿತು ಕೊಳ್ಳುತ್ತದೆಯಂತೆ. ಆಯುರ್ವೇದದ ಪ್ರಕಾರ ಅದರ ಉಪಯುಕ್ತತೆ ಅಸದಳ. ಈ ರೀತಿಯಾಗಿ ಮೌಢ್ಯ ಮನೋಭಾವವನ್ನು ತಾಳಿ ಅದರ ಅಗಾಧವಾದ ಉಪಯುಕ್ತತೆಯನ್ನು ಕಳೆದು ಕೊಳ್ಳುವುದು ಸರಿಯಲ್ಲ. ಅದೊಂದು ಅಂಧಾನು ಕರಣೆಯಷ್ಟೆ. ಅದರಂತೆ ಗುಳ್ಬದನೆಕಾಯಿ ನೆಡಬಾರದು ಎಂಬುದಕ್ಕೆ ಅದು ಮುಳ್ಳಿನಿಂದ ಕೂಡಿದ್ದು, ಬಹುಶಃ ಮಕ್ಕಳು ಮರಿಗೆ ಚುಚ್ಚಿಕೊಂಡು ಘಾಸಿಯಾಗಿರುವುದು ಕಾರಣ ವಿರಬೇಕು. ಆದರೆ ಅದರಲ್ಲಿರುವ ಔಷಧದ ಗುಣ ಬೇರಾವ ಗಿಡದಲ್ಲೂ ಇಲ್ಲ. ಹುಣಿಸೆ ಗಿಡದಲ್ಲಿ ದೆವ್ವ ಸೇರಿಕೊಳ್ಳುತ್ತದೆ ಎಂಬ ಭೀತಿ ಹುಟ್ಟಿಸುತ್ತಾರೆ. ಬಹುಶಃ ಇದಕ್ಕೂ ಅದು ಕಾಂಪೌಂಡ್‌ಅನ್ನು ಉರುಳಿಸುತ್ತದೆ ಮತ್ತು ಮನೆಯ ಅಡಿಪಾಯವನ್ನು ಅಲ್ಲಾಡಿಸುವ ಮಟ್ಟಕ್ಕೆ ಆಳದಲ್ಲಿ ಬೇರುಬಿಡುತ್ತದೆ ಎಂಬ ಕಾರಣವಿರಬಹುದು. ಜೊತೆಗೆ ಅದರ ನೆರಳಲ್ಲಿ ಬೇರೆ ಯಾವ ಬೆಳೆಯೂ ಬಾರದು ಮತ್ತು ಪದೇ ಪದೇ ಮಕ್ಕಳು ಹುಣಿಸೆಕಾಯಿಗಾಗಿ ಕಲ್ಲು ಹೊಡೆಯ ಬಾರದು ಎಂಬ ಕಾರಣಕ್ಕೆ ಈ ರೀತಿ ಗುಮ್ಮನ ಕಥೆ ಕಟ್ಟಿರಬೇಕು.

ಅದೇ ರೀತಿ ಹಿತ್ತಲಿನ ನಿಂಬೆಗಿಡ ಸರಿಯಾಗಿ ಕಾಯಿಬಿಡಲು ಸತ್ತ ನಾಯಿ ಅಥವಾ ಬೆಕ್ಕನ್ನು ಗಿಡದ ಪಕ್ಕ ಹೂಳಬೇಕೆಂಬ ನಂಬಿಕೆಯಿದೆ. ಇದಕ್ಕೆ ನಿಜವಾದ ಕಾರಣವೆಂದರೆ ಹುಳಿಗಿಡಗಳು(ಸಿಟ್ರಸ್) ಬೆಳೆಯಲು ಪ್ರಾಣಿಜನ್ಯ ಪೌಷ್ಟಿಕಾಂಶ ಗಳಿರಬೇಕು. ಆದ್ದರಿಂದ ಗಿಡಗಳಲ್ಲೂ ನಾನ್-ವೆಜಿಟೇರಿಯನ್‌ಗಳಿವೆ! ಹುಳಿ ಗಿಡಗಳಾದ ನಿಂಬೆ, ನೆಲ್ಲಿ, ಕಿತ್ತಳೆ, ಹಿರಳೆ ಇತ್ಯಾದಿ ಎರಡು ಗಿಡಗಳ ಮಧ್ಯೆ ಹೆಣೆದುಕೊಂಡಿರುವ ಜೇಡೆ (ಜೇಡರ ಬಲೆ)ಯನ್ನು ಕಿತ್ತುಹಾಕಬೇಕು. ಅದು ನೋಡಲು ಅನಿಷ್ಟ ಎಂಬಂತಹ ಹಿತ್ತಲ ಗಿಡದ ಬಗೆಗಿನ ಮೌಢ್ಯಗಳು ಹಲವಾರಿವೆ. ಬಹುಶಃ ಎರಡು ಗಿಡಗಳ ಮಧ್ಯೆ ಓಡಾಡಲು ಅಡ್ಡಿಪಡಿಸುತ್ತದೆ ಎಂಬ ಕಾರಣವಿರಬೇಕು. ಮುಗ್ಗರಿಸಿ ಬೀಳುವ ಸಂಭವವಿರುತ್ತದೆ ಅಥವಾ ಮುಖಕ್ಕೆಲ್ಲಾ ಅಂಟಿಕೊಳ್ಳುತ್ತದೆ ಎಂಬ ಕಾರಣವೂ ಇರಬಹುದು. ಆದರೆ ಅದರ ಉಪಯೋಗ ಬಹುಮುಖಿ. ಹಿತ್ತಲಿನಲ್ಲಿ ಹಾರಾಡುವ ಹಾನಿಕರ ಕೀಟಗಳು ಹರಿದಾಡುವ ಕ್ರಿಮಿಗಳನ್ನು ಈ ಗಿಡದ ಮಧ್ಯೆ ಇರುವ ಜೇಡರಬಲೆ ತಡೆಯುತ್ತದೆ. ಎಷ್ಟೋ ಖರ್ಚು




## ಅಭಿನಂದನೆಗಳು

'ಹೊಸತು' ಸಮಾಲೋಚಕ ಮಂಡಲಿಯ ಸದಸ್ಯರೂ, ಖ್ಯಾತ ಲೇಖಕರೂ ಆದ ನೇಮಿಚಂದ್ರ ಅವರ 'ಯಾದ್ ವಶೇಮ್' ಕೃತಿ ೨೦೦೮ನೇ ಸಾಲಿನ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಗಳಿಸಿದೆ. ನೇಮಿಚಂದ್ರ ಅವರಿಗೆ 'ಹೊಸತು' ಮತ್ತು ನವಕರ್ನಾಟಕ ಪ್ರಕಾಶನದ ಅಭಿನಂದನೆಗಳು ಸಲ್ಲುತ್ತವೆ.



ಮಾಡಿ ಸಿಂಪಡಿಸುವ ರಾಸಾಯನಿಕ ಕ್ರಿಮಿನಾಶಕಗಳಿಗಿಂತ ಪರಿಸರಸ್ನೇಹಿಯಾಗಿ ನೈಸರ್ಗಿಕ ವಿಧಾನದಿಂದ ಬಿಡಿಗಾಸು ಖರ್ಚಿಲ್ಲದೆ ಇದನ್ನು ಬಳಸಬಹುದು.

ಹಿತ್ತಲಿನಲ್ಲಿ ಮುಂಗುಸಿಗಳು ಓಡಾಡುತ್ತಿದ್ದರೆ ಒಳ್ಳೆಯದು ಎಂಬ ನಂಬಿಕೆ ಅನೂಚಾನವಾಗಿ ಬಂದುಬಿಟ್ಟಿದೆ. ವಸ್ತುನಿಷ್ಠವಾಗಿ ಯೋಚಿಸಿದಾಗ, ಮುಂಗುಸಿಗಳಿಗೆ ಹೆದರಿ ಹಾವುಗಳು ಬರುವುದಿಲ್ಲ. ಆ ರೀತಿ ನೋಡಿದರೆ ಹಾವುಗಳು ಮುಂಗುಸಿಗಳಿಗಿಂತಲೂ ಬೆಕ್ಕುಗಳನ್ನು ಕಂಡರೆ ಹೆದರುವುದು ಜಾಸ್ತಿ. ವೈಜ್ಞಾನಿಕವಾಗಿ ನೋಡಿದರೆ ಹಾವುಗಳಿಗೆ ಸ್ವಯಂ ರಕ್ಷಣೆ ಅವುಗಳ ಹಲ್ಲುಗಳು. ಆ ಹಲ್ಲುಗಳಿಂದ ಎದುರಾಳಿಯನ್ನು ಕಚ್ಚುವುದನ್ನು ಬಿಟ್ಟರೆ ಬೇರಾವ ರಕ್ಷಣೆಯೂ ಅವುಗಳಿಗಿಲ್ಲ.

ಬಳ್ಳಾರಿಯಲ್ಲಿ ಸುಮಾರು ಐದು ವರ್ಷಗಳಷ್ಟು ಕಾಲ ವಾಸವಾಗಿದ್ದೆ. ನಾವಿದ್ದ ಬಾಡಿಗೆ ಮನೆಯ ಹಿಂಭಾಗದಲ್ಲಿ ಹಿತ್ತಲಿತ್ತು. ಸುತ್ತಲೂ ಕಾಂಪೌಂಡ್ ಇತ್ತು. ಹಿತ್ತಲಿನಲ್ಲಿ ನುಗ್ಗೆ, ಪಪ್ಪಾಯಿ (ಪರಂಗಿ), ಬಾಳೆ ಹಾಗೂ ಇತರೆ ತರಕಾರಿ ಗಿಡಗಳನ್ನು ಬಹಳ ಜತನದಲ್ಲಿ ಬೆಳೆಸಿದ್ದೆವು. ಜೊತೆಗೆ ಮಲ್ಲಿಗೆ ಬಳ್ಳಿಯೂ ಬೆಳೆದು ಅದಕ್ಕೆ ಚಪ್ಪರ ಹಾಕಿದ್ದೆವು. ಒಮ್ಮೆ ನಾಗರಹಾವೊಂದು ಹೇಗೋ ಏನೋ ಹಿತ್ತಲಿಗೆ ಪ್ರವೇಶಮಾಡಿತ್ತು. ಸರಿಯಾದ ಗಾತ್ರದ ಗೋಧಿ ಬಣ್ಣದ ಹಾವು. ನಾವು ಸಾಕಿದ್ದ ಬೆಕ್ಕಿನಮರಿಯೊಂದು ಹಿತ್ತಲಿನ ಸುತ್ತಲೂ ಆಟವಾಡುತ್ತಿತ್ತು. ಅದಕ್ಕೆ ಕೇವಲ ೫-೬ ತಿಂಗಳ ವಯಸ್ಸು. ಆದರೂ ಆ ದೊಡ್ಡ ನಾಗರಹಾವನ್ನು ಕಂಡ ತಕ್ಷಣ ಮೈ ಕೂದಲನ್ನೆಲ್ಲಾ ನಿಮಿರಿಸಿಕೊಂಡು, ನಾವೆಷ್ಟೇ ತಡೆದರೂ ಆ ಹಾವಿನ ಹತ್ತಿರಕ್ಕೆ ಹೋಗುತ್ತಿತ್ತು. ಪಾಪ, ಏನೂ ತಿಳಿಯದ ಸಣ್ಣ ಬೆಕ್ಕಿನ ಮರಿ ಅನ್ಯಾಯವಾಗಿ ಹಾವಿಗೆ ಬಲಿಯಾಗುತ್ತದೆ ಎಂದು ಕನಿಕರಪಟ್ಟು ಆ ಪುಟ್ಟ ಬೆಕ್ಕು ಮುಂದೆ ಹೋಗದಂತೆ ದೊಡ್ಡದೊಂದು ಬೊಂಬು ಬಳಸಿ ತಡೆಯೊಡ್ಡುತ್ತಿದ್ದರೂ, ಅದನ್ನು ಲೆಕ್ಕಿಸದೆ ಹಾವಿನ ಮೇಲೆ ದಾಳಿಯಿಡಲು ಮುನ್ನುಗ್ಗುತ್ತಿತ್ತು. ಮೊದಮೊದಲಿಗೆ ಬುಸುಗುಡುತ್ತಿದ್ದ ಹಾವು ಈ ಬೆಕ್ಕಿನಮರಿ ತನ್ನತ್ತ ಮುನ್ನುಗ್ಗಿ ಬಹಳ ಹುಷಾರಾಗಿ ಹೆಜ್ಜೆಯಿಡುತ್ತಾ ಬರುತ್ತಿದ್ದರಿಂದ ಹೆದರಿ ಹಿಂದೆ ಸರಿಯುತ್ತಿತ್ತು. ಹೆಡೆಯನ್ನು ಮೇಲಕ್ಕೆತ್ತಿದರೂ, ಹಾವು ಹೆದರಿ ಹಿಂದೆ ಸರಿದು ಬೆಕ್ಕಿನ ದಾಳಿಯನ್ನು ತಪ್ಪಿಸಿಕೊಳ್ಳಲು ಪಕ್ಕದಲ್ಲೇ ಇದ್ದ ಮಲ್ಲಿಗೆ ಬಳ್ಳಿಯ ಬುಡದ ಕಾಂಡಕ್ಕೆ ಅಂಟಿಕೊಂಡಿತ್ತು. ಆಗ ಹಾವಿನ ಬಣ್ಣ ಶರೀರ ಮಲ್ಲಿಗೆ ಬಳ್ಳಿಯ ಬುಡದ ಕಾಂಡಕ್ಕೆ ಹೊಂದಿಕೊಂಡು ಹಾವು ಬೇರೆ, ಕಾಂಡ ಬೇರೆ ಎಂದು ಗುರುತಿಸಲು ಕಷ್ಟವಾಗುವಂತೆ ಆ ಕಾಂಡದ ಸುತ್ತಲೂ ಬಳಸಿ ಎದುರಾಳಿಗೆ ಮರದ ಕಾಂಡದಂತೆಯೇ ಕಾಣಿಸಿಕೊಂಡು ಯಾಮಾರಿಸಿತು. ಆಗ ನಮ್ಮ ಬೆಕ್ಕು ಬೇರೆ ಕಡೆಗೆ ನೋಡಲು ಶುರುಮಾಡಿತು. ಕೊನೆಗೂ ಬೆಕ್ಕಿನ ಗಮನ ಬೇರೆಡೆಗೆ ಹೋದಮೇಲೆ ಹಾವು ತನ್ನ ಮೈಬಣ್ಣದಂತೆಯೇ ಇದ್ದ ಮಲ್ಲಿಗೆ ಕಾಂಡವನ್ನು ಮೆಲ್ಲಗೆ ಬಿಡಿಸಿಕೊಂಡು ಥಂಗನೆ ಕಾಂಪೌಂಡಿನ ಹಿಂದಿನ ಬಾಗಿಲಿನಿಂದ ತಪ್ಪಿಸಿಕೊಂಡು ಓಡಿಹೋಯಿತು. ಎಲ್ಲರೂ ಬೆಕ್ಕಿನ ಮರಿಯ ಧೈರ್ಯವನ್ನು ಮೆಚ್ಚಿಕೊಂಡರೂ ಅಂತಹ ದೊಡ್ಡ ನಾಗರಹಾವು ಈ ಬೆಕ್ಕಿಗೆ ಹೆದರಿ ತನ್ನೆಲ್ಲಾ ಶರೀರವನ್ನು ಮುದುಡಿಕೊಂಡು ಹಿಂದಕ್ಕೆ ಸರಿಯುತ್ತಿದ್ದ ಬಗ್ಗೆ ಆಶ್ಚರ್ಯಪಡುವಂತಾಯಿತು.

ಮುಂಗುಸಿ, ಬೆಕ್ಕು ಇತ್ಯಾದಿಗಳಿಗೆ ಮೈಯೆಲ್ಲಾ ಕೂದಲು. ಹಾವು ಆ ಪ್ರಾಣಿಗಳ ಮೈಮೇಲೆ ಎಲ್ಲಿ ಕಚ್ಚಲು ಪ್ರಯತ್ನ ಪಟ್ಟರೂ ಮೈಮೇಲೆ ದಟ್ಟ ಕೂದಲಿರುವುದರಿಂದ ಅವುಗಳಿಗೆ ಕಚ್ಚಲು ಸಾಧ್ಯವಾಗದು. ಹಾವಿನ ಹಲ್ಲಿಗೆ ಚರ್ಮ ಸಿಗದೆ ಕೂದಲಿನ ಮೇಲೆ ಜಾರಿಕೊಳ್ಳುತ್ತದೆ. ಅದೇ ಕೂದಲು ಇಲ್ಲದ ಅಥವಾ ಕಡಿಮೆಯಿರುವ ಪ್ರಾಣಿಗಳನ್ನು (ಮನುಷ್ಯನೂ ಸೇರಿದಂತೆ) ಕೂದಲಿಂದ ಮುಕ್ತ ಚರ್ಮ ಭಾಗಕ್ಕೆ ಕಚ್ಚಿ ಸಾಯಿಸಬಹುದು. ಜೊತೆಗೆ ಬೆಕ್ಕು, ಮುಂಗುಸಿಗಳ ಕಾಲಿನ ಉಗುರುಗಳು ತೀಕ್ಷ್ಣವಾಗಿದ್ದು, ಮೃದು ಚರ್ಮದ ಹಾವಿನ ಯಾವುದೇ ಭಾಗಕ್ಕೆ ಗೀಚಿದರೂ ರಕ್ತಸ್ರಾವವಾಗಿ ಹಾವು ನಿಧಾನವಾಗಿ ಸಾಯುವುದು ಖಂಡಿತ. ಅದಕ್ಕೇ ಹಾವುಗಳು ಮುಂಗುಸಿಗೆ ಮತ್ತು ಬೆಕ್ಕಿಗೆ ಹೆದರುತ್ತವೆ. ಅದರಲ್ಲೂ ಬೆಕ್ಕಿನ ಉಗುರು ಮುಂಗುಸಿಯ ಉಗುರುಗಳಿಗಿಂತ ಹೆಚ್ಚು ಅಪಾಯಕಾರಿ. 'ಹಾವು ಮುಂಗುಸಿ' ಕಥೆಯನ್ನು ನಾನಾ ರೀತಿಯಲ್ಲಿ ಹೆಣೆದು ಅರ್ಥವಿಲ್ಲದ ನಂಬಿಕೆಗಳನ್ನು ಹುಟ್ಟುಹಾಕಲಾಗಿದೆ. ಈ ಕಾರಣಕ್ಕಾಗಿಯೇ ಹಿತ್ತಲಿನಲ್ಲಿ ಮುಂಗುಸಿ ತಿರುಗಾಡಿದರೆ ಒಳ್ಳೆಯದು ಎಂದು ಕೆಲವು ಕಡೆ ನಂಬಿದರೆ, ಮತ್ತೆ ಕೆಲವು ಕಡೆ ಅದು ಹಿತ್ತಲಿನಲ್ಲಿ ಓಡಾಡಿದರೆ ಎಲ್ಲಿಯೋ ಹಾವಿದೆ ಎಂದು ಮುಂಗುಸಿಯೂ ಓಡಾಡುತ್ತಿದೆ ಎಂದು ಶಪಿಸುತ್ತಾರೆ. ಮಲ್ಲಿಗೆ ಬಳ್ಳಿಯ ಕಾಂಡ ಹಾವಿನಂತೆಯೇ ಇರುವುದರಿಂದ ಮಲ್ಲಿಗೆ ಗಿಡಕ್ಕೆ ಹಾವು ಬರುವುದರಿಂದ, ಅದನ್ನೂ ಬೆಳೆಯಬಾರದು ಎಂಬ ಪ್ರತೀತಿಯಿದೆ. ಹಳೆ ಮೈಸೂರು ಪ್ರದೇಶದಲ್ಲಿ 'ರಾತ್ರಿ ಮಲ್ಲಿಗೆ' (ನೈಟ್ ಕ್ವೀನ್) ಬೆಳೆಸಿದರೆ ಹಾವು ಬರುತ್ತದೆ ಎಂಬ ನಂಬಿಕೆಯಿಂದ ಅದನ್ನು ಬೆಳೆಸಬಾರದು ಎನ್ನುತ್ತಾರೆ.

ಅದೇ ರೀತಿ ಕೇದಿಗೆ ಗಿಡ ಬೆಳೆಸಿದರೆ ಹಾವು ಕೇದಿಗೆ ವಾಸನೆಗೆ ಬಂದು ಸೇರಿಕೊಳ್ಳುತ್ತದೆ, ಅದಕ್ಕಾಗಿ ಬೆಳೆಸಬಾರದೆನ್ನುತ್ತಾರೆ. ನಾಗತುಳಸಿ ಗಿಡ ಬೆಳೆಸಿದರೆ ಕೆಲವರು ಹಾವು ಹಿತ್ತಲಿಗೆ ಬರುವುದಿಲ್ಲವೆಂದು, ಇನ್ನು ಕೆಲವು ಕಡೆ ಅದನ್ನು ಬೆಳೆಸಿದರೆ ಹಾವು ಬಂದುಬಿಡುತ್ತದೆ ಎಂದು ನಂಬುತ್ತಾರೆ.

ಹಿತ್ತಲಿನಲ್ಲಿ ನಿರೀಕ್ಷೆಗಿಂತ ಹೆಚ್ಚಿನ ಬೆಳೆಯಾದರೆ ಮನೆಬಿಡುವ ಸಮಯ ಬಂತು ಎಂದು ನಂಬುವವರಿದ್ದಾರೆ. ಆ ಮನೆಯನ್ನು ಕಾರಣಾಂತರಗಳಿಂದ ಬಿಡುವ ಸೂಚನೆ ಹೆಚ್ಚಿನ ಇಳುವರಿಗೂ ತಳಕುಹಾಕಲಾಗಿದೆ. ಕೆಲವು ಕಡೆ 'ಎರೆಹುಳು'ಗಳನ್ನು ಹಿತ್ತಲಿನಲ್ಲಿ ಸಾಕುವುದು ಅಪಶಕುನ ಎನ್ನುತ್ತಾರೆ. ಬಹುಶಃ ಇದಕ್ಕೆ ಅವುಗಳ ತೊಟ್ಟಿಗೆ ಕಟ್ಟಿರುವೆ, ಇಲಿ, ಹೆಗ್ಗಣಗಳು ದಾಳಿಯಿಡುತ್ತವೆ ಎಂಬ ಕಾರಣವಿರಬೇಕು.

ಒಟ್ಟಿನಲ್ಲಿ ಅಂಧಶ್ರದ್ಧೆ, ಅವಾಸ್ತವ ನಂಬಿಕೆಗಳು ಹಿತ್ತಲು ಕ್ಷೇತ್ರವನ್ನೂ ಆವರಿಸಿಕೊಂಡು ಆ ಮೂಲಕ ಮೂಢನಂಬಿಕೆ, ಮೌಢ್ಯಗಳನ್ನು ಬೆಳೆಸಲಾಗಿದೆ. ಇದು ನಂಬಿಕೆಯೆಂಬ ಬೆಳೆಯ ಮಧ್ಯೆ ಮೂಢನಂಬಿಕೆ ಎಂಬ ಕಳೆ ಹುಟ್ಟಿಕೊಂಡಂತೆ. ಆ ಕಳೆಯನ್ನು ಕೀಳುವುದಷ್ಟೆ ವಿಚಾರವಾದಿಗಳ, ವೈಜ್ಞಾನಿಕ ಮನೋಭಾವ ಉಳ್ಳವರ ಸಾಮಾಜಿಕ ಜವಾಬ್ದಾರಿ. ಅಂತೆಯೇ ಇದು ಸಂವಿಧಾನಬದ್ಧ [ಅನುಚ್ಛೇದ ೫೧ - ಎ (ಎಚ್)] ವಾದ ಪ್ರತಿಯೊಬ್ಬ ಪ್ರಜೆಯ ಕರ್ತವ್ಯವೂ ಹೌದು.


**ಡಾ॥ ವೆಂಕಟಯ್ಯ ಅಪ್ಪಗೆರೆ**
ಎ-೭ ನಿವಾಸ, ಜೆಎಂಐಟಿ ಲೇ ಔಟ್ (ಬಸವೇಶ್ವರ ಮೆಡಿಕಲ್ ಕಾಲೇಜು ಎದುರು)
ರಾಷ್ಟ್ರೀಯ ಹೆದ್ದಾರಿ - ೪ ರಸ್ತೆ ಹತ್ತಿರ
ಚಿತ್ರದುರ್ಗ - ೫೭೭ ೫೦೧





ನಮ್ಮನ್ನು
ನೀವು ಕಂಡುಹಿಡಿದಿದ್ದರಲ್ಲಿ
ಹೆಚ್ಚುಗಾರಿಕೆ ಏನು ?
ನಾವಿಲ್ಲಿದ್ದೇವೆ
ಹದಿನೈದು ಸಾವಿರ ವರುಷಗಳಿಂದ,
ಈ ನೆಲವೇ ನಾವಾಗಿದ್ದೇವೆ.

ಹೇಳಿ
ಹೆಚ್ಚುಗಾರಿಕೆ ಏನು ?
ನೀವೀಗ ತೋರುವಿರಿ
ನಿಮ್ಮ ಮೋರೆಯನು

— ಬಿಳಿಯ ನೆಲಸುಗಾರನಿಗೆ,
ಇಂಡಿಯನ್ ಒಬ್ಬನ ಆಕ್ಷೇಪಣೆ

ಕನ್ನಡಕ್ಕೆ - ಕೆ.ಎಸ್. ರವಿಕುಮಾರ್
[illegible]

# ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮತೀಯ ಆತಂಕಗಳು

ಡಾ|| ಸಾವಿತ್ರಿ ಕೆ.

**ದೇವರು ಮತ್ತು ಧರ್ಮದ ಹೆಸರಿನಲ್ಲಿ ಮತಾಂಧರು ನಡೆಸುವ ದಾಂಧಲೆಗಳಲ್ಲಿ ಬಲಿಯಾಗುತ್ತಿರುವುದು ಎಲ್ಲಾ ಕೋಮಿನ ಬಡವರು. ಯಾಕೆ ಬೆಂಗಳೂರಿನ ಬ್ರಿಗೇಡ್ ರೋಡಿನಲ್ಲಿ, ಮುಂಬೈಯ ಮಲಬಾರ್ ಹಿಲ್‌ನಲ್ಲಿ ಮತೀಯ ಗಲಭೆಗಳು ಹರಡುತ್ತಿಲ್ಲ? ತಾಜ್ ಒಬೆರಾಯ್ ಘಟನೆಯೊಂದನ್ನು ಹೊರತುಪಡಿಸಿದರೆ, ಹೆಚ್ಚಿನ ಕಡೆಯಲ್ಲಿ ಮತೀಯ ದಾಂಧಲೆಗೆ ಬಲಿಯಾಗುವವರು ಗುಡಿಸಲುಗಳಲ್ಲಿ ವಾಸಿಸುವ ಬಡವರು. ನೀರು ಮತ್ತು ಶೌಚಾಲಯದ ವ್ಯವಸ್ಥೆಗಳು ನಗಣ್ಯ ಪ್ರಮಾಣದಲ್ಲಿರುವ ಇಂತಹ ಕೊಳೆಗೇರಿಗಳಲ್ಲೇ ಯಾಕೆ ಮತೀಯ ಗಲಭೆಗಳು ನಡೆಯುತ್ತವೆ? ನಾವೆಲ್ಲಾ ಇದನ್ನು ಮಂಡಿಯೂರಿ ಆಲೋಚಿಸಿ, ಕನಿಷ್ಠಪಕ್ಷ ನಮ್ಮ ಶತ್ರುಗಳು ಯಾರು ಎಂಬ ವಿಚಾರದ ಬಗ್ಗೆ ಆಲೋಚಿಸಬೇಕಾಗಿದೆ.**

ಮತಿಹೀನರ ಮತಿಭ್ರಮಣೆಯ ಫಲಿತಗಳೇ ಆತಂಕವಾದ. ಅದರ ಒಂದು ವಿನ್ಯಾಸ- ಕೋಮುವಾದ. ಈ ಆತಂಕಗಳು ಸಾಮಾಜಿಕ, ರಾಜಕೀಯ, ಮತೀಯ ಯಾವ ಸ್ವರೂಪದಲ್ಲಾದರೂ ಇರಬಹುದು. ಆತಂಕವಾದಗಳ ಸ್ವರೂಪ ದೇಶೀಯ, ಅಂತರ್ ದೇಶೀಯವಾದರೂ ಅದರ ಹಿಂದಿರುವ ತಾತ್ವಿಕತೆ, ಮತಿಹೀನತೆ ಮತ್ತು ಮತಿಭ್ರಮಣೆ ಗಳನ್ನು ದಮನಿಸುವ ಅಗತ್ಯವಿದೆ. ಮಾನವೀಯತೆಯನ್ನು ಮರೆತ ಮತಿಭ್ರಷ್ಟರಿಂದ ಯಾವುದೇ ಪುರೋಗಾಮಿ ಚಳುವಳಿ ಈವರೆಗೂ ನಡೆದಿಲ್ಲ, ಮುಂದೆಂದೂ ನಡೆಯಲಾರದು. ಮತಿಭ್ರಷ್ಟರು ಗುಂಪು, ದೇವರು ಮತ್ತು ಮತಧರ್ಮಗಳ ಹೆಸರಿನಲ್ಲಿ ಭ್ರಮೆಗಳನ್ನು ಬಿತ್ತುತ್ತಾ ಸಮಾಜದ ಶಾಂತಿ, ನೆಮ್ಮದಿ ಮತ್ತು ಪ್ರಗತಿಗೆ ಮಾರಕವಾಗುತ್ತಾರೆ. ಅಮೂಲ್ಯವಾದ ಮಾನವ ಸಂಪತ್ತು ಇವರಿಗೆ ನಗಣ್ಯ. ಇವರ ಅನುಯಾಯಿಗಳಾದರೋ ನಾಯಕನ ಆಣತಿಗೆ ಕತ್ತು ನೀಡಿ ಹುತಾತ್ಮರಾಗುವುದೇ ಪರಮ ಆದರ್ಶ ಎಂದು ಎಣಿಸುತ್ತಾರೆ. ಅಫ್ಘಾನಿಸ್ತಾನದಿಂದ ಕಾಬೂಲಿಗೆ ಮುಖ ಮಾಡಿದ ತಾಲಿಬಾನ್, ಭಾರತದಲ್ಲಿ ಅಯೋಧ್ಯೆಯ ಮೂಲಕ ದೆಹಲಿಗೆ ಮುಖ ಮಾಡಿದ ಶ್ರೀರಾಮಸೇನೆ, ಶ್ರೀಲಂಕಾದಲ್ಲಿ ಕೊಲಂಬೋಗೆ ಮುಖ ಮಾಡಿದ ಎಲ್.ಟಿ.ಟಿ.ಇ. ಹೀಗೆ ಒಂದೇ ಎರಡೇ, ಸಾಕಷ್ಟು ಆತಂಕವಾದದ ಉದಾಹರಣೆಗಳು ನಮ್ಮ ಮುಂದಿವೆ. ಹೆಚ್ಚಿನ ಸಂದರ್ಭಗಳಲ್ಲಿ ಅಮಾಯಕರಲ್ಲಿ ದೇವರು ಧರ್ಮಗಳ ಬಗ್ಗೆ ಭ್ರಮೆ ಬೆಳೆದು ನಿಂತು ವೈಷಮ್ಯದ ರಾಜಕೀಯ ಮತಿಭ್ರಷ್ಟರಲ್ಲಿ ಹುಟ್ಟಿಕೊಳ್ಳುತ್ತದೆ. ಆನಂತರ ಅನುಯಾಯಿಗಳ ಮುಖೇನ ಸಾಂಕ್ರಾಮಿಕ ಜಾಡ್ಯವಾಗಿ ಹರಡುತ್ತದೆ. ಹಿಂದೊಮ್ಮೆ ಯೂರೋಪಿನಲ್ಲಿ ಹುಟ್ಟಿಕೊಂಡ ಸಾಮ್ರಾಜ್ಯಶಾಹಿ ದಾಹ ಅಮೆರಿಕಾದ ರೆಡ್ ಇಂಡಿಯನ್ನರ ಸಂಸ್ಕೃತಿಯನ್ನು, ಜನಪದವನ್ನು ನಾಶ ಮಾಡಿಲ್ಲವೇ? ಏಸು, ಸಾಕ್ರೆಟಿಸ್, ಗಾಂಧಿ ಮೊದಲಾದವರ ಬಲಿದಾನ ಮತಿಭ್ರಷ್ಟ ಆತಂಕವಾದಿಗಳ ಶಿಖರ ವಿನ್ಯಾಸವಲ್ಲವೇ? ಇಂತಹ ಆತಂಕವಾದಿಗಳ ಪರಿಭಾಷೆಯ ಮತಧರ್ಮವೇ ಬೇರೆ, ನಿಜವಾದ ಮಾನವಧರ್ಮವೇ ಬೇರೆ. ಬುದ್ಧನಿಂದ ಬಸವನವರೆಗೆ ಬಂದ ಮತಧರ್ಮಗಳು ಮೂಲದಲ್ಲಿ ಪ್ರತಿಪಾದಿಸಿದ್ದು ಮಾನವಧರ್ಮವನ್ನು, ಮಾನವ ಬಂಧುತ್ವವನ್ನು ಆದರೆ ಇಂದು ಆತಂಕವಾದದ ಗುತ್ತಿಗೆ ಹೊತ್ತ ಕೋಮುವಾದಿಗಳು ಪ್ರತಿಪಾದಿಸುತ್ತಿರುವುದು ಮತಾಂಧತೆಯನ್ನು. ಅನ್ಯಧರ್ಮ ಸಹಿಷ್ಣುತೆ, ಮತೀಯ ಸದ್ಭಾವನೆಗಳು ಇವರ ಶಬ್ದಕೋಶದಲ್ಲೇ ಇಲ್ಲ. ಕೋಮುವಾದಿಗಳು, ಆತಂಕವಾದಿಗಳು ಮತ್ತು ಭಯೋತ್ಪಾದಕರಿಂದಾಗಿ ಅರ್ಬುದ ರೋಗದಂತೆ ಹರಡುತ್ತಿರುವ ಮತೀಯ ಆತಂಕಗಳಿಗೆ ಸುದೀರ್ಘ ಇತಿಹಾಸವಿದೆ. ಇದಕ್ಕೆ ಪ್ರತಿರೋಧವಾಗಿ ಬಂದ ಈ ನೆಲದ ಮಣ್ಣಿನ ಮಕ್ಕಳ ಇತಿಹಾಸವೂ ಇದೆ. ಅವೆಲ್ಲವುಗಳ ವಿಶ್ಲೇಷಣೆ ಇಲ್ಲಿ ಪುಟಗಳ ಮಿತಿಯಲ್ಲಿ ಅಸಾಧ್ಯವಾದುದರಿಂದ ೧೮೮೫ರಿಂದ ೧೯೪೭ರ ವರೆಗೆ ಸ್ಥೂಲವಾಗಿ ನೋಡಿ, ಮುಂದೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಆತಂಕವಾದದ ಇರುವಿಕೆಯ ವಿವೇಚನೆ ನಡೆಸುವೆ. ಅಂದಿನ ದಿನಗಳಲ್ಲಿ ಈ ನಾಡಿನ ಆದಿವಾಸಿಗಳ ಬಂಡಾಯವನ್ನು ಮತ್ತು ಅವರ ಒಗ್ಗಟ್ಟನ್ನು ಕೇವಲ ಮತಾಂತರದಿಂದ ಮುರಿಯುವುದು ಅಸಾಧ್ಯವೆಂದು ಕಂಡುಕೊಂಡ ಬ್ರಿಟಿಷರು ನಂತರ ರೂಪಿಸಿದ ರಾಜಕೀಯ ತಂತ್ರಕ್ಕೆ ಪ್ರಕ್ರಿಯೆಯಾಗಿ ೧೮೮೫ರಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಉದಯವಾಗುತ್ತದೆ. ಇದು ತನ್ನ ಒಡಲಾಳದ ಸಾಮ್ರಾಜ್ಯಶಾಹಿ ನೀತಿಗೆ ಅನುಸಾರವಾಗಿ ಸ್ವದೇಶೀಯರಿಗೆ ರಾಜಕೀಯ ಹಕ್ಕು, ಆಧುನಿಕ ಶಿಕ್ಷಣದ ಸೌಲಭ್ಯ, ಬದುಕನ್ನು ಆಧುನೀಕರಣಗೊಳಿಸುವ ಸವಲತ್ತುಗಳನ್ನು ನೀಡುವ ಉದ್ದೇಶವನ್ನು ಹೊಂದಿತ್ತು. ಆಗ ಕಾಂಗ್ರೆಸ್ಸಿನತ್ತ ಬಂದವರು ಈವರೆಗೆ ಆದಿವಾಸಿಗಳ ಶೋಷಕರೇ ಆಗಿದ್ದ ರಾಜಮಹಾರಾಜರು, ಪಾಳೆಯಗಾರರು, ಜಮೀನುದಾರರು, ಧರಮಿನ ಕುಲದ ಪ್ರತಿಷ್ಠಿತರೇ ಮೊದಲಾದ ಶ್ರೀಮಂತ ಗುಂಪುಗಳೂ ಆಗಿದ್ದರು. ಅದರಲ್ಲೂ ಮದ್ರಾಸ್, ಮುಂಬೈ, ಕಲ್ಕತ್ತಾ, ಅಲಹಾಬಾದ್ ನಗರಗಳ ವಿಶ್ವವಿದ್ಯಾನಿಲಯಗಳಿಂದ ಹೊರಬಂದ ವಕೀಲರು, ವೈದ್ಯರು ಮತ್ತು ಲೇವಾದೇವಿನಿರತ ಮಾರ್ವಾಡಿ ದಲ್ಲಾಳಿಗಳದ್ದೇ ಇದರಲ್ಲಿ ಸಿಂಹಪಾಲು. ಈ ಮೇಲ್ವರ್ಗದ ಮಂದಿಯ ನಡುವೆ ನಡೆದ ಪೈಪೋಟಿಯ ಒಡಲಲ್ಲೇ ಹಿಂದೂ ಮುಸ್ಲಿಂ ಮತೀಯ ಅತಿರೇಕ ಮತ್ತು ಆತಂಕದ ಬೀಜಗಳಿವೆ. ಈ ಮತೀಯ ಆತಂಕಕ್ಕೆ ಪಾಶ್ಚಾತ್ಯರ ಕ್ರಿಶ್ಚಿಯನ್ ಮತಾಂಧತೆ ಇಬ್ಬದಿಯಲ್ಲೂ ಹೊಕ್ಕಾಡಿದ್ದು ಮನುಕುಲದ ಒಂದು ದುರಂತ. ಬುದ್ಧನ ಮಾನವೀಯ ಅನುಕಂಪ, ಏಸುವಿನ ಮಾನವಪ್ರೇಮ, ಪೈಗಂಬರನ ಸಮತಾವಾದ, ಮಹಾವೀರನ ಅಹಿಂಸೆ ಎಲ್ಲವೂ ಮಣ್ಣುಮುಕ್ಕಿದ್ದು ಇದೇ ಕಾಲದಲ್ಲಿ. ಈ ಸಂದಿಗ್ಧ ಜನವಿರೋಧಿ ಚರಿತ್ರೆಯು ಎರಡು ರೀತಿಗಳಲ್ಲಿದೆ: ಮೇಲ್ವರ್ಗದಲ್ಲಿನ ಸಂಪ್ರದಾಯಪ್ರಿಯತೆ, ಅಧಿಕಾರದಾಹ ಒಂದೆಡೆ, ಇನ್ನೊಂದೆಡೆ 'ಹಿಂದೂ ರಾಷ್ಟ್ರ' 'ಮುಸ್ಲಿಂ ರಾಷ್ಟ್ರದ' ಕಲ್ಪನೆಗೆ ನೀರೆರೆಯಿತು. ಈ ಲೋಕಶಾಹೀ ವಿರೋಧಿ ಚಿಂತನೆಯ ಶಿಶುಗಳಾಗಿ ರಾಷ್ಟ್ರೀಯ ಸ್ವಯಂ ಸೇವಕ ಸಂಘ ಹಾಗೂ ಮುಸ್ಲಿಂ ಲೀಗ್‌ಗಳ ಉದಯವಾಯಿತು. ಕಟ್ಟರ್ ಮತಧರ್ಮವಾದಿಗಳು ಅಂತರಂಗದಲ್ಲಿ ಯಾವತ್ತೂ ಮಾನವ ಸ್ವಾತಂತ್ರ್ಯವನ್ನು ಒಪ್ಪದ ಆತಂಕವಾದಿಗಳೇ ಆಗಿರುತ್ತಾರೆ. ಇದರ ಪರಿಣಾಮ ಒಂದೆಡೆ ಪಾಕಿಸ್ತಾನದ ಉದಯ, ಇನ್ನೊಂದೆಡೆ ದೆಹಲಿ, ಉತ್ತರ ಪ್ರದೇಶ, ಪಶ್ಚಿಮ ಬಂಗಾಳ ಮೊದಲಾದ ಕಡೆಗಳಲ್ಲಿ ಹಿಂದೂ-ಮುಸ್ಲಿಂ ಘರ್ಷಣೆಯಿಂದ ಹರಿದ 'ನೆತ್ತರ ಗಾನ' ಇಂದೂ ಮುಂದುವರೆದಿದೆ. ಬಾಲಕೃಷ್ಣನ ಶ್ರದ್ಧಾಕೇಂದ್ರವಾಗಿರುವ ಉಡುಪಿ - ಮಂಗಳೂರಿನ ಕರಾವಳಿಯಲ್ಲೇ ಬಾಲ ಯೇಸುವಿನ ಪ್ರತಿಮೆ ಇತ್ತೀಚೆಗೆ ಧ್ವಂಸಗೊಂಡು ವಿಶ್ವಭ್ರಾತೃತ್ವ

ಮತ್ತು ವಿಶ್ವವಾತ್ಸಲ್ಯದ ಮೌಲ್ಯಗಳನ್ನೇ ತಿಪ್ಪೆಗೆಸೆಯಲಾಗಿದೆ. ಧರ್ಮದ ಹೆಸರಿನಲ್ಲಿ ನಮ್ಮ ಕಣ್ಣ ಮುಂದೆ ವಿಘಟನೆಗೊಂಡ ಪಾಕಿಸ್ತಾನ, ಅಮೆರಿಕಾದ ಕೈಗೊಂಬೆಯಾಗಿ ಪ್ರವಾದಿ ಮಹಮ್ಮದನ ಆದರ್ಶಕ್ಕೆ ಮಸಿ ಬಳಿದಿದೆ. ಅಲ್ಲಿನ ಸೈನಿಕ ಶಾಸನದಲ್ಲಿ ಪ್ರಜಾಪ್ರಭುತ್ವದ ಉಸಿರುಕಟ್ಟುತ್ತಲೇ ಇದೆ. ಮತಧರ್ಮದ ಹೆಸರಿನಲ್ಲಿ ಮಾನವ ಬದುಕಿನ ಘನತೆಯನ್ನು ಹೆಚ್ಚಿಸಿದ ಒಂದೇ ಒಂದು ರಾಷ್ಟ್ರೀಯ ಉದಾಹರಣೆ ನಮ್ಮ ಮುಂದಿಲ್ಲ. ಹಿಂದೊಮ್ಮೆ ನಮ್ಮದೇ ಭಾಗವಾಗಿದ್ದ ನೇಪಾಳ, ಆಫ್ಘಾನಿಸ್ತಾನಗಳಲ್ಲಿ ಮತಧರ್ಮದ ಹೆಸರಿನಲ್ಲಿ ಏನು ನಡೆಯಿತು ? ಆ ದೇಶಗಳ ಬಡವರ ಬದುಕೇ ಸಾಕ್ಷಿಯಾಗಿ ಇದಕ್ಕೆ ನಿಂತಿದೆ. ಭಾರತವನ್ನು ಆ ದಾರಿಯಲ್ಲಿ ಒಯ್ಯುವ ಕನಸು ಕಾಣುತ್ತಿದ್ದಾರೆ ಇಲ್ಲಿಯ ಕೋಮುವಾದಿಗಳು. ಹೀಗಾಗದಂತೆ ಎಚ್ಚರ ವಹಿಸುವುದು ಪ್ರಜಾಪ್ರಭುತ್ವದ ಉಸಿರಾಗಿರುವ ಇಲ್ಲಿಯ ಜನಪದದ ಹಕ್ಕೂ ಹೌದು. ಕರ್ತವ್ಯವೂ ಹೌದು.

ಮತಭ್ರಾಂತಿಯ ಆತಂಕದ ಇತಿಹಾಸ ೧೯೨೪ರಿಂದ ೧೯೪೭ರ ವರೆಗೆ ಯಾಕೆ ಬಾಲ ಮಡಚಿಕೊಂಡಿತ್ತು ? ಗಾಂಧೀಜಿ ಸ್ವಾತಂತ್ರ್ಯ ಸಂಗ್ರಾಮದ ಮುಂಚೂಣಿಯ ನಾಯಕರಾದಾಗ ಮತಭ್ರಾಂತರು ಸ್ವಾತಂತ್ರ್ಯ ಚಳುವಳಿಯಿಂದ ಯಾಕೆ ದೂರ ಸರಿದರು ? ಮತಾಂಧರ ಈ ಉಪೇಕ್ಷೆಗೆ ಕಾರಣವೇನು ? ಇದರ ಹಿನ್ನೆಲೆ ರಾಷ್ಟ್ರೀಯ ತತ್ವದಲ್ಲಿದೆ. ಗಾಂಧೀಜಿಯ ತತ್ವಚಿಂತನೆಯಲ್ಲಿ ರಾಷ್ಟ್ರವೆಂದರೆ ಯಾವತ್ತೂ ಬಹುಧರ್ಮೀಯರ ನಾಡು. ಅದು ಪ್ರಜಾಪ್ರಭುತ್ವದ ಸಮತೆಯ ಆದರ್ಶದ ಮೇಲೆ ನಿಲ್ಲಬೇಕು. ಗಾಂಧೀಜಿಯ ಶಾಂತಿಮಂತ್ರದಲ್ಲಿ ಸರ್ವಧರ್ಮ ಸಮಭಾವ, ಧರ್ಮ ನಿರಪೇಕ್ಷತೆ, ಜಾತ್ಯತೀತತೆಗಳು ತುಂಬಿದ್ದನ್ನು ಕಂಡು ಮತಭ್ರಾಂತರು ದಿಗ್ಭ್ರಾಂತರಾದರು. ಅವರೆಗೆ ತಮಗೆ ಸ್ವಾತಂತ್ರ್ಯ ಬೇಕು, ಅವಕಾಶಬೇಕು, ಘನತೆಯ ಹಕ್ಕುಬೇಕು, ಎನ್ನುತ್ತಿದ್ದವರೆಲ್ಲರಿಗೂ ಗಾಂಧೀಜಿಯ



# ಒಂದಾನೊಂದು ಕಾಲದಲ್ಲಿ

ಕಂದ, ಹಿಂದೆ
ಒ ಕಾಲದಲ್ಲಿ, ಜನ,
ಮನತುಂಬಿ ನಗುತ್ತಿದ್ದರು.
ಕಣ್ಣಂಚಿನಲ್ಲಿ ನಗೆ ಹೊಮ್ಮುತ್ತಿತ್ತು.
ಈಗಲೊ ಹಲ್ಕಿರಿಯುವರು,
ಸ್ವಲ್ಪ ಕಣ್ಣುಗಳು ಬೆನ್ನಹಿಂದೆ ಅಮೂಲ್ಯವಾದವನ್ನು ತಡಕುವಂತೆ.

ಇತ್ತು, ಆ ಒಂದು ದಿನ,
ಅವರು ಹೃದಯತುಂಬಿ ಬಂದು ಕೈ ಕುಲುಕುತ್ತಿದ್ದರು
ಈಗ, ಅದು ಇಲ್ಲವ್ರೋ ಕಂದ.
ಈಗಲೂ ಕೈ ಕುಲುಕುವರು, ಹೃದಯವಿಲ್ಲದಂತೆ,
ಕೈಗಳು ಬರಿಯ ಜೇಬನ್ನು ತಡಕುವಂತೆ
ಮತ್ತೊಮ್ಮೆ ಬನ್ನಿ, ನಿಮ್ಮ ಮನೆಯಲ್ಲವೇ ಇದು
ಎಂಬಾ ಹುಸಿ ನುಡಿಗಳಿಗೆ ಸೋತು
ಮತ್ತೆ ಬಂದನೆಂದರೆ,
ಮೂರಕ್ಕೆ ಮುಕ್ತಾಯ - ಆ ನನ್ನ ಸಂಭ್ರಮ
ಮುಚ್ಚಿದ್ದ ಬಾಗಿಲ ಸ್ವಾಗತದಿಂದಾಗಿ.

ಹೌದು ಕಂದ, ಎಷ್ಟೋ ಕಲಿತಿರುವೆ,
ಉಟ್ಟು ಬಿಚ್ಚಿಸೆಯುವ ಬಟ್ಟೆಯಂತೆ
ಹೊಸಮುಖಿಯಾಗಲು ಕಲಿತಿರುವೆ: ಮನೆಗೊಂದು, ಕಛೇರಿಗೊಂದು,
ಬೀದಿಗೊಂದು, ಅತಿಥಿ-ಅಭ್ಯಾಗತರಿಬ್ಬರಿಗೂ ಬೇರೊಂದು,
ಒಪ್ಪುವ ನಗೆಗಳೊಂದಿಗೆ - ಮೆತ್ತಿದ ಚಿತ್ರದಂತೆ,
ನಾನೂ ಕಲಿತಿರುವೆ
ಹಲ್ಕಿರಿಯಲು, ಕೈ ಆಡಿಸಲು,
ಆಷ್ಟೇ ಅಲ್ಲವೋ ಮಗು,
ಗುಡ್ ಬೈ ಎನ್ನುತ್ತ ತೊಲಗಿತು ಪೀಡೆ ಎನ್ನಲು,
ಸಂತಸವಿಲ್ಲದೆ ಸಂತೋಷವಾಯ್ತು ಎನ್ನಲು,
ಬೇಸತ್ತಿದ್ದರೂ ಸಿಕ್ಕಿದ್ದು ಚೆನ್ನಾಗಿತ್ತು ಎನ್ನಲು.

ಆದರೂ ನನ್ನ ಮನದಾಳವನ್ನು ನಂಬು ಕಂದ,
ಇಂದು ನೀನಿರುವಂತೆ,
ಅಂದು ನಾನಿದ್ದಂತೆ,
ಇಂದು ನಾನಿರಬೇಕೆಂದು ಬಯಕೆ,
ಕಣ್ಕಟ್ಟುವ ಕ್ರಿಯೆಗಳನ್ನು ಮರೆಯಬೇಕೆಂಬಾಸೆ.
ಆ ನಗುವನ್ನು ಮತ್ತೆ ಕಲಿಯಬೇಕೆಂಬಾಸೆ
ನಗಲೆಣಿಸಿದರೆ, ವಿಷಸರ್ಪದ ನಾಲಿಗೆಯಂತೆ, ಈ ನನ್ನ ನಗುವು
ಕನ್ನಡಿಯಲ್ಲಿ ಗೋಚರಿಸುವುದು.
ದಾರಿತೋರಿಸೋ ನನ್ನ ಮುದ್ದು ಮಗುವೇ,
ಹೇಗೆ ನಗಬೇಕೆಂದು ?
ಆ ನಗು,
ಆ ಮಂದಹಾಸ,
ಅಂದು ನಾ ನಕ್ಕಂತೆ, ಇಂದು ನೀನಿರುವಂತೆ.

ಮೂಲ ಇಂಗ್ಲಿಷ್ : **ಗಾಬ್ರಿಯಲ್ ಒಕರ**
ಕನ್ನಡ ಅನುವಾದ : **ನಾಗಿ**

**ಡಾ|| ಎನ್. ಗಿರೀಶ್**
೮೭೦, ೧೮ನೇ ಮೈನ್, ೫ನೇ ಬ್ಲಾಕ್, ರಾಜಾಜಿನಗರ
ಬೆಂಗಳೂರು - ೫೬೦೦೧೦

ಚಂಪಾರಣ್ಯದ ಕಾರ್ಮಿಕ ನೀತಿ, ದಾಂಡಿಯ ಉಪ್ಪಿನ ಸತ್ಯಾಗ್ರಹಗಳು ಕಂಪನವನ್ನುಂಟು ಮಾಡಿದುವು. ಮತಾಂಧರು ಯಾವತ್ತೂ ಅನ್ಯರ ಸ್ವಾತಂತ್ರ್ಯವನ್ನು ಸಹಿಸಲಾರರು. ಜನಪದ ಗುಲಾಮೀಕರಣವೇ ಮತಾಂಧತೆಯ ಆದಿಮ ಮಂತ್ರ. ಅದಕ್ಕೆ, ಪಾಶ್ಚಾತ್ಯ, ಪೌರಾತ್ಯ ವೆನ್ನುವ – ಪ್ರಾಚೀನತೆ, ಆಧುನಿಕತೆಯೆನ್ನುವ ಪರಿಭೇದಗಳೇ ಇಲ್ಲ. ಆದುದರಿಂದಲೇ ಇವರಿಗೆ ರಾಷ್ಟ್ರೀಯ ಕಾಂಗ್ರೆಸ್ಸಿನ ಅಂದಿನ ಚರಕದ ತ್ರಿವರ್ಣಧ್ವಜಕ್ಕಿಂತ ತಮ್ಮ ಕೇಸರಿ ಮತ್ತು ಹಸಿರು ಮತೀಯ ಧ್ವಜಗಳೇ ಮುಖ್ಯವಾದುವು. ಹಿಂದೂಗಳು ರಾಮಜನ್ಮಭೂಮಿಗೆ ಕಾವು ನೀಡಿದ್ದು, ಮುಸ್ಲಿಮರು ಉರ್ದುವಿಗೆ ಒತ್ತಾಸೆ ನೀಡಿದ್ದು ಇದೇ ಕಾಲದಲ್ಲಿ. ಹೀಗಾಗಿಯೇ ೧೯೪೭ರ ಸ್ವಾತಂತ್ರ್ಯ ಮತ್ತು ಸ್ವತಂತ್ರ ಭಾರತ 'ಸ್ವಾತಂತ್ರ್ಯ, ಸಾರ್ವಭೌಮ, ಪ್ರಜಾಸತ್ತಾತ್ಮಕ ಗಣರಾಜ್ಯ'ವೆಂಬ ಒಕ್ಕೂಟ ರಾಷ್ಟ್ರದ ಉದಯದ ಕಲ್ಪನೆ ಅಂಬೇಡ್ಕರ್ ನೇತೃತ್ವದ ಘನಸಮಿತಿಯ ರಚನೆಗೆ ಗಾಂಧೀಜಿಯ ಸಮ್ಮತಿ ಮತಭ್ರಾಂತರನ್ನು ಕಂಗೆಡಿಸಿತು. ದೇಶದ ಪ್ರಥಮ ಸ್ವಾತಂತ್ರ್ಯ ದಿನಾಚರಣೆಯಂದು ನೌಕಾಲಿಯಲ್ಲಿದ್ದೇ, ಕೋಮುದ್ವೇಷ ಶಮನಕ್ಕೆ ಅಹರ್ನಿಶಿ ಶ್ರಮಿಸುತ್ತಿದ್ದ ಗಾಂಧಿ ಕೋಮುವಾದಿಗಳ ಕಣ್ಣಿನಲ್ಲಿ ಧರ್ಮದ್ರೋಹಿಯಾದರು. ಗಾಂಧಿಯಂತಹ ಅಹಿಂಸೆಯ ಪ್ರವಾದಿಗೆ ಈ ನೆಲದ ಕೋಮುವಾದಿಗಳು ಹಿಂಸೆಯಿಂದಲೇ ಗುಂಡಿನ ವಿದಾಯ ಹೇಳಿದರು. ಹಾಗಿದ್ದು, ಪ್ರಜಾಪ್ರಭುತ್ವವು ಒಂದೆಡೆ ಕಾರ್ಮಿಕ ಜಾಗೃತಿಯಿಂದ, ಇನ್ನೊಂದೆಡೆ ದಮನಿತರ ಜಾಗೃತಿಯಿಂದ ಕೋಮುವಾದದ ರೆಕ್ಕೆ ಕತ್ತರಿಸಿತು. ಸ್ವಾತಂತ್ರ್ಯ ಸಂಗ್ರಾಮದ ಸೇನಾನಿಗಳಲ್ಲಿ ಕೆಲವರಾದರೂ ಮತಧರ್ಮವನ್ನು ಮೀರಿ ಪ್ರಜಾಪ್ರಭುತ್ವವಾದಿಗಳಾಗಿದ್ದರು. ಇವರ ಮುಂದೆ ಕೋಮುವಾದಿಗಳ ಆಟ ಸಾಗದಾಗ ಕೋಮುವಾದಿಗಳೂ, ಬಂಡವಾಳಶಾಹಿಗಳೂ ಕೈ ಜೋಡಿಸಿದರು, ಒಂದೆಡೆ ಕೋಮುವಾದಿಗಳಿಂದ ಜನಸಂಘ ಮತ್ತು ಜಮಾತ್-ಎ-ಇಸ್ಲಾಮಿ ಉದಯಕ್ಕೆ ಬಂದರೆ, ಇನ್ನೊಂದೆಡೆ ಬಂಡವಾಳಶಾಹಿಗಳಿಂದ 'ಸ್ವತಂತ್ರ ಪಕ್ಷ' ಎಂಬ ರಾಜಕೀಯ ಪಕ್ಷ ಉದಯವಾಯಿತು. ಇದು ಕೋಮುವಾದಿಗಳು ರಾಜಕೀಯ ಪ್ರವೇಶಿಸಲು ನಡೆಸಿದ ಇನ್ನೊಂದು ತಂತ್ರಗಾರಿಕೆ. ಆದರೆ ನೆಹರೂ ಯುಗದ ಕೊನೆಯ ಘಟ್ಟದವರೆಗೆ ಕೋಮುವಾದ ಈ ದೇಶದಲ್ಲಿ ಬಲಗೊಳ್ಳಲಿಲ್ಲ. ಆದರೆ ೧೯೬೦ರ ನಂತರ ನೆಹರೂ ಅವರ ವೈಫಲ್ಯಗಳು ಚೀನಾ ಯುದ್ಧದಲ್ಲಿ ನಾವು ಅನುಭವಿಸಿದ ಪರಾಭವವು ಕೋಮುವಾದ ರಾಷ್ಟ್ರೀಯವಾದದ ವೇಷ ಧರಿಸಲು ನೆರವಾಯಿತು. ೧೯೬೧ರಲ್ಲಿ ಜಬಲ್‌ಪುರದಲ್ಲಿ ಭುಗಿಲೆದ್ದ ಹಿಂದೂ - ಮುಸ್ಲಿಂ ಸಂಘರ್ಷ ಕಾಡ್ಗಿಚ್ಚಿನಂತೆ ಹರಡುತ್ತಾ ರಾಂಚಿ, ಮೀರತ್, ಶ್ರೀನಗರ, ಔರಂಗಾಬಾದ್ ಮೊದಲಾದ ಕಡೆಗಳಲ್ಲಿ ಸ್ಫೋಟಗೊಂಡಿತು. ೧೯೬೪ರಲ್ಲಿ ಲಾಲ್ ಬಹದ್ದೂರ್ ಶಾಸ್ತ್ರಿ ಈ ದೇಶದ ಪ್ರಧಾನಿಯಾದರು. ಅವರ 'ಜೈ ಜವಾನ್, ಜೈ ಕಿಸಾನ್' ಎಂಬ ರಣಮಂತ್ರ ಭಾರತ ಪಾಕಿಸ್ತಾನ ಯುದ್ಧದಲ್ಲಿ, ಆ ರಾಷ್ಟ್ರ ಭಾರತಕ್ಕೆ ಮಣಿದು ಭಾರತದ ಪ್ರಧಾನಿ ಲಾಲ್ ಬಹದ್ದೂರ್ ಶಾಸ್ತ್ರಿ ಮತ್ತು ಪಾಕಿಸ್ತಾನದ ಅಧ್ಯಕ್ಷ ಅಯೂಬ್ ಖಾನ್ ರಷ್ಯಾದ ತಾಷ್ಕೆಂಟಿನಲ್ಲಿ ಶಾಂತಿ ಸಂಧಾನಕ್ಕೆ ಅಂಕಿತ ಹಾಕಿದರು. ಆದರೆ ಅದೇ ದಿನ ಒಂದೊಮ್ಮೆ ''ಇಂದಿರಾ ನನ್ನ ತಲೆಯ ಮೇಲೆ ಹಾರಾಡಿದಳು'' ಎಂದು ಉದ್ಗಾರವೆತ್ತಿದ್ದ ಪ್ರಧಾನಿ ಶಾಸ್ತ್ರಿ ತಾಷ್ಕೆಂಟಿನಲ್ಲೇ ಅಸುನೀಗಿದರು. ಇವರ ನಿಗೂಢ ಸಾವು ಇಂದಿಗೂ ವಾಗ್ವಾದಗಳನ್ನು ಹುಟ್ಟುಹಾಕುತ್ತಲೇ ಇದೆ. ಅದೇನೇ ಇರಲಿ, ಮುಂದೆ ಪ್ರಧಾನಿಯಾದ ಇಂದಿರಾ ಅವರ 'ಗರೀಬೀ ಹಟಾವೋ' ಎಂಬ ಘೋಷಣೆಗೆ ಈ ದೇಶದ ಜನ ಮರುಳಾದರು. ಇಂದಿರಾ ಗಾಂಧಿಯವರ ಜನಪರ ಕಾರ್ಯಕ್ರಮಗಳಾದ ಬ್ಯಾಂಕ್ ರಾಷ್ಟ್ರೀಕರಣ, ಭೂಸುಧಾರಣಾ ಚಳುವಳಿಗಳು, ಬಡವರಿಗೆ ಬದುಕಿನ ನೆಮ್ಮದಿಯ ಆಶಾಕಿರಣವಾದವು. ಹಾಗಿದ್ದೂ, ೧೯೬೧ರಿಂದ ೧೯೭೦ರ ಅವಧಿಯಲ್ಲಿ ೭,೪೬೪ ಮತೀಯ ಗಲಭೆಗಳಾದವು ಎಂದು ನಮ್ಮ ಒಕ್ಕೂಟ ರಾಷ್ಟ್ರದ ಗೃಹ ಮಂತ್ರಾಲಯ ತನ್ನ ಅಧಿಕೃತ ಪ್ರಕಟಣೆಯಲ್ಲಿ ತಿಳಿಸಿದೆ. ದೇವರು ಮತ್ತು ಧರ್ಮದ ಹೆಸರಿನಲ್ಲಿ ಆದ ಈ ಗಲಭೆಗಳಲ್ಲಿ ಸಾವಿರಾರು ಜನ ಅಸುನೀಗಿದರು, ಕೋಟಿಗಟ್ಟಲೆ ಆಸ್ತಿ ನಷ್ಟವಾಯಿತು.

ಬಡವರ ದುಡಿಯುವ ಶಕ್ತಿಯನ್ನು ಕುಂದಿಸುತ್ತ ಬಂಡವಾಳಶಾಹಿಗಳು ತಮ್ಮ ತಿಜೋರಿಗಳನ್ನು ಭದ್ರಪಡಿಸಿಕೊಂಡರು. ರಾಜಕೀಯ ನೀತಿಯ ದುರ್ಲಾಭ ಪಡೆದು ಕೋಮುವಾದಿಗಳು ೧೯೬೯ರಲ್ಲಿ ಅಹಮದಾಬಾದಿನಲ್ಲಿ ಮತ್ತು ೧೯೭೦ರಲ್ಲಿ ಮಹಾರಾಷ್ಟ್ರದ ಭಿವಂಡಿಯಲ್ಲಿ ನಡೆಸಿದ ಅಮಾನುಷ ಮತೀಯ ಗಲಭೆಯಲ್ಲಿ ಗಿರಣಿ ಕಾರ್ಮಿಕರು ಸತ್ತರು ಮತ್ತು ಸಣ್ಣ ಕೈಗಾರಿಕೆಗಳು ಮುಚ್ಚಿಕೊಂಡವು. ಲಕ್ಷಗಟ್ಟಲೆ ಜನ ನಿರುದ್ಯೋಗಿಗಳಾದರು. ಆಧುನಿಕ ಉದ್ಯಮಿಗಳು, ಇಂದು ಮೆರೆಯುತ್ತಿರುವ ಕಾರ್ಪೊರೇಟ್ ಪ್ರಭುಗಳು ಅಂದು ತಮ್ಮ ಮಾರುಕಟ್ಟೆಯನ್ನು ಬಲಪಡಿಸಲು ಭಿವಂಡಿ ಮತ್ತು ಅಹಮದಾಬಾದಿನ ಸಣ್ಣ ಕೈಗಾರಿಕೆಗಳು ಅಡ್ಡಗೋಡೆಯಾಗಿರುವುದನ್ನು ಮನಗಂಡು ಕೋಮುವಾದಿಗಳ ನೆರವಿನಿಂದ ಅದನ್ನು ಧ್ವಂಸಪಡಿಸಿದ ದಾರುಣ ಚರಿತ್ರೆ ಇಂದಿಗೂ ಇತಿಹಾಸದಲ್ಲಿ ಬೂದಿ ಮುಚ್ಚಿದ ಕೆಂಡದಂತಿದೆ. ಈ ಕೋಮುವಾದದಿಂದ ಮುಂಬೈ ಮತ್ತು ಅಹಮದಾಬಾದ್‌ಗಳಲ್ಲಿ ನಿರುದ್ಯೋಗಿಗಳಾದ ಗಂಡುಮಕ್ಕಳು ಮುಂದೆ ಭೂಗತ ಜಗತ್ತಿನ ದೊರೆಗಳಾಗಿ ಮೆರೆದರೆ, ಅವರ ಹೆಣ್ಣುಮಕ್ಕಳು ಕೆಂಪುದೀಪದ ಪ್ರಜೆಗಳಾಗಿ ಈ ನಾಡಿನ ಅಮಾನುಷ ಚರಿತ್ರೆಗೆ ಹೊಸ ವ್ಯಾಖ್ಯೆ ಬರೆದರು. ಈ ಬಗ್ಗೆ ಯಾವ ಮತಧರ್ಮಗಳೂ ಇಂದು ಚಕಾರವೆತ್ತುತ್ತಿಲ್ಲ. ಅವರ ವಿಧ್ವಂಸಕ ಕೃತ್ಯಗಳು ಯಾವ ಅಡೆತಡೆಯೂ ಇಲ್ಲದೆ ಮುಂದುವರೆದಿದ್ದು, ನಮ್ಮ ವಿಧಾನಸಭೆ, ಲೋಕಸಭೆಗಳು ಬಲಗೊಂಡದ್ದು, ಇವು ಯಾವತ್ತೂ ನಾವು ಆಲೋಚಿಸಬೇಕಾದಂತಹ ವಿಷಯ.

ಇಂದಿರಾ ಗಾಂಧಿಯವರ ಕಾಲದಲ್ಲಿ ಕೆಲವು ಜನಪರ ಯೋಜನೆಗಳು ಅನುಷ್ಠಾನಕ್ಕೆ ಬಂದಿದ್ದರೂ ಅದೇ ಕಾಲಕ್ಕೆ ವಂಶವಾದದ ಬೇರುಗಳು ಬಲಗೊಂಡವು. ಹೇಗಾದರೂ ಮಾಡಿ ಚುನಾವಣೆಯಲ್ಲಿ ಸ್ಪರ್ಧಿಸಬೇಕು, ಗೆಲ್ಲಬೇಕು ಎನ್ನುವ ಕೆಟ್ಟ ರಾಜಕೀಯದ ವಿಕೃತ ನರ್ತನ ನಡೆಯಿತು. ಇಂದಿರಾ ಗಾಂಧಿ ಪ್ರಜಾಪ್ರಭುತ್ವದಲ್ಲೇ ಸರ್ವಾಧಿಕಾರಕ್ಕೆ ಮುಖ ಮಾಡಿದರು. ಗುಜರಾತಿನ ಮೇಲ್ವರ್ಗದಲ್ಲಿ ಹುಟ್ಟಿಕೊಂಡ ವಿದ್ಯಾರ್ಥಿ ಚಳುವಳಿ, ಬಿಹಾರದಲ್ಲಿ ಬಡ ವಿದ್ಯಾರ್ಥಿಗಳ ಸೇರುವಿಕೆಯಿಂದ ಕ್ರಾಂತಿಯತ್ತ ತಿರುಗಿತು. ಆಡಳಿತಶಾಹಿಯ ಕುಟಿಲತೆಯನ್ನು ಸಂಪೂರ್ಣ ಕ್ರಾಂತಿಯಿಂದಲೇ ಬದಲಿಸುವುದು ಅನಿವಾರ್ಯವೆಂದು ಮನಗಂಡ ವಯೋವೃದ್ಧ ಸ್ವಾತಂತ್ರ್ಯ ಸೇನಾನಿ ಜೆ.ಪಿ. ಎಂದು ಖ್ಯಾತನಾಮರಾದ ಜಯಪ್ರಕಾಶ ನಾರಾಯಣರು ಸಂಪೂರ್ಣ ಕ್ರಾಂತಿಯ ಕರೆ ನೀಡಿದರು. ಗುಜರಾತಿನ ವಿಧಾನಸಭಾ ಚುನಾವಣೆಯಲ್ಲಿ ಕಾಂಗ್ರೆಸ್ಸಿಗೆ ಮುಖಭಂಗವಾದುದಲ್ಲದೆ, ಅಲಹಾಬಾದಿನ ಉಚ್ಚ ನ್ಯಾಯಾಲಯ ಪ್ರಧಾನಿ ಇಂದಿರಾ ಗಾಂಧಿಯವರ ಲೋಕಸಭಾ ಸದಸ್ಯತ್ವವನ್ನೇ ಅಸಿಂಧುಗೊಳಿಸಿತು. ಇದರಿಂದ ಭಯಗೊಂಡ ಇಂದಿರಾ ರಾಜೀನಾಮೆ ನೀಡದೆ ಶತಾಯಗತಾಯ ಅಧಿಕಾರವನ್ನು ಉಳಿಸಿಕೊಳ್ಳಲು ಅಂದಿನ ರಾಷ್ಟ್ರಪತಿ, ಕಾಂಗ್ರೆಸ್ಸಿನ ಪಕ್ಷಪಾತಿ ಫಕ್ರುದ್ದೀನ್ ಅಲಿ ಅಹಮದ್ ಅವರ ವಿಶ್ವಾಸ ಗಳಿಸಿ ರಾಷ್ಟ್ರದ ಮೇಲೆ ಆಂತರಿಕ ತುರ್ತು ಪರಿಸ್ಥಿತಿಯನ್ನು ಹೇರಿದರು. ಗಾಂಧೀಜಿ-ಅಂಬೇಡ್ಕರರ ಸರ್ವಧರ್ಮ ಸಮಭಾವದ ಕನಸಿನ ಗಣರಾಜ್ಯ, ಜನಪದದ ಸ್ವಾತಂತ್ರ್ಯದಂತಹ ಮೌಲ್ಯಗಳಿಗೆ ಭಾರಿ ಹಿನ್ನಡೆ ಉಂಟುಮಾಡಿದ ಪ್ರಜಾಪ್ರಭುತ್ವದ ಕರಾಳ ಅಧ್ಯಾಯ ನಮ್ಮ ಚರಿತ್ರೆಯಲ್ಲಿ ದಾಖಲಾಗಿದೆ. ತುರ್ತು ಪರಿಸ್ಥಿತಿಯ ಕಾಲದಲ್ಲಿ ಜೆ. ಪಿ. ಸೇರಿದಂತೆ ಪ್ರಜಾಪ್ರಭುತ್ವದ ಬಗ್ಗೆ ಧ್ವನಿಯೆತ್ತಿದ ಎಲ್ಲಾ ಬುದ್ಧಿಜೀವಿಗಳನ್ನು, ಮಾಧ್ಯಮದ ಪ್ರತಿನಿಧಿಗಳನ್ನು, ಸಾಹಿತಿ – ಕಲಾವಿದರನ್ನು ಮಾತ್ರವಲ್ಲ ಹಿಂದೂ ಇಸ್ಲಾಂ ಕೋಮುವಾದಿಗಳನ್ನು ಅನುಶಾಸನದ ಹೆಸರಿನಲ್ಲಿ ಇಂದಿರಾ ಕಾರಾಗೃಹಕ್ಕೆ ದಬ್ಬಿದರು. ಈ ಕಾರಾಗೃಹದಲ್ಲಿ ಕೋಮುವಾದಿಗಳು, ಸ್ವಾತಂತ್ರ್ಯಪ್ರಿಯರು ಸಾಹಚರ್ಯ ನಡೆಸುತ್ತಾ ದೇಶದ ಸ್ವಾತಂತ್ರ್ಯಕ್ಕಾಗಿ ಮಹಾನಾಯಕ ಜೆ.ಪಿ.ಯ ಧ್ವನಿಗೆ ಧ್ವನಿ ನೀಡಿದರು. ಬಾಯಲ್ಲಿ 'ಜೈ ಭಾರತ್' ಎನ್ನುತ್ತಾ, ಮನಸ್ಸಲ್ಲಿ 'ಜೈ ರಾಮ್' 'ಅಲ್ಲಾಹೋ' ಎನ್ನುತ್ತಾ ಹೊಸ ಮುಖವಾಡ ಧರಿಸಿದರು. ತುರ್ತುಪರಿಸ್ಥಿತಿಯ ಬಳಿಕ ೧೯೭೭ರಲ್ಲಿ ನಡೆದ ಮಹಾಚುನಾವಣೆಯಲ್ಲಿ ಜನತಾ ಪಕ್ಷದ ಹೆಸರಿನಲ್ಲಿ ಅಂಧೇರೆ ಮೇ ಏಕ್ ಪ್ರಕಾಶ್ - ಜೈ ಪ್ರಕಾಶ್ ಎನ್ನುತ್ತಾ, ಲೋಕಸಭೆಯಲ್ಲಿ ಮೊರಾರ್ಜಿ ದೇಸಾಯಿಯವರ ಸರಕಾರ ರಚನೆ ಯಾಯಿತು. ಇದರಲ್ಲಿ ಕೋಮುವಾದಿಗಳು ಮಂತ್ರಿಗಳಾದರೂ ಇವರೆಲ್ಲಾ ಅಧಿಕಾರದ ಗದ್ದುಗೆಯಲ್ಲಿ ಕುಳಿತ ತಕ್ಷಣ ಜೆ.ಪಿ.ಯನ್ನು ಮರೆತು ಬಂಡವಾಳಶಾಹಿಗಳಿಗೆ ಧ್ವನಿ ನೀಡಿದರು. ಈ ಎರಡು ಮುಖಗಳು ಭಿನ್ನಭಿನ್ನವಾಗಿ ಕಂಡರೂ ಅಂತರಂಗದಲ್ಲಿ ಇವರೆಲ್ಲಾ ಮೂಲಭೂತ ವಾದಿಗಳು, ಜಡ ಸಂಸ್ಕೃತಿಯ ಸಮರ್ಥಕರೇ ಆಗಿದ್ದರು. ಅಧಿಕಾರ ಮೇಲ್ವಿಚಾರಕರ ಕಪಿಮುಷ್ಟಿಯಲ್ಲೇ ಉಳಿಯಬೇಕೆನ್ನುವ ಛಲವಾದಿಗಳು. ಕ್ರಾಂತಿ ಸಿಂಹ ಜೆ.ಪಿ. ಬದುಕಿರು ವಾಗಲೇ ಸತ್ಯಾಸತ್ಯತೆಯನ್ನು ಅರಿಯದೆ ಪ್ರಧಾನಿ ಮೊರಾರ್ಜಿಯ ನೇತೃತ್ವದಲ್ಲಿ ಜೆ.ಪಿ. ಸತ್ತರೆಂದು ಅವರಿಗೆ ಶ್ರದ್ಧಾಂಜಲಿ ಸಲ್ಲಿಸಿದರು. ಮುಂಬೈಯ ಜಸ್ಲೋಕ್ ಆಸ್ಪತ್ರೆಯಲ್ಲಿ ಜೀವನ್ಮರಣ ಹೋರಾಟ ನಡೆಸಿದ ಜೆ.ಪಿ.ಗೆ ಅವರು ಬದುಕಿರುವಾಗಲೇ ಅವರು ಸತ್ತರು ಎಂದು ಜನತಾಪಕ್ಷ ಅವರಿಗೆ ನೀಡಿದ ಶ್ರದ್ಧಾಂಜಲಿ, ಅದು ಅವರ ದೇಹಕ್ಕಲ್ಲ; ಅವರ ತತ್ವಾದರ್ಶಕ್ಕೆ. ಉಪಪ್ರಧಾನಿ ಚೌಧುರಿ ಚರಣ ಸಿಂಗ್ ಅವರ ಕ್ರಾಂತಿಕಾರಿ ಹಸಿರು ಕೃಷಿ ಬಜೆಟ್ ಬಂಡವಾಳಶಾಹಿಗಳನ್ನು ಕೆರಳಿಸಿತು. ಒಟ್ಟಿನಲ್ಲಿ ಜನತಾ ಸರಕಾರದ ಪತನದೊಂದಿಗೆ ಆರ್.ಎಸ್.ಎಸ್., ಜಮಾತ್-ಎ-ಇಸ್ಲಾಮಿ ಕೋಮುವಾದಕ್ಕೆ ಗುಂಪುಗಳ ಚಟುವಟಿಕೆಗಳು ಹೆಚ್ಚಿಸಿದವು. ಅಲ್ಲಿಂದ ಪ್ರಾದೇಶಿಕ ರಾಜಕೀಯ ಗರಿಗೆದರಿದವು. ಪಂಜಾಬಿನಲ್ಲಿ ಬಲವಾಗಿ ಬೇರುಬಿಡುತ್ತಿದ್ದ ಅಕಾಲಿ ದಳ ಪಕ್ಷವನ್ನು ವಿಧ್ವಂಸಗೊಳಿಸಲು ಇಂದಿರಾ ಜೈಲ್ ಸಿಂಗ್ ಜೊತೆಯಾಗಿ ನಡೆಸಿದ ಷಡ್ಯಂತ್ರದಲ್ಲಿ ಬಿಂದ್ರನ್‌ವಾಲೆ ಎಂಬ ಉತ್ಸಾಹೀ ಸಿಖ್ಖ್ ಯುವಕ ಸಂತನಾದ, ದೇವಮಾನವನಾದ. ಪಂಜಾಬಿನಲ್ಲಿ ಸಿಖ್ಖ್ ಕೋಮುವಾದದ ಉರಿಗೆ ಹಿಂದು ಪಂಜಾಬಿಗಳು ಬಲಿಯಾಗತೊಡಗಿದರು. ಬಿಂದ್ರನ್‌ವಾಲೆಯ ಆತಂಕವಾದವನ್ನು ಒಪ್ಪದ ಸಿಖ್ಖರು ಸಾಕಷ್ಟು ಸಂಖ್ಯೆಯಲ್ಲಿ ಅಸುನೀಗಿದರು. ರಾಜಕೀಯ ಮುತ್ಸದ್ದಿಗಳೇ ಬೆಳೆಸಿದ ಬಿಂದ್ರನ್‌ವಾಲೆ ಭಯೋತ್ಪಾದನೆ ಸಂಬಂಧಿತ ನಾಗರಿಕ ಶಾಸನಕ್ಕೆ ಮಣಿಯದಿದ್ದಾಗ

ಭೂಸೇನಾ ಮುಖ್ಯಸ್ಥ ಜನರಲ್ ಜಿ. ಎನ್. ವೈದ್ಯರ ನೇತೃತ್ವದಲ್ಲಿ ಸಿಖ್ಖರ ಪರಮ ಪವಿತ್ರ ಶ್ರದ್ಧಾ ಕೇಂದ್ರ ಅಮೃತಸರದ ಸುವರ್ಣ ಮಂದಿರಕ್ಕೇ 'ಬ್ಲೂ ಸ್ಟಾರ್ ಆಪರೇಷನ್' ಎಂಬ ಸೈನಿಕ ಕಾರ್ಯಾಚರಣೆಯಿಂದ ಬಿಂದ್ರನ್‌ವಾಲೆ ಸೇರಿದಂತೆ ಎಲ್ಲ ಆತಂಕವಾದಿಗಳನ್ನು ಹಿಡಿಸಲಾಯಿತು. ಇದಕ್ಕೆ ಪ್ರತಿರೋಧವಾಗಿ ದೆಹಲಿಯಲ್ಲಿ ಇಂದಿರಾ ಸಿಖ್ಖರ ಗುಂಡೇಟಿಗೆ ಬಲಿಯಾದರೆ ಜನರಲ್ ಜಿ. ಎನ್. ವೈದ್ಯ ಪೂನಾದಲ್ಲಿ ಹಂತಕರ ಗುಂಡಿಗೆ ಬಲಿಯಾದರು. ಗ್ಯಾನಿ ಜೈಲ್ ಸಿಂಗ್ ಪಂಜಾಬಿನಲ್ಲಿ ಅಪಘಾತವೊಂದರಲ್ಲಿ ವಿಧಿವಶರಾದರು. ಇದೇ ಕಾಲಕ್ಕೆ ಕಾಂಗ್ರೆಸ್ ಪ್ರಚೋದಿತ ಸಿಖ್ಖ್ ಸಮುದಾಯದ ಸಾಮೂಹಿಕ ನರಮೇಧ ನಡೆಯಿತು. ಸುಮಾರು ೩,೦೦೦ ಅಮಾಯಕ ಸಿಖ್ಖರನ್ನು ಮನೆ ಮನೆಯಿಂದ ಎಳೆದು ತಂದು ಅವರ ತಲೆ ಕಡಿಯಲಾಯಿತು. ಈ ಅಮಾನುಷ ಕೊಲೆಗೆ ಅಂದಿನ ಪ್ರಧಾನಿ ರಾಜೀವ ಗಾಂಧಿ "ಒಂದು ವಿಶಾಲವಾದ ಆಲದ ಮರ ಬಿದ್ದಾಗ ಪರಿಸರದಲ್ಲಿ ಕಂಪನಗಳಾಗುವುದು ಸಹಜ" ಎಂದು ಕೋಮುಗಲಭೆಗೆ ಪ್ರಚೋದನೆ ನೀಡಿದ್ದು ಪ್ರಜ್ಞಾವಂತರನ್ನೆಲ್ಲಾ ತಲೆತಗ್ಗಿಸುವಂತೆ ಮಾಡಿದೆ. ಮಹಾತ್ಮಾ ಗಾಂಧಿ ಕಾಂಗ್ರೆಸ್ಸಿನಲ್ಲಿ ಕಟ್ಟಿದ ಶಾಂತಿಯ ಗುರಿ ಎಲ್ಲಿ? ರಾಜೀವರ ಅಜ್ಜ ಜವಾಹರಲಾಲ್ ಹಾರಿಸಿದ ಶಾಂತಿಯ ಪಾರಿವಾಳ ಎಲ್ಲಿ ? ಈ ಶಾಂತಿಯ ಪಾರಿವಾಳಕ್ಕೇನೆ, ಪ್ರಧಾನಿ ರಾಜೀವ ಗಾಂಧಿಗೆ ಗುಂಡಿಕ್ಕಿ ಶಾಂತಿಯ ಆದರ್ಶದ ಕೊಲೆ ಮಾಡಿದರಲ್ಲಾ, ಹಗೆಗೆ ಹಗೆ ಹೊಗೆಯಾಗಿ ಮತೀಯ ಆತಂಕ ಇಂದೂ ಭುಗಿಲೇಳುತ್ತಲೇ ಇದೆಯಲ್ಲಾ! ಇದಕ್ಕೆ ಕಾರಣರು ಯಾರು ? ಇದನ್ನು ಮೌನವಾಗಿ ಚಿಂತಿಸೋಣ. ಹಿಂಸೆಯಿಂದ ಹಿಂಸೆ ಬೆಳೆಯುತ್ತದೆ. ಇದು ಜನಮಾನಸದಲ್ಲಿ ಆತಂಕವನ್ನು ಸೃಷ್ಟಿಸುತ್ತದೆ. ಇದಕ್ಕೆ ಸ್ವತಂತ್ರ ಭಾರತದಲ್ಲಿ ಹಸಿರುಕ್ರಾಂತಿಯ ಸಮೃದ್ಧಪ್ರಾಂತ್ಯ ಪಂಜಾಬಿನ ಜನಪದದ ಗೋಧಿಯ ನ್ಯಾಯ ಬೆಲೆಯ ಬೇಡಿಕೆಯ ಚಳುವಳಿ ಕುಟಿಲ ರಾಜಕೀಯದಿಂದ, ಬಿಂದ್ರನ್‌ವಾಲೆಯ ಆತಂಕವಾದಕ್ಕೆ ಮೆಟ್ಟಿಲಾದದ್ದು ಕೋಮುವಾದದ ಮನಸ್ಸಿನ ವಿಕೃತ ದರ್ಶನವಲ್ಲದೆ ಇನ್ನೇನು ?

ಇಂದಿರಾರ ನಂತರ, ಇಂದಿರಾ ಅವರ ಪಾರ್ಥಿವ ದೇಹ ಮಣ್ಣಾಗುವ ಮೊದಲೇ ಅವರ ಮಗ ರಾಜೀವ ಗಾಂಧಿ ಪ್ರಧಾನಿ ಗದ್ದುಗೆ ಏರಿದರು. ಆ ಸಂದರ್ಭದಲ್ಲಿ ಒಂದೆಡೆ ಕೋಮುವಾದ, ಇನ್ನೊಂದೆಡೆ ವಂಶವಾದ, ಮಗದೊಂದೆಡೆ ಬಂಡವಾಳಶಾಹಿಯ ಒತ್ತಡ. ಇವೆಲ್ಲವುಗಳ ಮಧ್ಯೆ 'ಬೋಫೋರ್ಸ್' ಎನ್ನುವ ಹಗರಣ ವಿರೋಧ ಪಕ್ಷಕ್ಕೆ ರಾಜೀವರನ್ನು ಮಣಿಸುವ ಅಸ್ತ್ರವಾಯಿತು. ರಾಜೀವರ ಕಾಲದಲ್ಲಿ ವಿತ್ತ ಮಂತ್ರಿಯಾಗಿದ್ದು, ದಿಢೀರನೆ ರಕ್ಷಣಾ ಮಂತ್ರಿಯಾದ ವಿ. ಪಿ. ಸಿಂಗ್ ಬೋಫೋರ್ಸ್ ಹಗರಣವನ್ನು ಮುಂದಿಟ್ಟು ಕಾಂಗ್ರೆಸಿನಲ್ಲಿ ಬಂಡಾಯದ ಬೀಜ ಬಿತ್ತಿದರು. ಇದರಿಂದ ಬೆದರಿದ ರಾಜೀವ ಗಾಂಧಿ ಅಯೋಧ್ಯೆಯ ವಿವಾದಿತ ಬಾಬರಿ ಮಸೀದಿಯಲ್ಲಿದ್ದ ರಾಮಮಂದಿರದ ಬೀಗ ತೆರೆದರು. ಅತ್ತ ಕೋಮುವಾದವನ್ನು, ಇತ್ತ ಬಂಡವಾಳಶಾಹಿಗಳನ್ನು ಸಂತುಷ್ಟಗೊಳಿಸುವ ಭರದಲ್ಲಿ ಮಿ. ಕ್ಲೀನ್ ಎಂದೇ ಹೆಸರು ಪಡೆದಿದ್ದ ರಾಜೀವ ಗಾಂಧಿ ನೆಲೆ ತಪ್ಪಿದರು. ಅಯೋಧ್ಯೆಯ ರಾಮಮಂದಿರದ ಬೀಗ ತೆರೆದದ್ದೇ ಮುಂದೆ ಕೋಮುವಾದಕ್ಕೆ ಶಂಖಧ್ವನಿಯಾಯ್ತು. ರಾಜೀವ ಅಧಿಕಾರ ಕಳಕೊಂಡು ಜನತಾ ದಳದ ಹೆಸರಿನಲ್ಲಿ ವಿ. ಪಿ. ಸಿಂಗ್ ಪ್ರಧಾನಿಯಾದರು. ಅವರ ಸರಕಾರದಲ್ಲಿ ಹೊಸ ವೇಷ ತೊಟ್ಟ ಬಿ.ಜೆ.ಪಿ.ಯ ವಾಜಪೇಯಿ, ಅಡ್ವಾನಿಯವರು ಪ್ರಬಲ ಶಕ್ತಿಯಾದರು. ಕೋಮುವಾದ ಮತ್ತು ಮೇಲ್ವರ್ಗದ ವರ್ಚಸ್ಸನ್ನು ಮುರಿದು ಸಮಾನತೆಯ ಕನಸು ಕಂಡ ವಿ. ಪಿ. ಸಿಂಗ್ 'ಮಂಡಲ್ ವರದಿ'ಯನ್ನು ಭಾಗಶಃ ಅನುಷ್ಠಾನಗೊಳಿಸಿ, ಹಿಂದುಳಿದ ವರ್ಗದ ಆಶಾಕಿರಣವಾದರು. ಹೊಸ ರಾಜಕೀಯ ಸಮೀಕರಣಗಳು, ಈ ದೇಶದ ರಾಜಕೀಯ ಗೋಪುರದ ಅಡಿಗಲ್ಲನ್ನೇ ಅಲ್ಲಾಡಿಸಿದವು. ಇತಿಹಾಸದುದ್ದಕ್ಕೂ ಧ್ವನಿರಹಿತರಾಗಿದ್ದ ಶೋಷಿತರು ರಾಜಕೀಯ ಕ್ರಿಯಾಶಕ್ತಿಯಾಗತೊಡಗಿದರು. ಇದನ್ನು ಕಂಡು ರೊಚ್ಚಿಗೆದ್ದ ಕೋಮುವಾದಿಗಳ ಉದಾರವಾದಿ ಮುಖವಾಡದ ಅಟಲ್ ಬಿಹಾರೀ ವಾಜಪೇಯಿ ಭಾರತ ಒಕ್ಕೂಟದ ಸಂಪುಟದಲ್ಲಿ ವಿದೇಶೀ ಮಂತ್ರಿಯಾಗಿದ್ದುಕೊಂಡೇ "ನಿಮ್ಮಲ್ಲಿ ಮಂಡಲ ವಿದ್ದರೆ ನಮ್ಮಲ್ಲಿ ಕಮಂಡಲವಿದೆ" ಎಂಬ ಆತಂಕಕಾರಿ, ಬಾಲಿಶ ಹೇಳಿಕೆ ನೀಡಿದರು. ಎಲ್. ಕೆ. ಅಡ್ವಾನಿಯವರ ಅಯೋಧ್ಯೆಯ ರಥಯಾತ್ರೆ ಪ್ರಾರಂಭವಾಯಿತು. ಈ ರಥ ಯಾತ್ರೆ [illegible] ಬಿಹಾರಕ್ಕೆ ಪ್ರವೇಶಿಸಿದಾಗ ಸಮಾಜವಾದಿ ಚಿಂತಕ ಕರ್ಪೂರಿ ಠಾಕೂರ್‌ರವರ ಪರಮಶಿಷ್ಯ ಲಾಲೂ ಪ್ರಸಾದ್ ಯಾದವ್ ಅಡ್ವಾನಿಯವರನ್ನು ಬಂಧಿಸಿದರು. ಈ ಹಿನ್ನೆಲೆಯಲ್ಲಿ ಬಿ.ಜೆ.ಪಿ. ಕೇಂದ್ರ ಸರಕಾರಕ್ಕೆ ತಾನಿತ್ತಿದ್ದ ಬೆಂಬಲವನ್ನು ಹಿಂತೆಗೆದುಕೊಂಡಿತು. ವಿ. ಪಿ. ಸಿಂಗ್ ಸರಕಾರ ಪತನವಾಯಿತು. ಕಾಂಗ್ರೆಸ್ ನೀಡಿದ ಬೆಂಬಲದಿಂದ ರೈತರ ನಾಯಕ ಚೌಧುರಿ ಚರಣ್ ಸಿಂಗ್ ಪ್ರಧಾನಿಯಾಗಿ ಒಂದು ದಿನವೂ ಲೋಕಸಭೆಯನ್ನು ಎದುರಿಸದೆ ರಾಜೀನಾಮೆ ನೀಡಿದರು. ಮುಂದೆ ಜೆ. ಪಿ. ಅವರ ಇನ್ನೊರ್ವ ಶಿಷ್ಯ ಚಂದ್ರಶೇಖರ್ ಪ್ರಧಾನಿಯಾದರು. ಅವರ ಸರಕಾರವು ಕಾಂಗ್ರೆಸ್ಸಿನಿಂದಲೇ ಅತಂತ್ರಗೊಂಡಾಗ ಚಂದ್ರಶೇಖರ್ ಲೋಕಸಭೆಯಲ್ಲೇ ರಾಜೀನಾಮೆ ನೀಡಿ ಮಹಾ ಚುನಾವಣೆಗೆ ಎಡೆಮಾಡಿಕೊಟ್ಟರು. ಈ ಮಹಾಚುನಾವಣೆಯ ಮೊದಲ ಹಂತದ ಚುನಾವಣೆ ಮುಗಿಯುತ್ತಲೇ ತಮಿಳುನಾಡಿನ ಶ್ರೀಪೆರಂಬದೂರಿನಲ್ಲಿ ರಾಜೀವ್ ಗಾಂಧಿಯು ಎಲ್.ಟಿ.ಟಿ.ಇ.ಯ ಭಯೋತ್ಪಾದನಾ ಸಿಡಿಮದ್ದಿನ ಮಾನವ ಬಾಂಬಿಗೆ ಬಲಿಯಾದರು. ಆನಂತರ ಜರುಗಿದ ಎರಡನೇ ಹಂತದ ಲೋಕಸಭಾ ಚುನಾವಣೆಯಲ್ಲಿ ರಾಜೀವ್ ಸಾವಿನ ಅನುಕಂಪದ ಅಲೆಯಲ್ಲಿ, ನರಸಿಂಹರಾಯರ ಲೇವಾದೇವಿಯ ಚಾಣಾಕ್ಷತೆಯಲ್ಲಿ ದೆಹಲಿಯಲ್ಲಿ ಕಾಂಗ್ರೆಸ್ ಸರಕಾರದ ರಚನೆಯಾಯಿತು. ಪಿ. ವಿ. ನರಸಿಂಹರಾವ್ ಪ್ರಧಾನಿಯಾದರು. ಇದೇ ಕಾಲಕ್ಕೆ ಪ್ರಾದೇಶಿಕ ಪಕ್ಷಗಳ ಕೋಮುವಾದ ಮತ್ತು ರಾಜಕೀಯ ಕುದುರೆ ವ್ಯಾಪಾರ, ಎರಡೂ ಭರದಿಂದ ನಡೆಯಿತು. ಒಂದೊಮ್ಮೆಗೆ ಸಂತಾಲರ ಸ್ವಾಭಿಮಾನದ ನಗಾರಿಗೆ ಧ್ವನಿಯಾಗಿದ್ದ ಜನನಾಯಕ ಗುರೂಜಿ ಶಿಬುಶೊರೇನ್ ಕೊಡುಕೊಳ್ಳುವ ರಾಜಕೀಯದಲ್ಲಿ ತನ್ನನ್ನೇ ಮಾರಿಕೊಂಡರು. ನರಸಿಂಹರಾವ್ ಅವರಿಗೆ ಕೋಮುವಾದಿಗಳ ಅಂತರಂಗದ ಸಖ್ಯವಿತ್ತೆಂದು ಅವರ ಬಿಳಿಧೋತಿಯ ಒಳಗೆ ಖಾಕಿ ಚಡ್ಡಿ ಕಾಣುತ್ತಿದೆಯೆಂದು ಮುಂಬೈಯ ಪ್ರತಿಷ್ಠಿತ ಟೈಂಸ್ ಪತ್ರಿಕೆ ಟೀಕಿಸಿ ನರಸಿಂಹರಾಯರು ಪ್ರಧಾನಿಯಾಗಿದ್ದ ಕಾಲದಲ್ಲಿ ಬಾಬರೀ ಮಸೀದಿಯ ಧ್ವಂಸದ ಕಾಲದ ಚಿತ್ರಣ ಕುರಿತು ಸಂಪಾದಕೀಯ ಬರೆದದ್ದು ವಿಚಾರಯೋಗ್ಯ.

ವಾಜಪೇಯಿ, ಅಡ್ವಾನಿಯವರ ನೇತೃತ್ವದಲ್ಲಿ, ಉಮಾ ಭಾರತಿಯ ಕುಮ್ಮಕ್ಕಿನಿಂದ ಉತ್ತರ ಪ್ರದೇಶದಲ್ಲಿ ಮುಖ್ಯಮಂತ್ರಿ ಕಲ್ಯಾಣಸಿಂಗರ ಕಾಲದಲ್ಲಿ ಧ್ವಂಸಗೊಂಡ ಬಾಬರೀ ಮಸೀದಿಯ ಮತ್ತು ರಾಮಜನ್ಮ ಭೂಮಿಯ ವಿವಾದ ಮುಂದೆ ಅಟಲ್ ಬಿಹಾರಿ ವಾಜಪೇಯಿ ಪ್ರಧಾನಿಯಾದ ಸಮಯದಲ್ಲೂ ಇತ್ಯರ್ಥವಾಗದೆ ಸಮಸ್ಯೆಯಾಗಿಯೇ ಉಳಿದಿರುವುದಕ್ಕೆ ಕಾರಣವಾದರೂ ಕೋಮುವಾದಿಗಳು ಯಥಾಸ್ಥಿತಿವಾದವನ್ನು ಮುಂದುವರೆಸಿಕೊಂಡೇ ಹೋಗಲಿದ್ದಾರೆ. ಇದು ಮೇಲ್ವರ್ಗದ ಪ್ರಭಾವಗಳಿಗೂ ಅಗತ್ಯವಿದೆ. ಆದರೆ ಇವರ ವಿಕೃತ ಚಿಂತನೆ ಬಡವರ ಅನ್ನದ ಬಟ್ಟಲಿಗೇ ಕೈಯಿಕ್ಕುತ್ತಿದೆ. ಅರಾಜಕತೆ ತುಂಬುತ್ತಿದೆ. ದೇವರು ಧರ್ಮದ ಹೆಸರಿನಲ್ಲಿ ಮನಸ್ಸು ಮನಸ್ಸುಗಳಲ್ಲಿ ಬಿರುಕುಗಳನ್ನು ನಿರ್ಮಿಸುವ ಹುನ್ನಾರಕ್ಕೆ ಈ ದೇಶದ ಬಲಪಂಥೀಯ ಪಕ್ಷಗಳೆಲ್ಲವೂ ಮತಿ ಮರೆತು ನೀರೆರೆಯುತ್ತಿವೆ. ಇಂದಿಗೂ ಸ್ವಾತಂತ್ರ್ಯ ದೊರೆತು ೬ ದಶಕಗಳು ಕಳೆದರೂ ದೇಶದ ಅರ್ಧದಷ್ಟು ಜನ ಅಕ್ಷರಸ್ಥರಲ್ಲ. ಪ್ರತಿಶತ ೩. ಕೋಟಿ ಜನರ ದಿನದ ಆದಾಯ ರೂಪಾಯಿ ೨೦ ಮಾತ್ರ. ಅಸ್ಪೃಶ್ಯತೆಯ ಪಿಡುಗಿನಿಂದ ಇಂದಿಗೂ ನಾವು ಮುಕ್ತರಲ್ಲ. ಕರ್ನಾಟಕದ ಬೆಂಡಿಗೇರಿಯಲ್ಲಿ ದಲಿತನಿಗೆ ಮಲ ತಿನ್ನಿಸುವ, ಗುಜರಾತಿನ ಗೋಧ್ರಾದಲ್ಲಿ ಮನುಷ್ಯನನ್ನೇ ಜೀವಂತ ಸುಡುವ, ದೆಹಲಿಯ ಸಿಖ್ಖರ ತಲೆ ಕಡಿದ, ಮಹಾರಾಷ್ಟ್ರದ ಸರಣಿ ಸ್ಫೋಟಗಳಂತಹ ಘಟನೆಗಳಲ್ಲಿ ಇತ್ತೀಚಿಗೆ ಮುಂಬೈಯ ತಾಜ್, ಒಬೆರಾಯ್ ಸೇರಿದಂತೆ ವಿವಿಧೆಡೆ ಸೇರಿದ ಭಯೋತ್ಪಾದನಾ ಚಟುವಟಿಕೆಗಳ ಅಂತರಂಗದಲ್ಲಿ ಕೋಮುವಾದ ಪ್ರಜ್ವಲಿಸುತ್ತಿದೆ. ಅಯೋಧ್ಯೆಯ ಮಸೀದಿಯ ವಿಧ್ವಂಸಕ್ಕೆ ಪ್ರತಿಯಾಗಿ ಆಫ್ಘಾನಿಸ್ತಾನದಲ್ಲಿ ಬಾಮಿಯಾನ್ ಬುದ್ಧನ ಪ್ರತಿಮೆಯನ್ನು ನಾಶಮಾಡಲಾಯಿತು. ಇಂದು ಪ್ರತಿಯೊಬ್ಬರ ಮನಸ್ಸಿನಲ್ಲೂ ಮಾನವೀಯ ಮೌಲ್ಯಗಳು ಕರಗಿಹೋಗುತ್ತಿವೆ. ಮನುಷ್ಯರು ಮೃಗಗಳಾಗುತ್ತಿದ್ದಾರೆ, ಮಾನವ ಬೇಟೆ ನಡೆಸುತ್ತಿದ್ದಾರೆ.

ಕಳೆದ ವರ್ಷ ೨೦೦೮ರಲ್ಲಿ ಒರಿಸ್ಸಾ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಹಿಂದು ಮೂಲಭೂತವಾದಿಗಳು ಕ್ರಿಶ್ಚಿಯನ್ ಚರ್ಚುಗಳ ಮೇಲೆ ಯೋಜಿತ ಭಯೋತ್ಪಾದನೆಯನ್ನು ನಡೆಸಿದರು. ಇದರ ಹಿಂದೆ ವಿಶ್ವ ಹಿಂದೂ ಪರಿಷತ್ತು ಮತ್ತು ಅದರ ಪರಿವಾರಗಳ ಕೈವಾಡವಿತ್ತೆಂದು ಆರೋಪಿಸಲಾಯಿತು.

ಅದೇ ವರ್ಷ ಭಯೋತ್ಪಾದಕರು ಜೈಪುರ, ಬೆಂಗಳೂರು, ಅಹಮದಾಬಾದ್ ಮತ್ತು ದೆಹಲಿ ಈ ನಾಲ್ಕು ಮಹಾನಗರಗಳಲ್ಲಿ ಬಾಂಬ್ ಸಿಡಿಸಿದರು. ೧೪೦ಕ್ಕೂ

ಹೆಚ್ಚು ಜನ ಅಸುನೀಗಿದ್ದಲ್ಲದೆ ಬಹಳಷ್ಟು ಮಂದಿ ಗಾಯಗೊಂಡರು. ಇದರ ಹಿಂದೆ 'ಇಂಡಿಯನ್ ಮುಜಾಹಿದ್ದೀನ್' ಎಂಬ ಇಸ್ಲಾಂ ಮೂಲಭೂತವಾದಿಗಳ ಕೈವಾಡವಿತ್ತು. ಸ್ಟೂಡೆಂಟ್ ಇಸ್ಲಾಮಿಕ್ ಮೂವ್‌ಮೆಂಟ್ ಆಫ್ ಇಂಡಿಯಾ ಮತ್ತು ಪಾಕಿಸ್ತಾನದ ಲಷ್ಕರ್-ಇ-ತೊಯ್ಬಾಗಳಂತಹ ಸಂಘಟನೆಗಳ ನೆರವಿನಿಂದ ಇಂತಹ ಭಯೋತ್ಪಾದನೆಯನ್ನು ಭಾರತದಲ್ಲಿ ನಡೆಸಲಾಗುತ್ತಿದೆ ಎಂಬ ಆರೋಪವಿದೆ.

ಇವೆಲ್ಲವೂ ದೇವರು ಮತ್ತು ಧರ್ಮದ ಹೆಸರಿನಲ್ಲಿ ಮತಾಂಧರು ನಡೆಸುವ ದಾಂಧಲೆಗಳಾಗಿದ್ದರೂ ಇದಕ್ಕೆ ಬಲಿಯಾಗುತ್ತಿರುವುದು ಎಲ್ಲಾ ಕೋಮಿನ ಬಡವರು. ಯಾಕೆ ಬೆಂಗಳೂರಿನ ಬ್ರಿಗೇಡ್ ರೋಡಿನಲ್ಲಿ ಮುಂಬೈಯ ಮಲಬಾರ್ ಹಿಲ್‌ನಲ್ಲಿ ಮತೀಯ ಗಲಭೆಗಳು ಹರಡುತ್ತಿಲ್ಲ? ತಾಜ್, ಒಬೆರಾಯ್ ಘಟನೆಯೊಂದನ್ನು ಹೊರತುಪಡಿಸಿದರೆ, ಹೆಚ್ಚಿನ ಕಡೆಯಲ್ಲಿ ಮತೀಯ ದಾಂಧಲೆಗೆ ಬಲಿಯಾಗುವವರು ಗುಡಿಸಲುಗಳಲ್ಲಿ ವಾಸಿಸುವ ಬಡವರು. ನೀರು ಮತ್ತು ಶೌಚಾಲಯದ ವ್ಯವಸ್ಥೆಗಳು ನಗಣ್ಯ ಪ್ರಮಾಣದಲ್ಲಿರುವ ಇಂತಹ ಕೊಳೆಗೇರಿಗಳಲ್ಲೇ ಯಾಕೆ ಮತೀಯ ಗಲಭೆಗಳು ನಡೆಯುತ್ತವೆ? ನಾವೆಲ್ಲಾ ಇದನ್ನು ಮಂಡಿಯೂರಿ ಆಲೋಚಿಸಿ, ಕನಿಷ್ಠಪಕ್ಷ ನಮ್ಮ ಶತ್ರುಗಳು ಯಾರು ಎಂಬ ವಿಚಾರದ ಬಗ್ಗೆ ಆಲೋಚಿಸಬೇಕಾಗಿದೆ. ಭೂಗತ ಜಗತ್ತು, ಬಂಡವಾಳಶಾಹಿಗಳೇ ಮೊದಲಾದ ನೆಲಸುಂಗಣ್ಣರು ನಡೆಸುವ ಪಿತೂರಿ ಇದೆಂದು ಎಷ್ಟು ಜನರಿಗೆ ಅರ್ಥವಾಗುತ್ತಿದೆ? ಇತ್ತೀಚೆಗೆ ಮಾಲೆಗಾಂವ್‌ನಲ್ಲಿ ನಡೆದಂತಹ ಭಯೋತ್ಪಾದನೆಯ ಹಿನ್ನೆಲೆಯಲ್ಲಿ ಹಿಂದೂ ಧಾರ್ಮಿಕ ನೇತಾರರು, ಅದರಲ್ಲಿಯೂ ಸಾಧ್ವಿ ಪ್ರಜ್ಞಾ ಸಿಂಗ್ ಎಂಬ ಸನ್ಯಾಸಿನಿ ಆರೋಪಕ್ಕೊಳಗಾಗಿರುವುದು ಹಿಂದೂ ಭಯೋತ್ಪಾದನೆಯ ಭಯಾನಕ ಮುಖಕ್ಕೆ ಸಾಕ್ಷಿಯಾಗಿದೆ. ಇಂದಿನ ಮತೀಯ ಭಯೋತ್ಪಾದನೆಗೆ ಎರಡು ಮುಖಗಳಿವೆ. ಒಂದು ಧಾರ್ಮಿಕ ನೇತಾರರ ಭಯೋತ್ಪಾದನೆ, ಇನ್ನೊಂದು, ಶಾಸನದ ಅಪರೋಕ್ಷ ನೆರವಿನಿಂದ ನಡೆಯುವ ಭಯೋತ್ಪಾದನೆ. ಇವೆರಡನ್ನೂ ಗುರುತಿಸಿ ಅಪರಾಧಿಗಳನ್ನು ಶಿಕ್ಷಿಸುವಲ್ಲಿ, ನಿರಪರಾಧಿಗಳನ್ನು ರಕ್ಷಿಸುವಲ್ಲಿ ನಮ್ಮ ಪ್ರಜಾಪ್ರಭುತ್ವ ಸೋಲಬಾರದು. ಅಂತಹ ಸೋಲು ಕೇವಲ ಒಂದು ವ್ಯವಸ್ಥೆಯ ಸೋಲಲ್ಲ. ಅದು ನಮ್ಮ ಮೂಲಭೂತ ಹಕ್ಕಿನ ಸೋಲೇ ಹೌದು. ಆದುದರಿಂದಲೇ ಧರ್ಮ ನಿರಪೇಕ್ಷತೆ, ಜಾತ್ಯತೀತತೆ ನಮ್ಮೆಲ್ಲರ ಮೌಲ್ಯವಾಗುವುದೆಂತು ಎನ್ನುವುದನ್ನು ನಾವೆಲ್ಲಾ ಬುದ್ಧಿಪೂರ್ವಕವಾಗಿಯೂ, ಶ್ರದ್ಧಾಪೂರ್ವಕವಾಗಿಯೂ ಚರ್ಚಿಸಬೇಕಿದೆ.

ಜಾತಿ ಮತ್ತು ಧರ್ಮಗಳು ಹೇಗೆ ಮನುಷ್ಯನನ್ನು ವಿಭಜಿಸುತ್ತಾ ಮನುಷ್ಯತ್ವವನ್ನು ವಿಕೃತಗೊಳಿಸುತ್ತವೆ ಎನ್ನುವುದಕ್ಕೆ ಖ್ಯಾತ ವೈಚಾರಿಕ ಚಿಂತಕ ಡಾ॥ ವಿ. ಆರ್. ನಾರ್ಲ ಅವರ ಮಾತುಗಳನ್ನು ಉದ್ಧರಿಸುತ್ತೇನೆ: ''ಮಾನವನಲ್ಲೂ, ಅವನ ಏಳಿಗೆಯಲ್ಲೂ ನಂಬಿಕೆಯುಳ್ಳವನು ನಾನು. ಆದರೆ ಈ ದೇಶವು ತುಳಿದಿರುವ ಹಾದಿಯನ್ನು ನೋಡಿದರೆ, ವರ್ಷಗಳು ಉರುಳಿದಂತೆಲ್ಲಾ ವೇದನೆಗಳು ತೀವ್ರಗೊಳ್ಳುತ್ತಿವೆ. ನಮ್ಮ ರಾಜಕೀಯ ಸ್ವಾತಂತ್ರ್ಯವು ನಮ್ಮನ್ನು ಬೌದ್ಧಿಕ ಸ್ವಾತಂತ್ರ್ಯದೆಡೆಗೆ ಕೊಂಡೊಯ್ಯುವಲ್ಲಿ ಸೋತಿದೆ. ಸಂವಿಧಾನದತ್ತ ಸಾಮಾಜಿಕ ಮತ್ತಿತರ ಸಮಾನತೆಗಳಿಗೆ ಬದಲು ಅಸಮಾನತೆಗಳು ನಮ್ಮ ಬದುಕಿನ ಎಲ್ಲ ರಂಗಗಳಲ್ಲೂ ಬೆಳೆದು ನಿಂತಿವೆ. ನಮ್ಮ ಉನ್ನತ ಶಿಕ್ಷಣವು ವಿಶಾಲ ದೃಷ್ಟಿಯನ್ನಾಗಲೀ ಬದುಕಿನ ವಿಶಾಲತೆಯನ್ನಾಗಲೀ ನೀಡಲಾರದು. ಅದು ಮನುಷ್ಯನನ್ನು ಸುಸಂಸ್ಕೃತಗೊಳಿಸಲಾರದ ನಮ್ಮ ಜಾತಿ, ಸಂಸ್ಕೃತಿಯ ಮೂಷಕಗಳ ಹಿಂಡನ್ನು ತಯಾರು ಮಾಡುತ್ತಿದೆ. ಸಶಸ್ತ್ರ ಕ್ರಾಂತಿಯನ್ನು ಆರಂಭಿಸಿದ ಹೊರತು ನಾವು ಈ ಹೊಲಸನ್ನು ನಿರ್ಮೂಲನ ಮಾಡುವುದು ಅಸಾಧ್ಯ. ಜಾತಿ ಪದ್ಧತಿಯೆಂಬ ನಿಷ್ಕರುಣೆಯ ನಿರಂಕುಶ ಪ್ರಭುವಿಗೆ ರಕ್ಷಣೆಯೊದಗಿಸುತ್ತಾ ಅವನ ಸುತ್ತಲೂ ದುರ್ಗಮ ಕೋಟೆಯಂತೆ ನಿಂತಿರುವ ಕರ್ಮ ಮತ್ತು ಪುನರ್ಜನ್ಮಗಳ ಕುರುಡು ಸಿದ್ಧಾಂತಗಳ ಮೇಲೆ ಧಾಳಿ ಮಾಡುವುದೇ ನಮ್ಮ ಕ್ರಾಂತಿಯ ಮೊದಲ ಗುರಿಯಾಗಬೇಕು. ದುರ್ಗಮವೆನಿಸಿರುವ ಈ ಕೋಟೆಯನ್ನು ಧ್ವಂಸಮಾಡಿ ಅದರೊಳಗೆ ಸಾರ್ವಭೌಮವಾಗಿ ಮೆರೆಯುತ್ತಿರುವ ಜಾತಿ ಎಂಬ ನಿರಂಕುಶ ಪೀಡಕವನ್ನು ಸೆರೆಹಿಡಿದು ತೆರೆದ ಬಂಡಿಯ ಮೇಲೆ ಕಟ್ಟಿ ನಿಲ್ಲಿಸಿ, ರಸ್ತೆಯಲ್ಲಿ ಅಪಮಾನಗೊಳಿಸಿ ಕಲ್ಲುಗಳಿಂದ ಹೊಡೆದು, ನಂತರ ಗಲ್ಲಿಗೇರಿಸಬೇಕು. ಆಗ ಮಾತ್ರ ನಾವು ಸ್ವತಂತ್ರವೂ, ಪ್ರಬಲವೂ, ಪುರೋಗಾಮಿಯೂ, ಸುಸಂಸ್ಕೃತವೂ ಆದ ದೇಶವಾಗಿ ಐಕಮತ್ಯದಿಂದ ನಿಲ್ಲುವುದು ಸಾಧ್ಯವಾಗುವುದು.'' ಇಲ್ಲಿ ಕಾನೂನನ್ನು ಕೈಗೆ ತೆಗೆದುಕೊಳ್ಳುವ ವಿಚಾರ ನಮಗೆ ಒಪ್ಪಿತವಲ್ಲವಾದರೂ ನಾರ್ಲರ ಭಾವನೆಗಳು ಖಂಡಿತವಾಗಲೂ ಈ ದೇಶದ ಪ್ರಾಂತೀಯ ಆತಂಕಗಳನ್ನು ಜಾತೀಯ ವೈಪರೀತ್ಯಗಳನ್ನು ನಿಯಂತ್ರಿಸಬೇಕು ಎನ್ನುವಲ್ಲಿ ಎರಡು ಮಾತಿಲ್ಲ. ಕಪಿಲ, ಬುದ್ಧ, ಅಕ್ಕಮಹಾದೇವಿ, ಮಹಾತ್ಮಾ ಗಾಂಧಿ, ಅಂಬೇಡ್ಕರ್, ಲೋಹಿಯಾ, ಸಾವಿತ್ರಿ ಬಾಯಿ ಫುಲೆ, ಮದರ್ ತೆರೆಸಾ ಮೊದಲಾದವರ ಅಹಿಂಸಾವಾದ ಮಾನವೀಯ ಅನುಕಂಪ ಈ ನಾಡಿನ ಜೀವನ ಸತ್ವ. ಅದೇ ನಮ್ಮ ಬದುಕಿನ ತತ್ವ. ಸ್ವತಂತ್ರ ಸಾರ್ವಭೌಮ ಪ್ರಜಾಸತ್ತಾತ್ಮಕ ಗಣರಾಜ್ಯ ಭಾರತದ ಒಕ್ಕೂಟ ವ್ಯವಸ್ಥೆ ಮತೀಯ, ಜಾತೀಯ ಭ್ರಾತೃತ್ವದಿಂದಲೇ ಬಲಗೊಳ್ಳುವ ಕಾಲ ಖಂಡಿತಕ್ಕೂ ಬರುತ್ತದೆ. ಆದರೆ ಅದರತ್ತ ದಿಟ್ಟ ಹೆಜ್ಜೆಯಿಡುವ ಮನಸ್ಸು ನಮ್ಮದಾಗಬೇಕು.

ಬುದ್ಧನ ಈ ನಾಡಿನಲ್ಲಿ 'ಬಹುಜನ ಹಿತಾಯ ಬಹುಜನ ಸುಖಾಯ' ಎನ್ನುವ ಶಾಂತಿಮಂತ್ರ, ಅಶೋಕನ 'ಸತ್ಯಮೇವ ಜಯತೇ'ಯ ಲಾಂಛನದ ಆಶಯಕ್ಕೆ ಜನಪದ ಸ್ಪಂದಿಸಬೇಕು. ಸ್ವಾತಂತ್ರ್ಯೋತ್ತರ ಭಾರತದಲ್ಲಿ ಮತೀಯತೆಗಿಂತ ಮಾನವೀಯತೆ ಮುಖ್ಯವಾಗಬೇಕು. ಕೋಮುವಾದ, ಹಿಂಸೆ, ಅಹಿಂಸೆಯ ನಡುವೆ ಈ ಸಂದರ್ಭದಲ್ಲಿ ಲೋಹಿಯಾ ಹೇಳಿದ ಒಂದು ಮಾತು ನೆನಪಾಗುತ್ತದೆ :

''ಈ ಶತಮಾನದ ಎರಡು ಅತ್ಯಂತ ದೊಡ್ಡ ಮೂಲಭೂತ ಅಂಶಗಳೆಂದರೆ, ಒಂದು, ಅಣು ಬಾಂಬು, ಇನ್ನೊಂದು ಮಹಾತ್ಮಾ ಗಾಂಧಿ. ಈ ಶತಮಾನದ ಕೊನೆಯಾಗುವುದರಲ್ಲಿ ಇದರೊಳಗೆ ಯಾವುದಾದರೊಂದು ಇನ್ನೊಂದನ್ನು ಸೋಲಿಸಬೇಕಾಗುತ್ತದೆ. ಮಹಾತ್ಮಾ ಗಾಂಧಿ ಗೆಲ್ಲಲಿ ಎಂಬುದು ನನ್ನ ಹಾರೈಕೆ.'' ಆದರೆ ಇಂದು ಅಮೆರಿಕಾದ ಯುದ್ಧಮುಖೀ ಚರಿತ್ರೆಯ ಅಣುಬಂಧಕ್ಕೆ ತಲೆಬಾಗಿ ನಮ್ಮ ಗಣರಾಜ್ಯದ ಸಾರ್ವಭೌಮತ್ವಕ್ಕೇ ಸಂಚಕಾರ ತಂದವರು ನಾವಾಗಿದ್ದೇವೇ ಏನೋ ಎಂಬ ಅನುಮಾನ ಅನೇಕರನ್ನು ಕಾಡುತ್ತದೆ. ಅಮೆರಿಕಾ ಈಗಾಗಲೇ ಆಫ್ಘಾನಿಸ್ತಾನ, ಇರಾಕನ್ನು ಮುಗಿಸಿದೆ. ಪಾಕಿಸ್ತಾನವನ್ನು ದೆಸೆಗೆಡಿಸಿದೆ. ಇರಾನಿಗೆ ಬೆದರಿಕೆ ಒಡ್ಡುತ್ತಲೇ ಇದೆ. ಅಮೆರಿಕಾದ ಕ್ರಿಶ್ಚಿಯನ್ ಬಾಂಬ್, ಪಾಕಿಸ್ತಾನದ ಇಸ್ಲಾಂ ಅಣು ಬಾಂಬ್, ಭಾರತದ ಹಿಂದೂ ಅಣು ಬಾಂಬ್ ಎಲ್ಲಿ ಯಾವಾಗ ಸಿಡಿದರೂ ಎಲ್ಲೆಡೆ ಸಿಡಿಯುವುದು ಜೀವಂತ ಮನುಷ್ಯ ಎನ್ನುವುದನ್ನು ಮರೆಯದಿರೋಣ!

ಡಾ॥ ಸಾವಿತ್ರಿ ಕೆ.
ಇತಿಹಾಸ ಇಲಾಖೆ ಮುಖ್ಯಸ್ಥರು, ಬೆಸೆಂಟ್ ಮಹಿಳೆಯರ ಕಾಲೇಜು, ಮಂಗಳೂರು - ೫೭೫ ೦೦೩

ಎಡರಂಗವನ್ನು ಚುನಾವಣೆಯಲ್ಲಿ ಸೋಲಿಸಲು ಪಶ್ಚಿಮ ಬಂಗಾಳದಲ್ಲಿ ಎಂತಹ ಅಪಾಯಕಾರಿ ಹಾದಿಯನ್ನು ಮಮತಾ ಬ್ಯಾನರ್ಜಿ ನೇತೃತ್ವದ ಜಂಟಿ ಸೇನಾಪಡೆಗಳು ಅನುಸರಿಸಿದುವೆಂಬುದು ಈಗ ಸ್ಪಷ್ಟವಾಗುತ್ತಿದೆ. ನಂದೀಗ್ರಾಮದ ಘಟನೆಗಳ ಸಂದರ್ಭದಲ್ಲಿ ಈ ಹಿನ್ನೆಲೆಯನ್ನು ಮುಂದಿಟ್ಟವರನ್ನು ಲೇವಡಿ ಮಾಡಲಾಯಿತು. ಈಗ ಲಾಲ್‌ಘರ್ ಮುಂತಾದ ಸ್ಥಳಗಳಲ್ಲಿ ಪೊಲೀಸರ ದೌರ್ಜನ್ಯವನ್ನು ವಿರೋಧಿಸುವ ಹೆಸರಿನಲ್ಲಿ ಮನೆಗಳನ್ನು ಹಾಗೂ ಜನಗಳನ್ನು ಸುಡಲಾಗಿದೆ. ಹಾಗೆ ಮಾಡಿದವರನ್ನು ಮಾವೋವಾದಿಗಳೆಂದು ಏಕೆ ಕರೆಯುತ್ತಾರೋ ತಿಳಿಯದು. ಒಟ್ಟಿನಲ್ಲಿ ಇಲ್ಲಿ ಸಿರಿ ರಾಮಸೇನೆ (ಅಂದರೆ ಸಿರಿ ಗಳಿಸಿಕೊಳ್ಳುವ ಸೇನೆ), ಅಲ್ಲಿ ಕಿರಿ ವಾಮಸೇನೆ (ಅಂದರೆ ಮಮತಾ ಎದುರು ಹಲ್ಲು ಕಿರಿಯುವ ಸೇನೆ). ಜನರ ವಿಮೋಚನೆಯು ಇದರಿಂದ ಸಾಧ್ಯವಾಗುತ್ತದೆಂಬ ಐತಿಹ್ಯವು ಕೆಲವರಿಗೆ ಆಪ್ಯಾಯಮಾನ, ಅಲ್ಲವೆ?

ಅತ್ತ ಇರಾನಿನಲ್ಲಿ ಮುಸಾವಿ ಬಣ ಚುನಾವಣೆಯ ಫಲಿತಾಂಶವನ್ನು ಪ್ರಶ್ನಿಸುತ್ತಿದೆ. ಪಟ್ಟಣಗಳ ಜನ ಏನು ಹೇಳುತ್ತಾರೋ ಅದು ದೇಶದ ಧ್ವನಿಯೆಂಬಂತೆ ಬಿಂಬಿಸಲಾಗುತ್ತಿದೆ. ಹಳ್ಳಿಗಳ ಜನರ ಬೆಂಬಲವು ಬೆಂಬಲವಲ್ಲವೇನೋ! ಉಕ್ರೈನ್, ಜಾರ್ಜಿಯ ಮುಂತಾದೆಡೆ ನಡೆಸಲಾದ ಕಿತ್ತಳೆ ಕ್ರಾಂತಿ, ಗುಲಾಬಿ ಕ್ರಾಂತಿಯಂತೆ, ಇರಾನಿನಲ್ಲಿ ಈಗ ಹಸಿರು ನಿಶಾನೆಯ ಕ್ರಾಂತಿ. ಇಲ್ಲಿ ಹೊರದೇಶವೊಂದರ ಕೈವಾಡವಿದೆಯೇ ಇಲ್ಲವೇ ಎಂಬುದನ್ನು ವಿವೇಚಿಸಬೇಕಾಗಿದೆ. ಅಮೆರಿಕಾ ಸರ್ಕಾರವು ಇರಾನ್ ಆಡಳಿತಗಾರರನ್ನು ಕೆಳಕ್ಕಿಳಿಸಲು ಎರಡು ಸಾವಿರ ಕೋಟಿ ರೂಪಾಯಿಗಳಷ್ಟು ಡಾಲರುಗಳನ್ನು ತೆಗೆದಿಟ್ಟಿದೆ. ಅದು ಈಗ ವಿಲೇವಾರಿಯಾಗುತ್ತಿರುವಂತಿದೆ. ೫೦ರ ದಶಕದ ಮೊಸ್ಸಾದಿಕ್ ಹಂತಕರು ಈಗ ಮುಸಾವಿಯನ್ನು ಮುಂದುಮಾಡುತ್ತಿದ್ದಾರೆಯೆ? ಕಾದು ನೋಡಬೇಕಾಗಿದೆಯಲ್ಲವೆ?

# ಜಿ.ಟಿ.ಎನ್. ಅಳಿಸಲಾಗದ ನೆನಪು

೧೯೮೦ ನನ್ನ ದೃಷ್ಟಿಯಲ್ಲಿ ಬಹಳ ಮುಖ್ಯ ವರ್ಷ. ವರ್ಷದ ಆರಂಭದಲ್ಲಿಯೇ ಪೂರ್ಣ ಸೂರ್ಯಗ್ರಹಣದ ಸುದ್ದಿ. ಕರ್ನಾಟಕದ ಮೂಲಕ ಚಂದ್ರನ ನೆರಳು ಹಾದು ಹೋಗುವ ವಿಶೇಷ ಸಂದರ್ಭ. ಪತ್ರಿಕೆಗಳಲ್ಲಿ ಅದರ ಕುರಿತು ಬರೆದೆ. ಕೆಲವರು ದೀರ್ಘ ಲೇಖನಗಳನ್ನೇ ಬಯಸಿದರು. ಬಹಳ ಕಷ್ಟಪಟ್ಟು ಬರೆದೆ. ಪ್ರಕಟವಾಗುತ್ತಿದ್ದ ಹಾಗೇ ಪ್ರತಿಕ್ರಿಯೆಗಳು ಬರತೊಡಗಿದವು. ಅವುಗಳಲ್ಲಿ ಒಂದು ಬಹಳ ಕಠೋರವಾಗಿತ್ತು. ಪುರರವಿ ಮತ್ತು ಅಪರವಿ ಶಬ್ದಗಳನ್ನು ಅದಲುಬದಲು ಮಾಡಿದ್ದೇನೆ ಎಂಬುದನ್ನು ತೋರಿಸಿಕೊಟ್ಟಿದ್ದರು. ಅವರೇ ಜಿ.ಟಿ.ಎನ್.



ನಾನು ಬಹಳ ಚಿಕ್ಕವಳಿದ್ದಾಗಲೇ ಅವರ ಪುಸ್ತಕಗಳು ನನಗೆ ಪರಿಚಯವಾಗಿದ್ದವು. ನಮ್ಮ ತಂದೆ ಮರೆಯದೆ ಪ್ರತಿ ಬಾರಿ ಪುಸ್ತಕ ಪ್ರದರ್ಶನಗಳು ಜರುಗಿದಾಗ ಅವರ ಸಣ್ಣ ಸಣ್ಣ ಪುಸ್ತಕಗಳನ್ನು ತಂದುಕೊಡುತ್ತಿದ್ದರು. ಅದೆಷ್ಟು ಬಾರಿ ಓದಿದೆನೋ ಲೆಕ್ಕವಿಲ್ಲ. ಆದ್ದರಿಂದ ಅವರ ಪತ್ರ ಬಂದಾಗ ಸಂತೋಷವೂ ಆಯಿತು; ಭಯವೂ ಆಯಿತು. ಇನ್ನೂ ಎಂತೆಂತಹ ತಪ್ಪುಗಳನ್ನು ಮಾಡುತ್ತಿದ್ದೇನೋ ಎನ್ನಿಸಿತು. ಆಗ ನಮ್ಮ ತಂದೆಯವರು ಹೇಳಿದ ಮಾತು – ''ಅವರು ಆಮೂಲಾಗ್ರವಾಗಿ ಓದಿಯೇ ಬರೆದಿದ್ದಾರೆ. ಒಂದೇ ಒಂದು ಸಣ್ಣ ತಪ್ಪು – ಅದೂ ಅನುವಾದದಲ್ಲಿ ಮಾತ್ರ, ಎಂದರೆ ಮೆಚ್ಚುಗೆಯೇ ಎಂದು ಭಾವಿಸಿಕೋ.'' ಈ ಮಾತು ಅಕ್ಷರಶಃ ನಿಜ ಎಂದು ತಿಳಿಯಲು ನನಗೆ ಎರಡು ದಶಕಗಳು ಬೇಕಾದವು.

ಮುಂದೆ ಬಹಳ ವರ್ಷ ನಾನು ಹೆಚ್ಚಾಗಿ ಬರೆಯಲಿಲ್ಲ. ಸಂಶೋಧನಾ ಪ್ರಬಂಧವೊಂದು ನನ್ನ ಎಲ್ಲ ಸಮಯವನ್ನೂ ಕಬಳಿಸಿತು. ಸುಮಾರು ೧೫ ವರ್ಷದ ಹಿಂದೆ ಪ್ರೊ|| ಎಲ್. ಎಸ್. ಶೇಷಗಿರಿರಾಯರು (ಆಗ ಕನ್ನಡ ಪುಸ್ತಕ ಪ್ರಾಧಿಕಾರದ ಅಧ್ಯಕ್ಷರು) ಗೆಲಿಲಿಯೋನ ಜೀವನ ಚರಿತ್ರೆ ಬರೆದುಕೊಡಲು ಕೇಳಿದರು. ಸುಮಾರು ಆರು ತಿಂಗಳು ಶ್ರಮಿಸಿ ಬರೆದುಕೊಟ್ಟೆ. ನನ್ನ ಕೆಲಸ ಮುಗಿಯಿತು ಎಂದುಕೊಂಡೆ. ಆದರೆ ಅದೇ ಆರಂಭವಾಯಿತು. ಒಂದು ತಿಂಗಳಲ್ಲಿ ಪರಿಶೀಲಕರಿಂದ ವಿಮರ್ಶೆ ಬಂದಿತು. ಪ್ರತಿಯೊಂದು ಪುಟದಲ್ಲೂ ಕೆಂಪು ಶಾಯಿ ಗುರುತುಗಳು. ಎಡಭಾಗದ ಖಾಲಿ ಹಾಳೆಯಲ್ಲಿ ಸಲಹೆಗಳು, ತಿದ್ದುಪಡಿಗಳು. ನನಗೆ ಆಶ್ಚರ್ಯವಾಯಿತು. ಪರಿಶೀಲಕರ ಹೆಸರು ಗೋಪ್ಯವಂತೆ. ಪುಟ ತಿರುಗಿಸಿದಂತೆ ಅಲ್ಲೊಂದು ಇಲ್ಲೊಂದು ಪದ್ಯಗಳೂ ಕಂಡುಬಂದವು. ಕ್ರಮೇಣ ಕೆಂಪು ಗುರುತುಗಳು ಕಡಿಮೆಯಾದವು. ಅತ್ಯುತ್ತಮ ನಿರೂಪಣೆ, ಅತಿ ಸೂಕ್ತವಾದ ವಿವರಣೆ – ಹೀಗೆ ಅನೇಕ ಚಿಕ್ಕ ಟಿಪ್ಪಣಿಗಳು ಕಂಡವು.

ಇಲ್ಲಿದೆ ಒಂದು ಪದ್ಯ –

*ನೀನು ಆಕಾಶವನ್ನೇಕೆ ನೋಡಬೇಕು ?*<br>
*ಅದು ಅಲ್ಲಿ ಇರುವುದರಿಂದ !*<br>
*ನೀನೇರಬಲ್ಲೆಯಾ ನಾನೇರುವೆತ್ತರಕೆ ಎಂದು ಸವಾಲು ಹಾಕುವುದರಿಂದ*<br>
*ಜ್ಞಾನವಿಧಾನಗಳ ಖನಿ ಅದಾಗಿರುವುದರಿಂದ*<br>
*ನಿನ್ನ ತವರೇ ಅದಾಗಿರುವುದರಿಂದ !*

ಈ ಟಿಪ್ಪಣಿಗಳನ್ನು ಓದಿ ಜೀರ್ಣಿಸಿಕೊಳ್ಳುತ್ತಿದ್ದಂತೆ ಒಂದು ಪತ್ರ ಬಂದಿತು. ತಮ್ಮ ಹೆಸರು ಗೋಪ್ಯವಾಗಿಡಬೇಕು ಎಂಬ ನಿಯಮವನ್ನು ಉಲ್ಲಂಘಿಸಿ ನನಗೊಂದು ಮೆಚ್ಚುಗೆ ಪತ್ರ ಬರೆದಿದ್ದರು, ಜಿ.ಟಿ.ಎನ್. ''ವಿಷಯಗಳ ನಿರೂಪಣೆ ಬಹಳ ಆಳವಾಗಿದೆ; ಇನ್ನೂ ಎಷ್ಟು ಪುಸ್ತಕ ಬರೆದಿದ್ದೀರಿ ? ಇದು ನಿಮ್ಮ ಮೊದಲ ಪುಸ್ತಕವಾಗಿದ್ದರೆ ಅಭಿನಂದನೆಗಳು. ತಾವು ಯಾವ ವಿಷಯದಲ್ಲಿ ಸಂಶೋಧನಾ ಪ್ರಬಂಧ ಬರೆದಿದ್ದೀರಿ ?'' ಎಂದು ಪ್ರಶ್ನಿಸಿದ್ದರು. ಅದು ನನ್ನ ಜೀವಮಾನದ ಅತಿ ಆನಂದದ ದಿನ.

ಮುಂದೆ ನಮ್ಮ ನಡುವೆ ಪತ್ರ ವ್ಯವಹಾರ ಅವಿರತವಾಗಿ ನಡೆಯಿತು. ನನ್ನ ಲೇಖನ ಪ್ರಕಟವಾದ ಎರಡು ಮೂರು ದಿನಗಳಲ್ಲಿ ಪೋಸ್ಟ್‌ಕಾರ್ಡ್ ಬಂದೇಬರುತ್ತಿತ್ತು. ವಿಮರ್ಶೆ, ಸಲಹೆ, ಮೆಚ್ಚುಗೆ ಎಲ್ಲವೂ ದೊರಕುತ್ತಿತ್ತು. ಫೋನ್‌ನಲ್ಲಿ ಚರ್ಚೆ ನಡೆಸಿದ್ದೂ ಉಂಟು. 'ಸಫಾರಿ ಎಂಬ ಲಕ್ಷುರಿ' ಎಂಬ ಪುಸ್ತಕಕ್ಕೆ ಅವರು ಬರೆದದ್ದು – ''ಈ ಬಹು ಆಸಕ್ತಿ ಬಂಡಿಯನ್ನೇರಿ ಪುಕ್ಕಟೆ ಸವಾರಿ ಮಾಡಿ ನಿಮ್ಮ ಎಲ್ಲ ಅನುಭವಗಳನ್ನೂ ಬುದ್ಧಿಗತ ಮಾಡಿಕೊಂಡು ಆನಂದಿಸಿದ್ದೇನೆ.'' ಈ ಪುಸ್ತಕಕ್ಕೆ ಅವರಿಂದ ಮಾತ್ರವಲ್ಲ, ತಾಯಿ ಲಕ್ಷ್ಮೀದೇವಿಯವರದ್ದೂ ಆಶೀರ್ವಚನ ದೊರಕಿತು. (ಶ್ರೀಮತಿ ರುಕ್ಮಿಣಿ ಮಾಲಾ ಅವರೂ ಬರೆದಿದ್ದರು.) ಮೈಸೂರಿಗೆ ಅವರ ಮನೆಗೆ ಹೋಗುವ ಸಂದರ್ಭವೇ ಸಿಗದಂತಾಗಿದ್ದು ನನ್ನ ದುರದೃಷ್ಟ.

ನನ್ನ ಎಲ್ಲ ಪುಸ್ತಕಗಳಿಗೂ, ಲೇಖನಗಳಿಗೂ ಅವರಿಂದ ಸುದೀರ್ಘ ವಿಮರ್ಶೆ ದೊರಕಿದೆ. ಪಠ್ಯಪುಸ್ತಕಕ್ಕಾಗಿ ರಚಿಸಿದ್ದನ್ನೂ ಅವರಿಗೆ ಕಳಿಸಿದ್ದೆ. ಅವರು ಸೂಚಿಸಿದ್ದ ತಿದ್ದುಪಡಿಗಳನ್ನು ಪಠ್ಯಪುಸ್ತಕ ಸಮಿತಿ ಅಳವಡಿಸದೇ ಇದ್ದದ್ದು ನಮ್ಮ ವಿದ್ಯಾರ್ಥಿಗಳ ದೌರ್ಭಾಗ್ಯ.

ವ್ಯಕ್ತಿಗತ ಭೇಟಿಯಾಗಿದ್ದು ಎರಡೇ ಬಾರಿ. ಒಮ್ಮೆ ತಾರಾಲಯಕ್ಕೆ ಬಂದಿದ್ದರು; ಇನ್ನೊಮ್ಮೆ ನವಕರ್ನಾಟಕ ಜ್ಞಾನವಿಜ್ಞಾನ ಕೋಶದ ಬಿಡುಗಡೆ ಸಮಾರಂಭ ಎಂದು ನೆನಪು. ಆಗ ಅವರಿಗೆ ಗೆಲಿಲಿಯೋ ಪುಸ್ತಕದಲ್ಲಿ ಅವರು ಬರೆದಿದ್ದ ಪುಟ್ಟ ಪದ್ಯಗಳ ಬಗ್ಗೆ ಕೇಳಿದ್ದೆ. ಅವುಗಳನ್ನು ಪುಸ್ತಕದಲ್ಲಿ ಅಳವಡಿಸಲು ಪ್ರಯತ್ನಿಸಿದೆ. ಆದರೆ ಸಂಪಾದಕರು ಒಪ್ಪಲಿಲ್ಲ ಎಂದೆ. ''ಅದು ಆ ಉದ್ದೇಶಕ್ಕೆ ಬರೆದುದಲ್ಲ; ಬಹಳ ಸುಂದರವಾಗಿ ಬರೆದಿದ್ದನ್ನು ಓದಿ ನನ್ನ ಮನಸ್ಸಿನಿಂದ ತಾನೇ ತಾನಾಗಿ ಹೊಮ್ಮಿದ ಭಾವನೆಗಳಷ್ಟೇ'' ಎಂದರು. ನನಗೆ ಇನ್ಯಾವ ಕಿರೀಟ ಬೇಕು ?

'ಬಾನಿಗೊಂದು ಕೈಪಿಡಿ' ಪುಸ್ತಕವನ್ನೋದಿ ಅವರು ಬರೆದದ್ದು– ''ಅಂದು ಬಿ. ಜಿ. ನಾರಾಯಣ್, ನಂಗಪುರಂ, ಆರ್.ಎಲ್.ಎನ್., ಸಿ.ಎನ್.ಎಸ್. ಮೊದಲಾದ ಪ್ರಾತಃಸ್ಮರಣೀಯರು ತೋರಿದ ಹಾದಿಯಲ್ಲಿ ''ಹಕ್ಕಿ ಹಾರುತಿದೆ'' ನೋಡಿದೆನು; ''ಒಡೆದಿದೆ ದಿಙ್ಮಂಡಲಗಳ ಅಂಚ; ಆಚೆಗೆ ಚಾಚಿದೆ ತನ್ನಯ ಚುಂಚ'' – ಈ ಹಕ್ಕಿ ಈಗ ಖುದ್ದು ನೀವೇ.''

ಆಗಲೇ ಅವರು ತೀರಿಕೊಂಡು ವರ್ಷವಾಯಿತೇ ಎನ್ನಿಸುತ್ತದೆ. ಅವರ ಕೈಬರಹದ ಪತ್ರಗಳು ಅಲ್ಲಿ ಇಲ್ಲಿ ಇಣಿಕಿ ನೋಡುತ್ತಿರುತ್ತವೆ. ಯಾವುದಾದರೂ ಕ್ಲಿಷ್ಟ ನಿರೂಪಣೆ ಸಮಸ್ಯೆಯಾದಾಗ ಅವರ ಪುಸ್ತಕಗಳು ಮಾತ್ರವಲ್ಲದೆ ಪತ್ರಗಳೂ ಪರಿಹಾರ ಒದಗಿಸುತ್ತವೆ. ಧೃವ ಅಲ್ಲ ಧ್ರುವ ಎಂದು ತಿದ್ದಿದವರು ಅವರೇ. ರಿಕ್ತವಾದ ಅವರ ಸ್ಥಾನವನ್ನು ತುಂಬುವವರೇ ಇಲ್ಲ. ಅವರು ಸೂಚಿಸಿದ್ದ ಇನ್ನೊಂದು ಉದಾಹರಣೆ – ''ಪರದೇಶದ ನಗರಗಳ ಹೆಸರಿಗೆ ಷಷ್ಠೀ ವಿಭಕ್ತಿ ಪ್ರತ್ಯಯ ಸೇರಿಸುವಾಗ ನಗರದ ಎಂದು ಸೇರಿಸಬೇಕು; ಉದಾಹರಣೆ : ಪಾಡುವಾದ ಬದಲು ಪಾಡುವಾ ನಗರದ. ಕಾಪುವಾದ ಪದವನ್ನು ಕಲ್ಕತ್ತಾದ ಎಂಬ ಷಷ್ಠೀ ವಿಭಕ್ತಿ ಪ್ರಕಾರ ಓದದೇ ನಮ್ಮ ಘನ ವಿಮರ್ಶಕರೊಬ್ಬರು ಕಾಪು+ವಾದ ಎಂದೋದಿ ಈ ಹೊಸ ವಾದ ಯಾವುದು ಎಂದು ನನ್ನ ವಿರುದ್ಧ ಕತ್ತಿ ಝಳಪಿಸಿದ್ದರು !''

ಅವರು ಕಳಿಸಿಕೊಡುತ್ತಿದ್ದ ಹಾಳೆ ಸೂಚಿಗಳಲ್ಲಿಯ 'ಅತ್ರಿ ಸೂನು' ಉಕ್ತಿಗಳನ್ನು ಆಗಿಂದಾಗ್ಗೆ ಮನನ ಮಾಡಿಕೊಳ್ಳುವುದೊಂದೇ ನಾನು ಅವರಿಗೆ ಸಲ್ಲಿಸಬಹುದಾದ ನಮನ.

**ಡಾ|| ಬಿ. ಎಸ್. ಶೈಲಜಾ**<br>
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್,<br>
ಬೆಂಗಳೂರು - ೫೬೦ ೦೦೧

# ಸೊಳ್ಳೆ ಹೇಳಿದ ಕಥೆ

**ಗುಂಡುರಾವ್ ದೇಸಾಯಿ, ಮಸ್ಕಿ**



**ಬೇ**ಸಿಗೆ ಸೆಖೆ, ಕರೆಂಟ್ ಇಲ್ಲದ ರಾತ್ರಿ, ಜೊತೆಗೆ ಸೊಳ್ಳೆಕಾಟ ಅಂದ್ರ ಕೇಳಬೇಕೆ ? ಸುಖ ನಿದ್ರೆ ಸಾಧ್ಯಾನಾ ? ಸಂಕಟ ತಡೆಕೊಳ್ಳಲಾರದೆ ನಿತ್ಯಕಾಯಕದಂತೆ ಬೀಸಿ ಕೊಳ್ಳುವುದರ ಜೊತೆಗೆ ಸೊಳ್ಳೆಗಳ ಸಂಹಾರ ಕಾರ್ಯ ನಡೆದಿರಬೇಕಾದ್ರೆ ಸೊಳ್ಳೆಯೊಂದು ಝುಂಯ್‌ಗುಡುತ್ತಾ ಕೈಗೆ ಸಿಗದೆ ನನ್ನ ಸಹನೆಯನ್ನು ಪರೀಕ್ಷೆ ಮಾಡತೊಡಗಿತು. ಅದರ ಉಪಟಳಕ್ಕೆ ರೋಸಿಹೋಗಿ ಸೊಳ್ಳೇನ ಒಂದೇ ಹೊಡೆತಕ್ಕೆ ಮುಗಿಸುವ ಯೋಚನೆ ಮಾಡಿ ಅದರ ಬರುವಿಕೆಗಾಗಿ ಹೊಂಚುಹಾಕಿ ಕುಳಿತೆ. ಅಷ್ಟರಲ್ಲಿ ''ಹಲೋ'' ಎಂಬ ಸಣ್ಣಧ್ವನಿ ಕೇಳಿಬಂತು.

ಸುತ್ತಲೂ ಗಮನಿಸಿದೆ. ಹೆಂಡತಿ ಗೊರಕೆಯಲ್ಲಿದ್ದಳು. ಕನವರಿಸುತ್ತಿರಬೇಕೆಂದು ಮತ್ತೆ ಕಾಡಿಸುತ್ತಿದ್ದ ಸೊಳ್ಳೆಯನ್ನು ಹುಡುಕತೊಡಗಿದೆ. ''ಹಲೋ ದೇಸಾಯಿ'' ಅಂತ ಮತ್ತೆ ಅದೇ ಕ್ಷೀಣಧ್ವನಿ ಕೇಳಿಬಂತು. ಎಷ್ಟು ಧೈರ್ಯ ನನ್ನವಳಿಗೆ; ಎದುರಿಗಾಗದು ಎಂದು ಕನಸಿನಲ್ಲಿ ಹೆಸರಿಟ್ಟು ಅದೂ ಏಕವಚನದಲ್ಲಿ ಸಂಬೋಧಿಸುತ್ತಿದ್ದಾಳಲ್ಲ! ಎಂದು ಸಿಟ್ಟಿನಿಂದ ಬಗಿಯಲು ಮುಂದಾದೆ.

''ಹಾ..ಹಾ.. ಅವನನ್ನೇಕೆ ಹೊಡೀತೀರಾ. ಹಲೋ ಇಲ್ಲಿ, ಗುಂಯ್ ಅಂತ ಸದ್ದು ಬರುತ್ತಿದೆಯಲ್ಲ ನಿಮ್ಮ ಕಣ್ಮುಂದೆ ನೋಡಿ'' ಎಂಬ ಧ್ವನಿ ಬಂದತ್ತ ಕಣ್ಣಾಡಿಸಿದೆ. ಅದೇ ಪುಟ್ಟ ಸೊಳ್ಳೆ ಅದುವರೆಗೂ ಅಲ್ಲಲ್ಲಿ ಕುಳಿತು ಕಿರುಕುಳ ಕೊಟ್ಟದ್ದು. ನಂಬಲಾಗಲಿಲ್ಲ. ಮತ್ತೆ ಅತ್ತಿತ್ತ ನೋಡಿದೆ ''ನಾನೇ ದೇಸಾಯಿಜಿ, ಅತ್ತಿತ್ತ ಯಾಕ ನೋಡತಿರಾ ?'' ಎಂದು ಕಣ್ಣಿನ ನೇರಕ್ಕೆ ಬಂದು ತಾನೆ ಮಾತಾಡಿದ್ದು ಎಂದು ತನ್ನ ಪುಟ್ಟ ಕೊಂಡಿಯನ್ನು ಅಲ್ಲಾಡಿಸಿ ತೋರಿಸಿತು. ಊಹಿಸಿಕೊಳ್ಳಲಾಗಲಿಲ್ಲ. ಕ್ರಿಮಿ-ಕೀಟ ಪ್ರಾಣಿ ಪಕ್ಷಿಗಳು ಮಾತಾಡೋ ವಿಷಯಾನ ಪಂಚತಂತ್ರ ಕಥೆಗಳಲ್ಲಿ ಕೇಳಿದ್ದೆ ಅಷ್ಟೆ. ಕನಸೆ ಇರಬೇಕು ಎಂದು ಚಿವುಟಿಕೊಂಡು ಖಾತ್ರಿ ಪಡಿಸಿಕೊಂಡೆ. ''ನೀವು ಏನೂ ಯೋಚಿಸಬೇಡಿ, ನಿಮಗ ಸಂದರ್ಶನ ಕೊಡಾಕ ಬಂದೀನಿ'' ಎಂದಿತು ಮೆಲು ಧ್ವನಿಯಲ್ಲಿ. ನಾನು ಇನ್ನೂ ಗಾಬರಿಯಾದೆ.

''ದೇಸಾಯಿಜಿ, ಹಾಂಗ್ಯಾಕ ಕೂತ್ರಿ. ಕೆಲ ಸತ್ಯ ಸಂಗತಿ ಗಳನ್ನೂ ತಿಳಿಸಬೇಕೂಂತ ಸ್ಪೆಷಲ್ ಪವರ್ ಪಡಕೊಂಡ ಬಂದೀನಿ'' ಎಂದಿತು.

ಸೊಳ್ಳೆಗಳಿಂದ ನಿತ್ಯ ಕಡಿಸಿಕೊಂಡ ಬಾಧೆಯಿಂದ ಬೇಸತ್ತಿದ್ದ ನಾನು ವಾಸ್ತವಕ್ಕೆ ಮರಳಿ ''ಸಂದರ್ಶನ, ಮಾನವರ ಪೀಡೆಗಳು ನೀವು, ಕಟುಕರು, ನಿಷ್ಕರುಣಿಗಳು, ಏನ್ ಕಿಸ್ಯಾಕ ಬಂದಿರಿ'' ಎಂದೆ ಸಿಟ್ಟಿನಿಂದ.

''ನೀವೇನು ಭಾರಿ ಸಾಚಾಗಳು,'' ಎಂದು ನಿರ್ಭಿಡೆಯಿಂದ ಪ್ರತ್ಯುತ್ತರಿಸಿತು. ''ಯಾಕೆ ಕಾಯಿಲ್ ಹಚ್ಚಿಲ್ಲಾ ?'' ಎಂದು ಕೇಳಿದೆ.

''ಯಾಕ, ಅಲ್ಲಿ ಉರಿತಿಲ್ವಾ ? ನಿಮ್ಮ ಹತ್ರ ಅಂತಹ ಪವರ್‌ಫುಲ್ ಔಷಧಿ ಇದ್ದಿದ್ರ ನಿತ್ಯ ಯಾಕ ಮೈ ಕೆರಕೋತ ಒದ್ದಾಡತ್ತಿದ್ರಿ ?'' ಎಂದು ಕಪಾಳಕ ಕೊಟ್ಟಾಂಗ ಮಾತಾಡಿತು.

ನನ್ನ ಬೆಪ್ಪುತನ ತೋರಗೊಡದೆ ''ಉರಿಯುತ್ತಿರೋದು ಗೊತ್ತು. ಕರೆಂಟ್ ಬರಲಿ ತಡಿ. ಗುಡ್‌ನೈಟ್ ಟರ್ಬೋ ರಿಫಿಲ್ ಹಚ್ಚತಿನಿ.''

''ಏನ್ ಲಾಗಾ ಹೊಡದ್ರೂ, ನಮ್ಮ ನಿರ್ನಾಮ ಸಾಧ್ಯ ಇಲ್ಲ ದೇಸಾಯಿಜಿ. ಒಬ್ಬರ ಸತ್ರ ರಕ್ತ ಬೀಜಾಸುರರಂಗ ಸಾವಿರಾರು ಮಂದಿ ರೆಡಿಯಾಗಿರತೀವಿ ನಿಮ್ಮ ಜೀವ ತಿನ್ನಾಕ. ಅಂತಹ ಸ್ಪೆಶಲ್ ವರ ಪಡದಿನಿ.''

''ವರನ... ಹ್ಹ ಹ್ಹ ಹ್ಹ... ಹೊಸಗಿಹಾಕಿದ್ರ ಸಾಯಿತೀರಿ ನಿಮಗ ಯಾರ ಕೊಟ್ರೂ ವರ ?''

''ನಿಮ್ಮಗಳ ಡಾಂಭಿಕತೆ, ಬೂಟಾಟಿಕೆಗೆ ಬೇಸತ್ತಿರೋ ಆ ಭಗವಂತನೆ.''

ನಗುತ್ತ ''ಓ ಓ ಹೋ... ಹೌದಾ ! ಹಾಗಾದರ ಏನಂತ ವರ ಪಡದಿರಿ'' ಎಂದು ಗೇಲಿ ಮಾಡಿದೆ.

''ಯಾವ ಕಾಲಕ್ಕೂ ನಮ್ಮ ಕುಲ ಜೀವಂತವಾಗಿರಲಿ, ವೈಭವಯುತ ಬಂಗಲೇ, ಎ.ಸಿ.ರೂಮು, ಕೊಚ್ಚೆ, ಮರುಭೂಮಿ ಇರಲಿ. ಎಲ್ಲವು ನಮ್ಮ ತಾಣಗಳಾಗಿರಲಿ.'' ಸೊಳ್ಳೆಯ ಮಾತನ್ನು ಗಂಭೀರವಾಗಿ ತೆಗೆದುಕೊಳ್ಳದೆ ''ಹೌದು, ನಾವು ಅಂತಹ ಏನ್ ಅನ್ಯಾಯ ಮಾಡಿವಿ ?'' ಎಂದು ಕೇಳಿದೆ ಸಹಜವಾಗಿ.

''ಏನ್ ಮಾಡಿರ್‍ಯಾಸ ? ಏನೇನು ಮಾಡಿಲ್ಲ ಅಂತ ಕೇಳಿ. ಸ್ವಾರ್ಥಿಗಳು ನೀವು. ಬದುಕ್ರಿ ಬದುಕಲು ಅವಕಾಶ ಕೊಡ್ರಿ ಅಂತ ಕೇಳ್ತೀವಿ. ಉಳಿದ ಜೀವ ಸಂಕುಲಕ್ಕೂ ಜೀವ ಇದೆ ಎಂಬುದನ್ನು ಮರಿತಿರಿ. ಪರಿಸರನ ಮನಸೋಇಚ್ಛೆ ಬಳಸಿಕೋತ ಅದರ ಜೊತೆಗೆ ಇಡಿ ಜೀವ ಸಂಕುಲಕ್ಕೆ ಉಳಿಗಾಲ ಇಲ್ಲದ್ಹಾಂಗ ಮಾಡಿರಿ'' ಎಂದು ಉಗಿದಾಗ, ಅಲ್ಲಿಯವರೆಗೂ ವ್ಯಂಗ್ಯದಿಂದ ಮಾತಾಡುತ್ತಿದ್ದ ನಾನು ಮೌನ ವಹಿಸಿದೆ. ಸೊಳ್ಳೆ ಹೇಳುವಲ್ಲಿ ಸತ್ಯ ಇದೆ ಅನಸಾಕಹತ್ತಿತು.

ಸೊಳ್ಳೆ ಮುಂದುವರೆದು ''ನಿಮಗೆಲ್ಲ ಬುದ್ಧಿಕಲಿಸೋಣ ಅಂತಾನೆ ಎಲ್ಲಾ ಜೀವಸಂಕುಲಗಳು ಸಭೆ ಸೇರಿದ್ವಿ. ಮಾನವರ ಕಿರುಕುಳಕ್ಕೆ ಎಷ್ಟು ದಿನ ಇನ್ನೂ ಉಳಿದಿರುತ್ತೇವೆಯೋ ಗೊತ್ತಿಲ್ಲ. ಆದರೆ ವಿನಾಕಾರಣ ಹಿಂಸಿಸುತ್ತಿರುವ ಮಾನವರ ಮೇಲೆ ಸೇಡು ತೀರಿಸಿಕೊಳ್ಳೋದು ಮಾತ್ರ ಬಿಡಬಾರದು. ಹಸಿರನ್ನು ನಾಶಮಾಡಿ ನಮ್ಮ ಅಸ್ತಿತ್ವವನ್ನು ಹಾಳುಮಾಡಿದ ತಪ್ಪಿಗೆ ಮಾನವರು ಪ್ರಾಯಶ್ಚಿತ್ತ ಅನುಭವಿಸಲೇಬೇಕು. ಅದಕ್ಕಾಗಿ ತಪಸ್ಸು ಮಾಡಿ ಭಗವಂತನನ್ನು ಒಲಿಸಿಕೊಂಡು ಒಬ್ಬರನ್ನು ಪ್ರಬಲರಾಗಿಸೋಣ. ಅವರಿಂದ ಮಾನವರಿಗೆ ನೆಮ್ಮದಿ ಇಲ್ಲದಾಂಗ ಆಗಿರಬೇಕು ಅಂತ ಚರ್ಚೆ ನಡೀತು.''

ಸೊಳ್ಳೆ ಹೇಳುವ ವಿಷಯದಲ್ಲಿ ಕುತೂಹಲ ಉಕ್ಕಿ ''ಆಮೇಲೆ'' ಎಂದೆ. ''ಮನುಷ್ಯನನ್ನು ನಿರಂತರವಾಗಿ ಪೀಡಿಸುವ ಶಕ್ತಿ

ಯಾರಿಗಿದೆ, ಆ ಧೈರ್ಯ ಯಾರ ಮಾಡತೀರಿ'' ಎಂಬ ಚರ್ಚೆ ಬಂದಾಗ ತೋಳ, ನರಿ, ಮೊಲ ಮೊದಲಾದ ಬುದ್ಧಿಜೀವಿವರ್ಗ ''ಈ ಕೆಲಸ ನಮ್ಮಿಂದ ಆಗದು'' ಎಂದವು. ಉಳಿದ ಯಾವ ಪ್ರಾಣಿಗಳೂ ಮುಂದೆ ಬಾರದಿದ್ದಾಗ ಸಿಂಹರಾಜ ತನಗೆ ತೊಂದರೆ ಕೊಟ್ಟಿದ್ದ ನೊಣಗಳನ್ನು ನೆನಪಿಸಿಕೊಂಡು ಅವುಗಳಿಗಿಂತ ರಕ್ತಹೀರುವ ಸೊಳ್ಳೆಗಳೇ ಈ ಕೆಲಸಕ್ಕೆ ಸೂಕ್ತ ಎಂದಾಗ ಎಲ್ಲರೂ ಗೊಳ್ಳೆಂದು ನಕ್ಕಿದ್ದುಂಟು. ಸದಾ ನಿರ್ಲಕ್ಷ್ಯಕ್ಕೊಳಗಾಗಿದ್ದ ನಮಗೆ ಈ ಕಾಲಕ್ಕೆ ಅದ್ರೂ ಬೆಲೆ ಸಿಕ್ಕಿತಲ್ಲ ಅಂತ ಸಿಂಹರಾಜ ಹೇಳಿದ ಮಾತಿಗೆ ಒಪ್ಪಿಕೊಂಡೆವು. ಅವನ ಅಪ್ಪಣೆಯಂತೆ ನಕ್ಕವರ ಮೇಲೆ ಪ್ರಾಯೋಗಿಕ ಪರೀಕ್ಷೆ ಕೈಗೊಂಡಾಗ ನಮ್ಮ ಉಪಟಳಕ್ಕ ಸಾಕಾಗಿ ಮೈಯೆಲ್ಲ ಪರಚಿಕೊಂಡು ''ಹೌದು, ಸಿಂಹರಾಜನ ನಿರ್ಧಾರ ಸರಿ ಇದೆ'' ಎಂದು ಒಮ್ಮತ ಸೂಚಿಸಿದವು.''

''ಆಮೇಲೆ ಏನಾಯ್ತು'' ಎಂದೆ.

''ಏನಾಯ್ತು! ತಪಸ್ಸು ಮಾಡಿದಿವಿ. ನಮ್ಮ ಅಚಲ ಭಕ್ತಿಗೆ ಮೆಚ್ಚಿ ಭಗವಂತ ಪ್ರತ್ಯಕ್ಷ ಆದ. ನಮ್ಮ ಉದ್ದೇಶ ತಿಳಿಸಿದ್ವಿ. 'ಆಯ್ತು ನನ್ನ ಸಹಕಾರ ಅದ, ಏನು ಬೇಕು ಕೇಳ್ರಿ' ಎಂದಾಗ ಒಂದಂತೂ ಸೊಳ್ಳೆ ಸಂಕುಲದ ಪ್ರಬಲರನ್ನಾಗಿಸುವ ಬೇಡಿಕೆ ಇಟ್ಟು 'ಮನುಷ್ಯ ಯಾವುದಕ್ಕೂ ವೇದನೆ ಪಡದಿದ್ದರೂ ಸೊಳ್ಳೆಗಳಿಂದ ಒಂದಲ್ಲ ಒಂದು ಯಾತನೆ ಅನುಭವಿಸುವಂತಾಗಲಿ' ಎಂದ್ವಿ.''

''ಹೌದು ತಗೋ ಸೊಳ್ಳೆರಾಯ ನಿನ್ನ ಮಾತಿನಲ್ಲಿ ಸತ್ಯ ಇದೆ'' ಎಂದೆ. ''ಅಷ್ಟೆ ಅಲ್ಲ ದೇಸಾಯಿಜಿ 'ಮಾನವರಿಗೆ ಸಮಸ್ಯೆ ಯಾವುದೇ ಇರಲಿ. ಅದನ್ನು ಪರಿಹರಿಸುವ ಮಾರ್ಗ ಗೊತ್ತಿದ್ದರೂ ಒಗ್ಗೂಡಿ ಪ್ರಯತ್ನಿಸುವ ಸುಬುದ್ಧಿ ಮೂಡದಿರಲಿ' ಎಂದ್ವಿ. ದೇವ್ರು ಎಲ್ಲಾದಕ್ಕೂ ಅಸ್ತು ಅಂದ.

## ಚಕ್ಷು

**ಇರುಳಲ್ಲಿ**
**ಕುರುಡು,**
**ಮಳೆಗಾಲದಲ್ಲಿ**
**ಮಂಜು**
**ಜಗಚ್ಚಕ್ಷು !**

**ಸಿ.ಪಿ.ಕೆ.**
ಮೈಸೂರು

ಹೇಗಿದೆ ಸ್ವಾಮಿ ? ಬುದ್ಧಿಹೀನರು ಎಂದು ನೀವು ಭಾವಿಸಿಕೊಂಡಿರೂ ಉಳಿದ ಜೀವಸಂಕುಲದ ಪವರ್'' ಎಂತು.

ಸೊಳ್ಳೆಯ ಮಾತನ್ನು ಅಲ್ಲಗಳೆಯಲಾಗಲಿಲ್ಲ. ''ಹೌದು ನೋಡಯ್ಯ ಹೊಸತಾಗಿ ಹುಟ್ಟುತ್ತಿರುವ ಎಲ್ಲ ಸಮಸ್ಯೆ ಅನಾಹುತಗಳಿಗೆ ನೈರ್ಮಲ್ಯದ ಕೊರತೆ, ಪರಿಸರ ನಾಶ ಅಂತ ಗೊತ್ತಿದ್ರೂ ನಾವು ಯಾರೂ ಒಗ್ಗಟ್ಟಾಗಿ ಸರಿಪಡಿಸಾಕ ಪ್ರಯತ್ನನ ಮಾಡುತ್ತಿಲ್ಲ'' ಎಂದೆ.

''ಆಗಲಿಕ್ಕೆ ಹಾಂಗ, ಸಾಧ್ಯನ! ಇಲ್ಲ ಬಿಡಿ. ದೇಸಾಯಿಜಿ, ಪ್ಲೇಗು, ಮಲೇರಿಯಾ, ಮೆದುಳುಜ್ವರ ಇವೆಲ್ಲ ಹಳೆವು ಆದವು ಬಿಡಿ. ಕಳೆದ ವರ್ಷದಿಂದ ಚಿಕೂನ್‌ಗುನ್ಯಾ ಇಂಟ್ರೊಡ್ಯೂಸ್ ಮಾಡಿದೆವಲ್ಲ, ಅದು ಹ್ಯಾಂಗನಸ್ತ'' ಅಂದಾಗ ಆ ಬಾಧೆಯಿಂದ ತತ್ತರಿಸಿದ್ದ ನನಗೆ ಮೈ 'ಝುಂ' ಎಂತು. ''ನೆನಸುಬಾರದು ಕಣಯ್ಯ ಸೊಳ್ಳೆರಾಯ, ಅದನ್ನ ಜನಮುದಾಗ, ಎಂತೆಂಥವರ ಸೊಕ್ಕನ್ನ ಮುರಿತಲ್ಲೋ ನಿಮ್ಮ ರೋಗ'' ಎಂದೆ.

''ಆ, ಬ್ಯಾನಿಗೆ ಸ್ಪೆಸಿಫಿಕ್ ಔಷಧ ಕಂಡು ಹಿಡ್ಯಾಕ ಸಾಧ್ಯ ಆಯ್ತಾ.''

''ಇಲ್ಲ ಬಿಡಯ್ಯ, ಅದರ ಹೆಸರ ಬ್ಯಾಡ, ಹೌದು ನೆಕ್ಸ್ಟ್ ಏನ್ ಸ್ಕೇಚ್ ಹಾಕಿರಯ್ಯ'' ಅಂತ ಕೇಳಿದೆ. ಮುಂದಿನ ಅವುಗಳ ಕಾರ್ಯಯೋಜನೆ ತಿಳಿಯಬೇಕು ಎನ್ನುವ ಕುತೂಹಲದಿಂದ. ''ದೇಸಾಯಿಜೀ ನಿಮ್ಮ ಮನದಾಗಿಂದೂ ಅರ್ಥ ಆಗುತ್ತೆ. ಆದ್ರೂ ಕೇಳ್ರಿ. ಏಯ್ಡ್ಸ್ ಅಂತೂ ಎಲ್ಲಾ ಕಡೆ ಪ್ರಬಲವಾಗಿ ಹರಡಾಕತ್ತಾದ. ನೆಕ್ಸ್ಟ್ ಟಾರ್ಗೆಟ್ ಆ ಕಡೆಗೆ ಅದ. ಆ ವೈರಸ್ ಜೊತಿಗೆ ಕಾಂಟ್ರಾಕ್ಟ್ ಮಾಡಿಕೊಳ್ಳಕತಿನಿ.''

''ಏನು ಕಾಂಟ್ರಾಕ್ಟಾ? ಆ ಏಯ್ಡ್ಸ್ ವೈರಸ್ ಜೊತೆಗನಾ !''

''ಹೌದು ಸ್ವಾಮಿ, ಇದು ನಮ್ಮ ಹೊಸ ಪ್ರಯತ್ನ. ಅದು ಸಫಲ ಆಯ್ತು ಅಂದ್ರ ಏಯ್ಡ್ಸ್ ರೋಗಿಯ ರಕ್ತ ಹೀರಿ ಕೂಡಲೇ ಎಲ್ಲರನ್ನೂ ಕಚ್ಚಿ ಏಯ್ಡ್ಸ್ ರೋಗ ಹಚ್ಚಿ, ಇಡೀ ಮನುಕುಲನ ವಿನಾಶ ಮಾಡ್ತಿವಿ'' ಅನ್ನುತ್ತ ಪುಟ್ಟಕೊಂಡಿಯಿಂದ ನಕ್ಕಿತು.

ಭಯ ಉಂಟಾದರೂ ಅದನ್ನು ತೋರಗೊಡದೆ ''ಅಲ್ರೋ, ನೀವು ವಿನಾಕಾರಣ ಸಾಯ್ತಿರಲ್ಲೊ'' ಎಂದು ಜೀವದ ಆಸೆ ತೋರಿಸಿದೆ. ''ನಾನು ನಿಮ್ಮಂಗ ಸೆಂಟಿಮೆಂಟಲ್ ಫೂಲ್ಸ್ ಅಲ್ರೀ ದೇಸಾಯಿಜಿ, ನಮ್ಮ ಬದುಕು ಹೆಚ್ಚಂದ್ರ ಒಂದೆರಡು ದಿನ. ಸಾಯೋದಂತೂ ಗ್ಯಾರಂಟಿ. ಈಗಾಗಲೇ ಅಳಿದ, ಅಳಿಯುತ್ತಿರುವ ಜೀವಸಂಕುಲದ ಪ್ರತಿಜ್ಞೆ ಈಡೇರಿಸಬೇಕಾಗಿದೆ. ನಿಮ್ಮ ಮೋಡಿ ಮಾತಿಗೆ ಮರಳಾಗವ್ರು ಅಂದ್ರಾ ? ಆಯ್ತು ಹೊಸ ಒಪ್ಪಂದ ಆದ ಮೇಲೆ ಬಂದು ಕಾಣತಿನಿ. ಅಲ್ಲಿವರೆಗೂ ಇತ್ತೀಚೆಗೆ ದಕ್ಷಿಣ ಕನ್ನಡದ ಕಡೆ ರೀ ಎಂಟ್ರಿ ಕೊಟ್ಟೆವಲ್ಲ ಆ ಚಿಕೂನ್‌ಗುನ್ಯಾದ ಸೆಕೆಂಡ್ ಡೋಜ್ ಎಂಜಾಯ್ ಮಾಡಿ'' ಎಂದು ಕಚ್ಚಲು ಬಂತು.

ಸಿಟ್ಟಿನಿಂದ ''ಅಳಿಸಿ ಹಾಕ್ತಿನಿ ಮಗನೆ'' ಎಂದು ಸೊಳ್ಳೆ ಬರುವತ್ತ ಬಲವಾಗಿ ಹೊಡೆದೆ. ಅಷ್ಟರಲ್ಲಿ ಕೈಗೆ ಬಲವಾಗಿ ಕಚ್ಚಿದಂತಾಯಿತು. ಅಂತಹ ಯಾತನೆ ಹಿಂದೆ ಎಂದೂ ಅನುಭವಿಸಿರಲಿಲ್ಲ. ಸೊಳ್ಳೆಯ ಚಿಕೂನ್‌ಗುನ್ಯಾದ ಸೆಕೆಂಡ್ ಡೋಜ್ ಭಾರಿ ಎಫೆಕ್ಟಿವ್ ಆಗಿದೆ ಅಂತ ಭಾವಿಸಿ ಕಡಿದ ಕಡೆ ಕಣ್ಣು ತಿಕ್ಕಿಕೊಂಡು ನೋಡಿದೆ. ನನ್ನವಳು ಕೈಯನ್ನು ಕಡಿದು ಅಳುತ್ತಿದ್ದಳು.

ಅವಳ ಬಾತ ಕತ್ತನ್ನು ನೋಡಿದೆ. ಅಲ್ಲಿವರೆಗೂ ಕಂಡಿದ್ದು ಕನಸೆಂದು ಅರ್ಥ ಆಯ್ತು. ಜೊತೆಗೆ ನನ್ನವಳ ಕತ್ತು ಬಾಯೋದಕ್ಕೆ ಕಾರಣವು ತಿಳೀತು. ನಕ್ಕು ಎದ್ದೆ.

''ಸ್ಸಾರಿ ಕಣೆ'' ಎಂದೆ.

''ಇಲ್ರೀ ಮೊದಲು ನನ್ನ ಕ್ಷಮಿಸಿರಿ. ಯಾವನೋ ಕಳ್ಳ ಬಲವಾಗಿ ಹೊಡೆದ, ಕತ್ತಿಗೆ ಕೈ ಹಾಕಿದ್ದನೆಂದು ತಿಳಿದು ಕಚ್ಚಿದಿನ್ರಿ'' ಎಂದ್ಲು.

''ಇರಲಿ ಬಿಡೆ ಅಷ್ಟಕ್ಯಾಕೆ ಕ್ಷಮೆ ಕೇಳೋದು, ಅಬ್ಬಾ : ಸದ್ಯ ಕನಸು ನನಸಲ್ಲ'' ಎಂದು ನಿಟ್ಟುಸಿರು ಬಿಟ್ಟೆ.

ವಾರವಾದ್ರೂ ಬಿಟ್ಟಿಲ್ಲ ನನ್ನವಳು ''ಕ್ಷಮಿಸಿರಿ, ಕ್ಷಮಿಸಿರಿ'' ಅಂತ ಗಂಟುಬಿದ್ದು ನಿತ್ಯ ಕಾಡುವ ಸೊಳ್ಳೆ ತರಹ.

**ಗುಂಡುರಾವ್ ದೇಸಾಯಿ**
ಮಸ್ಕಿ, ರಾಯಚೂರು - ೫೮೪ ೧೨೪

## ಓದುಗರ ಮತ್ತು ಚಂದಾದಾರರ ಗಮನಕ್ಕೆ

ಕಾಗದ, ಮುದ್ರಣ ಮತ್ತು ನಿರ್ವಹಣಾ ವೆಚ್ಚಗಳ ಹೆಚ್ಚಳದಿಂದಾಗಿ 'ಹೊಸತು' ಚಂದಾದರಗಳನ್ನು ಆಗಸ್ಟ್ ೨೦೦೮ (೦೧-೦೮-೨೦೦೮)ರಿಂದ ಕೆಳಕಂಡಂತೆ ಪರಿಷ್ಕರಿಸಲಾಗಿದೆ.

| | | |
|---|---|---|
| ಒಂದು ವರ್ಷಕ್ಕೆ | ... | ರೂ. ೧೫೦ |
| ಮೂರು ವರ್ಷಗಳಿಗೆ | ... | ರೂ. ೩೫೦ |

೩೧-೦೭-೨೦೦೮ರೊಳಗಾಗಿ ಚಂದಾ ನೀಡುವವರಿಗೆ ಮತ್ತು ಚಂದಾ ನವೀಕರಿಸುವವರಿಗೆ ಹಳೆಯ ದರಗಳು ಅನ್ವಯ (೧ ವರ್ಷಕ್ಕೆ ರೂ. ೧೨೫ ಹಾಗೂ ೩ ವರ್ಷಗಳಿಗೆ ರೂ. ೩೦೦).
ನಿಮ್ಮ ಚಂದಾವನ್ನು ೩೧-೦೭-೨೦೦೮ರೊಳಗಾಗಿ ನೀಡಿ/ನವೀಕರಿಸಿ.
ಹಾಗೆಯೇ, ಹೊಸಬರಿಗೆ ಈ ಪತ್ರಿಕೆಯನ್ನು ಪರಿಚಯಿಸಿ, ಅವರನ್ನು ಚಂದಾದಾರರನ್ನಾಗಿಸಿ, 'ಹೊಸತು' ಪತ್ರಿಕೆಯನ್ನು ಪ್ರೋತ್ಸಾಹಿಸಿ.

ಬಿಡಿ ಪ್ರತಿಯ ಬೆಲೆ (ರೂ. ೧೨)ಯಲ್ಲಿ ಯಾವುದೇ ಬದಲಾವಣೆ ಇಲ್ಲ.

ಓದುಗರು ದಯವಿಟ್ಟು ಸಹಕರಿಸಬೇಕಾಗಿ ವಿನಂತಿ.

- ವ್ಯವಸ್ಥಾಪಕ

ಲಿಂಗ ತಾರತಮ್ಯದ ಮಾತು ಇಂದು ನಿನ್ನೆಯದಲ್ಲ. ಆದರೆ ೨೧ನೆಯ ಶತಮಾನದಲ್ಲೂ ನಮ್ಮ ಮಹಿಳೆಯರು ಆ ಬಗ್ಗೆ ಹೋರಾಟ ಮಾಡಬೇಕಾಗಿ ಬಂದಿರುವುದು ಒಂದು ವಿಪರ್ಯಾಸವೇ ಹೌದು. ಇಂದಿಗೂ ನಮ್ಮಲ್ಲಿ ಗಂಡು ಹೆಣ್ಣನ್ನು ಸಮಾನ ಲಿಂಗಗಳೆಂದು ಕಾಣುತ್ತಿಲ್ಲ, ಹಾಗೆ ನಡೆಯಿಸಿಕೊಳ್ಳುತ್ತಿಲ್ಲ. ಹೆಣ್ಣು ಹುಟ್ಟಿದರೆ ಇಂದಿಗೂ ತಲೆ ಮೇಲೆ ಕೈಯಿಟ್ಟು ಅಯ್ಯೋ ಕೆಟ್ಟೆ ಎಂದು ಕುಳಿತುಕೊಳ್ಳುವ ಅದೆಷ್ಟೋ ಪಾಲಕರು ನಮ್ಮಲ್ಲಿದ್ದಾರೆ. ಇನ್ನು ಮಹಿಳೆಯನ್ನು ಇಂದಿಗೂ ಎರಡನೆಯ ದರ್ಜೆಯ ಲಿಂಗ ಎಂತಲೆ ಸಂಬೋಧಿಸಲಾಗುವುದು. ಈ ಗಂಡು ಹೆಣ್ಣಿನ ಮಧ್ಯೆ ಇರುವ ಈ ಅಸಮಾನತೆಯ ಕಂದಕವನ್ನು ಮುಚ್ಚಲು ಪ್ರಯತ್ನಿಸಿದವರೆಲ್ಲಾ ಸೋತುಹೋದರು. ನಮ್ಮದು ಮೂಲಭೂತವಾಗಿ ಪುರುಷಪ್ರಧಾನ ಸಮಾಜ. ನಮ್ಮಲ್ಲಿ ಕುಟುಂಬದ ಹೊರಗೂ ಮತ್ತು ಒಳಗೂ ಪುರುಷನದೇ ಪ್ರಾಬಲ್ಯ. ಹೀಗಾಗಿ ಮಹಿಳೆ ಅನೇಕ ಬಗೆಯ ಹಕ್ಕು ಮತ್ತು ಅಧಿಕಾರಗಳಿಂದ ವಂಚಿತಳಾಗಿದ್ದಾಳೆ. ಈ ಕಾರಣಕ್ಕಾಗಿಯೆ ಮಹಿಳಾ ಹೋರಾಟ, ಮಹಿಳಾ ಸಂಘಟನೆಗಳು ಉಗಮವಾಗಿವೆ. ಇನ್ನು ನಮ್ಮದು ಸಂಪ್ರದಾಯ ಪ್ರಧಾನ ನೆಲೆಯಾಗಿರುವುದರಿಂದ ಗಂಡಿನ ಹಕ್ಕುಗಳನ್ನು ಪ್ರಶ್ನಿಸುವುದೇ ತಪ್ಪು ಎನ್ನುವ ಭಾವನೆಯನ್ನು ಬೆಳೆಸಿಕೊಂಡು ಬರಲಾಗಿದೆ. ಇದು ಪುರುಷನ ಪಾಲಿಗೆ ವರವಾದರೆ ಮಹಿಳೆಯ ಪಾಲಿಗೆ ಶಾಪವಾಗಿ ಪರಿಣಮಿಸಿದೆ.

# ಸಬಲೀಕರಣ ಆಕೆಯ ಹಕ್ಕು, ಭಿಕ್ಷೆಯಲ್ಲ...!



ಒಂದು ಕಾಲವಿತ್ತು, ಮಹಿಳೆ ಮನೆಯ ನಾಲ್ಕು ಗೋಡೆಗೆ ಮೀಸಲು ಎನ್ನುವ ಅನಧಿಕೃತವಾದ ಫರ್ಮಾನೊಂದು ಪಾಸಾಗಿತ್ತು. ಆಗ ಆಕೆಯ ರಕ್ಷಣೆಗೆ ಅನಿವಾರ್ಯವಾಗಿ ಮುಂದುಮಾಡುತ್ತಿದ್ದ ಆಯುಧವೆಂದರೆ ಕೈ ಉಗುರುಗಳು ಇಲ್ಲಾ ಆಕೆ ತುಸು ಧಾಡಸಿ ಇದಾಳೆ ಅಂತಾದರೆ ಚಪಾತಿ ಮಾಡುವ ಲಟ್ಟಣಿಕೆ ಇಲ್ಲವೆ ಕಸಪೊರಕೆ. ಈಗ ಪರಿಸ್ಥಿತಿ ತುಂಬ ಬದಲಾಗಿದೆ. ಆಕೆ ಈಗ ಮುಂಚಿನಂತೆ ಕೈಲಾಗದವಳು ಎಂದು ಹೇಳಿಸಿಕೊಂಡು ಬದುಕು ಸಾಗಿಸಲಾರಳು. ಒಂದು ಸತ್ಯ ಈಗ ಅವಳಿಗೆ ತಿಳಿದಿದೆ. ಹೆಣ್ಣೂ ಕೂಡ ಆರ್ಥಿಕವಾಗಿ ಸ್ವಾವಲಂಬನೆಯನ್ನು ಸಾಧಿಸಬೇಕಾಗಿದೆ, ಆ ಮೂಲಕ ತಾನೂ ಕೂಡ ಕುಟುಂಬದಲ್ಲಿ ಪುರುಷನಂತೆಯೇ ಅನಿವಾರ್ಯ ಎನ್ನುವುದನ್ನು ಆಕೆ ತೋರಿಸಹೊರಟಿದ್ದಾಳೆ. ಆ ದಿಶೆಯಲ್ಲಿ ಸಾಕಷ್ಟು ಯಶಸ್ವಿಯಾಗಿದ್ದಾಳೆ. ಸೃಷ್ಟಿಯ ಉಗಮದಿಂದಲೂ ಹೆಣ್ಣು ಮತ್ತು ಗಂಡು ಎರಡು ವಿರೋಧಿ ಲಿಂಗಗಳು ಎಂಬಂತೆ ಬಾಳಿವೆ, ಬದುಕಿವೆ. ಈ ಮಾತಿಗೆ ಚರಿತ್ರೆಗಳು, ಐತಿಹ್ಯಗಳು, ಪುರಾಣಗಳು ಸಾಕ್ಷಿಯಾಗಿ ಉಳಿದಿವೆ. ನಾವು ನಮ್ಮ ದೇಶವನ್ನು ಭಾರತಮಾತೆ ಎಂದು ಕರೆಯುತ್ತಲೇ ಅನೇಕ ರೀತಿಯಾಗಿ ಲೂಟಿ ಮಾಡುವಂತೆ, ಹೆಣ್ಣನ್ನು ತಾಯಿ, ತಂಗಿ, ಅಕ್ಕ ಎಂದೆಲ್ಲಾ ಗೌರವಿಸುವ ಜೊತೆಯಲ್ಲೇ ಆಕೆಯನ್ನು ನಿರಂತರವಾಗಿ ಶೋಷಿಸಿಕೊಂಡು ಬರಲಾಗಿದೆ. ಅದು ಮಹಾಕಾವ್ಯಗಳ ಕಾಲದಿಂದಲೂ ನಡೆದುಕೊಂಡು ಬಂದಿದೆ. ರಾಮಾಯಣ ಮತ್ತು ಮಹಾಭಾರತದಲ್ಲಿಯೂ ಒಂದು ಬಗೆಯ ಪುರುಷ ಪ್ರಾಬಲ್ಯ ಎದ್ದು ತೋರುತ್ತದೆ. ಮರ್ಯಾದಾ ಪುರುಷೋತ್ತಮನೆಂದು ಕರೆಯಿಸಿಕೊಳ್ಳುವ ರಾಮ, ತನ್ನ ಪತ್ನಿ ಸೀತೆಯನ್ನು ಅಪಹರಿಸಿದ್ದ ರಾವಣನಿಂದ ಬಿಡಿಸಿಕೊಂಡು ಬಂದನಂತರ ಆಕೆಯ ಪಾವಿತ್ರ್ಯದ ಬಗ್ಗೆ ಸಂಶಯಪಟ್ಟು ಆಕೆಯನ್ನು ಅಗ್ನಿಪರೀಕ್ಷೆಗೆ ಒಳಪಡಿಸಿದ. ಆದರೆ ಇನ್ನೊಂದು ಬದಿಗೆ ಅವಳನ್ನು ಬಿಟ್ಟಿರುವಷ್ಟೇ ಅವಧಿ ಅವನೂ ಒಬ್ಬಂಟಿಯಾಗಿಯೇ ಇದ್ದ. ಹೀಗಾಗಿ ಸೀತಾ ಅಗ್ನಿಪರೀಕ್ಷೆಗೆ ಒಳಪಡುವಾಗಲೆ ಇನ್ನೊಂದು ಬದಿಗೆ ರಾಮನ ಅಗ್ನಿಪರೀಕ್ಷೆಯೂ ಸಾಧ್ಯವಾಗಬೇಕಿತ್ತು. ಆದರೆ ಹಾಗಾಗದೆ ಆತ ಮರ್ಯಾದಾ ಪುರುಷೋತ್ತಮನಾಗಿ ಉಳಿದ. ಅದೇ ರೀತಿಯಾಗಿ ಮಹಾಭಾರತದಲ್ಲಿ ಧರ್ಮರಾಜ ಜೂಜಾಡುವ ವೇಳೆಯಲ್ಲಿ ದ್ರೌಪದಿಯನ್ನು ಒಂದು ಮಾತು ಕೇಳದೆಯೇ ಜೂಜಾಟದಲ್ಲಿ ಸೋತ. ಆದರೂ ಮಹಾಕಾವ್ಯಗಳು ಅವನನ್ನು ಧರ್ಮರಾಜ ಎಂದೇ ಕರೆದವು. ಇನ್ನು ಗಂಡ ಮರಣ ಹೊಂದಿದ ನಂತರ ಹೆಂಡತಿ ಯಾದವಳು ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳಲು ಆತನ ಚಿತೆಯೊಂದಿಗೆ ಜೀವಂತ ದಹನವಾಗುವ ಪದ್ಧತಿಯನ್ನು ಜಾರಿಗೊಳಿಸಿ ಆಕೆಯನ್ನು ಜೀವಂತ ವಾಗಿಯೇ ಸುಟ್ಟು ಆ ಜಾಗೆಯಲ್ಲಿ ಮಹಾಸತಿ ಕಲ್ಲು ಎನ್ನುವುದನ್ನು ನೆಟ್ಟು ಘನಕಾರ್ಯವನ್ನು ನೆರವೇರಿಸುತ್ತಿದ್ದರು. ಇಲ್ಲಿಯೂ ಒಂದು ಬಗೆಯ ಕುಟಿಲತೆ ಎದ್ದುತೋರುತ್ತದೆ. ಹೆಂಡತಿ ಮರಣ ಹೊಂದಿದರೆ ಆತ ಇನ್ನೊಂದು ಮದುವೆ ಯಾಗಿ ಹಾಯಾಗಿರಬಹುದು. ಆತ ಪತ್ನೀವ್ರತ ಪ್ರೂವ್ ಮಾಡುವ ಅವಶ್ಯಕತೆಯಿಲ್ಲ. ಅದೇನಿದ್ದರೂ ಈ ದೇಶದ ಅಭಾಗಿನಿಗೆ ಮಾತ್ರ. ಹೀಗಾಗಿ ನೀವು ಈ ದೇಶದ ಒಟ್ಟು ವಿಸ್ತಾರ ೩೨,೮೭,೨೬೩ ಚದರ ಕಿಲೋಮೀಟರ್ ಸುತ್ತಿದರೂ ನಿಮಗೆಲ್ಲೂ ಮಹಾಪತಿಕಲ್ಲು ಸಿಗುವುದಿಲ್ಲ. ಇದೇ ಈ ಪುರುಷಪ್ರಧಾನ ಸಮಾಜದ ಗತ್ತು.

ಈಚೆಗೆ ನಮ್ಮಲ್ಲಿ ಮಹಿಳಾ ಸಬಲೀಕರಣದ ಬಗ್ಗೆ ಮಾತನಾಡಲಾಗುತ್ತಿದೆ. ಆ ದಿಶೆಯಲ್ಲಿ ಸರಕಾರವು ಕೂಡ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುತ್ತಿದೆ. ಇಂದು ಗ್ರಾಮೀಣ ಭಾಗದ ಮಹಿಳೆಯರಲ್ಲಿಯೂ ತಮ್ಮ ಕರ್ತೃತ್ವ ಶಕ್ತಿಯ ಬಗ್ಗೆ ಅರಿವು ಮೂಡತೊಡಗಿದೆ. ಇಂದು ಅವರು ತಮ್ಮದೇ ಆದ ಸ್ವ-ಸಹಾಯ ಗುಂಪುಗಳನ್ನು ಕಟ್ಟಿಕೊಳ್ಳುವ ಮೂಲಕ ತಮ್ಮ ಆರ್ಥಿಕ ಸ್ವಾಯತ್ತತೆಯನ್ನು ಸಾಧಿಸಿದ್ದಾರೆ. ಮನು ಹೇಳುವ ಬಾಲ್ಯದಲ್ಲಿ ತಂದೆಯ ಆಶ್ರಯ, ಹರೆಯದಲ್ಲಿ ಗಂಡನ ಆಶ್ರಯ ಮತ್ತು ಮುಪ್ಪಿನಲ್ಲಿ ಮಕ್ಕಳ ಆಶ್ರಯ ಎನ್ನುವ ಮಾತು ಸುಳ್ಳಾಗಿದೆ. ಆಕೆ ಇಂದು ತನ್ನನ್ನು ತಾನು ಅರಿಯುವ ಮೂಲಕ ತನ್ನ ಆತ್ಮಗೌರವದ ಬಗ್ಗೆ ಮಾತನಾಡತೊಡಗಿದ್ದಾಳೆ. ಆಕೆ ಇಂದು ಪುರುಷ ಸಮಾಜದಿಂದ ಕನಿಕರವನ್ನು ಬಯಸುವುದಿಲ್ಲ, ಬದಲಾಗಿ ಹಕ್ಕನ್ನು ಬಯಸುತ್ತಾಳೆ. ಇಂದು ಅನೇಕ ಮಹಿಳೆಯರು ತಮ್ಮದೇ ಆದ ಪತ್ತಿನ ಸಹಕಾರಿ ಸಂಘಗಳನ್ನು ಸ್ಥಾಪಿಸಿಕೊಂಡು ಬದುಕನ್ನು ರೂಪಿಸಿಕೊಳ್ಳತೊಡಗಿದ್ದಾರೆ.

ಈಚೆಗೆ ರಾಜ್ಯ ಸರಕಾರ ಬಡಕುಟುಂಬದ ಹೆಣ್ಣು ಮಗುವಿಗಾಗಿ ಭಾಗ್ಯಲಕ್ಷ್ಮಿ ಎನ್ನುವ ಯೋಜನೆಯೊಂದನ್ನು ಜಾರಿಗೊಳಿಸಿತು. ಆ ಯೋಜನೆಯು ನಿಜವಾಗಿಯೂ ಅರ್ಥಪೂರ್ಣವಾಗಿದೆ. ಅಂದರೆ ಸುಮಾರು ೨೦ ಸಾವಿರ

**ಎಸ್. ಬಿ. ಜೋಗುರ**

ರೂಪಾಯಿಯನ್ನು ಬಡ ಕುಟುಂಬದ ಹೆಣ್ಣು ಮಗುವಿನ ಹೆಸರಲ್ಲಿ ಡಿಪಾಜಿಟ್ ಇಟ್ಟು ಮುಂದೆ ಅದರ ವಿವಾಹದ ಸಂದರ್ಭದಲ್ಲಿ ಅದು ನೆರವಿಗೆ ಬರುವಂತೆ ಬಳಸಿಕೊಳ್ಳಲಾಗುವುದು. ಯೋಜನೆಯ ಮೂಲ ಆಶಯವೇನೋ ಒಳ್ಳೆಯದು ಆದರೆ ಇದನ್ನು ಪಡೆಯುವ ಫಲಾನುಭವಿಗಳದ್ದೇ ಚಿಂತೆ. ಯಾಕೆಂದರೆ ಬಡವರಿಗಾಗಿರುವ ಇಂಥ ಯೋಜನೆಗಳು ನಿಜವಾಗಿಯೂ ಬಡವರಾದವರಿಗೆ ಸಲ್ಲಿದರೆ ಸೂಕ್ತ.

ಸಬಲೀಕರಣ ಎನ್ನುವ ಪದವನ್ನು ೧೯೭೦ರ ದಶಕದಲ್ಲಿ ಲ್ಯಾಟಿನ್ ಅಮೆರಿಕೆಯಲ್ಲಿ ವ್ಯಾಪಕವಾಗಿ ಮೊದಲಬಾರಿಗೆ ಬಳಸಿರುವುದು ತಿಳಿದುಬರುತ್ತದೆ. 'ಎಂಪವರ್‌ಮೆಂಟ್' ಎನ್ನುವ ಇಂಗ್ಲಿಷ್ ಭಾಷೆಯ ಪದವನ್ನು ಕನ್ನಡದಲ್ಲಿ ಸಬಲೀಕರಣ ಇಲ್ಲವೆ ಸಶಕ್ತೀಕರಣ ಎಂದು ತರ್ಜುಮೆ ಮಾಡಲಾಗಿದೆ. ಈ ಪದಕ್ಕೆ ಶಕ್ತಿ ಕೊಡು, ಅಧಿಕಾರ ನೀಡು, ಸಮರ್ಥರನ್ನಾಗಿ ಮಾಡು ಎನ್ನುವ ಅರ್ಥವಿವರಣೆ ನೀಡಲಾಗುವುದು. ಇಲ್ಲಿ ಶಕ್ತಿ ಎನ್ನುವುದನ್ನು ಅಧಿಕಾರ ಎನ್ನುವ ಹಿನ್ನೆಲೆಯಲ್ಲಿಯೂ ಬಳಸಲಾಗಿದೆ. ಸಾಮಾನ್ಯವಾಗಿ ಸಬಲೀಕರಣ ಎನ್ನುವುದನ್ನು ಅಶಕ್ತರಲ್ಲಿ ಜಾಗೃತಿಯನ್ನುಂಟುಮಾಡಿ ತಮಗೆ ಬೇಕಾಗಿರುವುದನ್ನು ಗಿಟ್ಟಿಸಿಕೊಳ್ಳಲು ಅವರನ್ನು ಸಮರ್ಥರನ್ನಾಗಿ ಮಾಡುವುದೆಂಬ ಅರ್ಥದಲ್ಲಿ ಬಳಸಲಾಗುತ್ತದೆ. ಪಾಲೋ ಫ್ರೆಯರ್ ಅವರು ತಮ್ಮ ಜನಪ್ರಿಯ ಶಿಕ್ಷಣದ ಚಳುವಳಿಯಲ್ಲಿ ಈ ಪದವನ್ನು ಮೊದಲಬಾರಿಗೆ ೧೯೭೦ರ ದಶಕದಲ್ಲಿ ಬಳಸಿದರು. ಮಹಿಳಾ ಜಾಗೃತೀಕರಣದ ಹಿನ್ನೆಲೆಯಲ್ಲಿ ಅವರು ಈ ಸಬಲೀಕರಣ ಎನ್ನುವ ಪದವನ್ನು ಪ್ರಯೋಗಿಸಿದರು. ಸಬಲೀಕರಣ ಎನ್ನುವುದರ ಬಗ್ಗೆ ಅನೇಕ ಚಿಂತಕರು ತಮ್ಮದೇ ಆದ ರೀತಿಯಲ್ಲಿ ವ್ಯಾಖ್ಯೆಗಳನ್ನು ನೀಡಿರುವರು :

ಶ್ರೀಲತಾ ಬಾಟ್ಲಿವಾಲಾ ಅವರು ಹೇಳುವ ಹಾಗೆ ''ಪ್ರಚಲಿತ ಅಧಿಕಾರ ಸಂಬಂಧಗಳನ್ನು ಹೋಗಲಾಡಿಸಿ ಅಧಿಕಾರ ಮತ್ತು ಸಂಪನ್ಮೂಲಗಳ ಮೇಲೆ ಹಿಡಿತ ಸಾಧಿಸುವ ಪ್ರಕ್ರಿಯೆಯೇ ಸಬಲೀಕರಣ.''

ಸೋರಸನ್ ಮತ್ತು ಪಾಲ್‌ಸನ್ ಅವರು ಸಬಲೀಕರಣ ಎನ್ನುವುದು ಈ ಕೆಳಗಿನ ಕೆಲವು ಪ್ರಮುಖ ಅಂಶಗಳನ್ನು ಒಳಗೊಂಡಿದೆ ಎನ್ನುತ್ತಾರೆ :

೧. ಸ್ವನಿಯಂತ್ರಣ
೨. ತಮ್ಮ ಅಭಿವೃದ್ಧಿ ತಾವೇ ಮಾಡಿಕೊಳ್ಳುವುದು
೩. ಆಸ್ತಿ ಹಕ್ಕನ್ನು ಪಡೆಯುವುದು
೪. ತಮ್ಮದೇ ಆದ ಕಾರ್ಯಸೂಚಿ ಹೊಂದುವುದು
೫. ಪರಾಧೀನ ಸ್ಥಿತಿಯಿಂದ ಹೊರಬರುವುದು.

ಈ ಮೇಲಿನ ಕೆಲವು ವ್ಯಾಖ್ಯೆಗಳನ್ನು ಅಧ್ಯಯನ ಮಾಡಿದಾಗ ಸಬಲೀಕರಣವು ಕೆಲ ಪ್ರಮುಖ ಅಂಶಗಳನ್ನು ಒಳಗೊಂಡಿದೆ ಎಂದು ತಿಳಿದುಬರುವುದು.

**ಸಬಲೀಕರಣದ ಮುಖ್ಯಾಂಶಗಳು**

೧. ಮಹಿಳೆಯರಿಗೆ ಪೂರಕವಾದ ನಿಲುವನ್ನು ಬಹಿರಂಗವಾಗಿ ಘೋಷಿಸುವುದು.

೨. ಲಿಂಗ ಸಂಬಂಧಗಳು ಸಾಮಾಜಿಕ ಸೃಷ್ಟಿತ ಎಂದು ಪ್ರತಿಪಾದಿಸುವುದು.

೩. ಲಿಂಗ ಸಂಬಂಧಗಳನ್ನು ಬದಲಾಯಿಸುವುದು ಸಾಧ್ಯ ಎಂದು ನಂಬುವುದು.

೪. ಧಾರ್ಮಿಕ, ಸಾಂಸ್ಕೃತಿಕ, ಜಾತಿ, ವರ್ಗದಂತಹ ಸಂಗತಿಗಳನ್ನು ಲಿಂಗಸಂಬಂಧವು ಒಳಗೊಂಡಿದೆ.

೫. ಮಹಿಳೆಯರ ಸ್ಥಾನಮಾನ ಮತ್ತು ಪರಿಸ್ಥಿತಿಯನ್ನು ಕುರಿತು ವಿವರ ನೀಡುವುದು.

ಈ ಮೇಲಿನ ಸಂಗತಿಗಳ ಮೂಲಕ ಸಬಲೀಕರಣವು ಮಹಿಳೆಯರ ಸ್ಥಾನಮಾನಗಳ ಸುಧಾರಣೆಯಲ್ಲಿ ಈ ಕೆಳಗಿನ ನಾಲ್ಕು ಪ್ರಮುಖ ಕಾರ್ಯಗಳನ್ನು ನಿರ್ವಹಿಸುವುದು.

**ಸಬಲೀಕರಣದ ಕಾರ್ಯಗಳು**

೧. ಮಹಿಳೆಯರ ಸ್ಥಿತಿ ಸುಧಾರಣೆ
೨. ಪರಾಧೀನತೆಗೆ ಕಾರಣ ಅರಿಯುವುದು
೩. ಸ್ವಾಯತ್ತತೆ ಮತ್ತು ಸ್ವಾಭಿಮಾನ ಮೂಡಿಸುವುದು
೪. ಸ್ವತಂತ್ರವಾಗಿ ಬದುಕು ಸಾಗಿಸಲು ನೆರವು.

ಸಬಲೀಕರಣ ಎನ್ನುವುದು ಅಸಮರ್ಪಕ ಮತ್ತು ಅಸಮಾಧಾನವಾದ ಅಧಿಕಾರದ ಹಂಚಿಕೆಯನ್ನು ಸರಿದೂಗಿಸುವುದಾಗಿದೆ ಮತ್ತು ಹಾಗೆ ಮಾಡುವಲ್ಲಿ ಬೇಕಾದ ಸಾಮರ್ಥ್ಯವನ್ನು ಗಳಿಸಿಕೊಳ್ಳುವ ಇನ್ನೊಂದು ಮುಖವಾಗಿದೆ. ಈ ಸಬಲೀಕರಣವು ಅತಿ ಪ್ರಮುಖವಾಗಿ ಎರಡು ಮುಖಗಳನ್ನು ಒಳಗೊಂಡಿದೆ. ಒಂದನೆಯದು ವ್ಯಕ್ತಿಗತ ನೆಲೆಯಾದರೆ ಇನ್ನೊಂದು ಸಂಘಟಿತ ನೆಲೆಯಾಗಿದೆ. ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಪಾತ್ರಗಳ ಬದಲಾವಣೆಯೇ ಸಬಲೀಕರಣ. ಮಹಿಳಾ ಚಿಂತನೆಯನ್ನು ಕೂಡ ಇದು ಒಳಗೊಂಡಿದೆ. ಇನ್ನೊಂದು ರೀತಿಯಲ್ಲಿ ಇದನ್ನು ಆತ್ಮಜಾಗೃತಿ ಪ್ರಕ್ರಿಯೆ ಎಂದು ಕರೆದರೂ ತಪ್ಪಿಲ್ಲ. ಸಬಲೀಕರಣದಲ್ಲಿ ರಾಜಕೀಯ ಹೋರಾಟವೂ ಅಡಕವಾಗಿದೆ. ಹಾಗಾಗಿ ಇದು ಕೆಲ ಪ್ರಮುಖ ಬದಲಾವಣೆಗಳನ್ನು ತರಲಿದೆ ಎಂದು ನಂಬಲಾಗಿದೆ. ಅವು –



**ಚೌಕಟ್ಟು**

ಮದುವೆ
ಗಂಡ, ಹೆಂಡತಿ
ಮಕ್ಕಳು, ಮೊಮ್ಮಕ್ಕಳು
ಪ್ರೀತಿ ಸಂಬಂಧಗಳು
ಸ್ವಾರ್ಥಗಳ
ಚೌಕಟ್ಟಿನಲ್ಲಿ ಕಟ್ಟಿಟ್ಟ
ಕಲಾಕೃತಿ

ಸುಮಂಗಲ

* ಸಾಮಾಜಿಕ ಸುಭದ್ರತೆಯ ಭಾವನೆ.
* ಬದುಕನ್ನು ರೂಪಿಸಿಕೊಳ್ಳುವ ಸಾಮರ್ಥ್ಯ.
* ಸಾರ್ವಜನಿಕ ರಂಗದಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸುವುದು.
* ಕೌಟುಂಬಿಕ ನೆಲೆಯಲ್ಲಿ ನಿರ್ಧಾರ ಮತ್ತು ಅಧಿಕಾರ ಚಲಾವಣೆ

**ಸಬಲೀಕರಣ ಕಾರ್ಯಕ್ರಮಗಳು**

೧೯೭೦ರ ಸಂದರ್ಭದಲ್ಲಿ ಮಹಿಳೆ ಅಧಿಕಾರದಿಂದ ಹಕ್ಕುಗಳಿಂದ ವಂಚಿತಳಾಗಿ ಬದುಕುತ್ತಿದ್ದಳು. ಅವಳನ್ನು ಸಬಲಳನ್ನಾಗಿ ಮಾಡುವುದು ಹೇಗೆ ಎನ್ನುವ ವಿಷಯದ ಚಿಂತನೆ ನಡೆದುದರ ಪರಿಣಾಮವೇ ಈ ಸಬಲೀಕರಣ ಪರಿಕಲ್ಪನೆಯ ಉಗಮ. ೧೯೮೦ರ ದಶಕದಲ್ಲಿ ಕೆಲ ಮಹಿಳಾ ಸಂಘಟನೆಗಳು ಮಹಿಳಾ ಸಬಲೀಕರಣವನ್ನು ತಮ್ಮ ಹೋರಾಟದ ಮುಖ್ಯ ಪ್ರಣಾಳಿಕೆಯನ್ನಾಗಿಸಿಕೊಂಡವು. ಹಾಗಾಗಿಯೆ ನೈಲಾ ಕಬೀರ್ ಅವರು ಮಹಿಳಾ ಸಂಘಟನೆಗಳು ನಡೆಸುತ್ತಾ ಬಂದ ಹೋರಾಟದ ಗರ್ಭದಿಂದ ಮೂಡಿಬಂದ ಪರಿಭಾವನೆಯೇ ಈ ಸಬಲೀಕರಣ ಎಂದಿರುವರು. ಮಹಿಳೆಯರ ಅಭಿವೃದ್ಧಿಗಾಗಿ ಸರಕಾರಗಳು ರೂಪಿಸುವ ಕಾರ್ಯಕ್ರಮಗಳನ್ನು ಸಾಮಾನ್ಯವಾಗಿ ಸಬಲೀಕರಣ ಎಂದು ಕರೆಯಲಾಗುವುದು.

ಇನ್ನು ಸರಕಾರ ತನ್ನ ಕಾರ್ಯಕ್ರಮದ ಪಟ್ಟಿಯನ್ನು ಪ್ರಕಟಿಸಿಬಿಟ್ಟರೆ ಅದು ಸಬಲೀಕರಣ ಆದಂತಲ್ಲ. ಯಾಕೆಂದರೆ ಆ ಯೋಜನೆಗಳು ಪರೋಕ್ಷವಾಗಿ ಪುರುಷ ಪ್ರಾಬಲ್ಯದ ಪರಂಪರೆಯ ನೆಲೆಯನ್ನು ಗಟ್ಟಿಗೊಳಿಸುವ ಕಾರ್ಯ ಎಸಗುತ್ತವೆ. ಒಂದು ಕಾರ್ಯಯೋಜನೆ ಸಬಲೀಕರಣ ಎಂದು ಕರೆಯಿಸಿಕೊಳ್ಳಬೇಕಾದರೆ ಅಲ್ಲಿ ಅತಿ ಮುಖ್ಯವಾಗಿ ಆತ್ಮಜಾಗೃತಿಯ ಸಂಗತಿ ಇರಬೇಕು, ತುಳಿತಕ್ಕೆ ಒಳಗಾದವರಿಗೂ ಹಿತಾಸಕ್ತಿಗಳಿರುತ್ತವೆ ಎನ್ನುವ ನಂಬುಗೆಯಿರಬೇಕು ಇದು ಸಾಧ್ಯವಾಗಬೇಕಾದರೆ ಸಂಘಟನೆ ಮತ್ತು ಹೋರಾಟ ಎರಡೂ ಮುಖ್ಯ. ಇಂದು ಅನೇಕ ಮಹಿಳಾ ಸಂಘಟನೆಗಳು, ಸರಕಾರಿ ಮತ್ತು ಅರೆಸರಕಾರಿ ಹಾಗೂ ಸ್ವಯಂಸೇವಾ ಸಂಸ್ಥೆಗಳು ಮಹಿಳೆಯರ ಸಬಲೀಕರಣಕ್ಕಾಗಿ ಯತ್ನಿಸುತ್ತಿವೆ. ಈ ಸಬಲೀಕರಣದ ಮೂಲಕ ಆತ್ಮಪ್ರಜ್ಞೆ ಇಲ್ಲವೇ ಜಾಗೃತಿಯ ಜೊತೆಗೆ ಅಧಿಕಾರ ಸಂಬಂಧಗಳಲ್ಲಿ ಪರಿವರ್ತನೆಯನ್ನು ತರುವ ಕಾರ್ಯವೂ ಜರುಗಬೇಕಾಗಿದೆ. ಕ್ಯಾರೋಲಿನ್ ಮೋಸರ್ ಎನ್ನುವ ಮಹಿಳೆ ಮಹಿಳೆಯ ವೈಯಕ್ತಿಕ ಬೆಳವಣಿಗೆಗೆ ಹೆಚ್ಚು ಒತ್ತುಕೊಟ್ಟು ಮಾತನಾಡುತ್ತಾ ಸಂಪನ್ಮೂಲಗಳ ಮೇಲೆ ನಿಯಂತ್ರಣ ಹೊಂದುವುದೇ ಸಬಲೀಕರಣದ ಮುಖ್ಯ ಸಾಧನ ಎಂದಿರುವರು. ಮುಂದುವರೆದು ಮಹಿಳೆಯರು ಸ್ವಾವಲಂಬನೆ ಮತ್ತು ಆಂತರಿಕ ಶಕ್ತಿಯನ್ನು ಹೆಚ್ಚಿಸಿಕೊಳ್ಳುವುದೇ ಸಬಲೀಕರಣ ಎಂದಿರುವರು. ಮಹಿಳಾ ಸಬಲೀಕರಣ ಈ ಕೆಳಗಿನ ಅಂಶಗಳನ್ನು ಒಳಗೊಂಡಿರಬೇಕು :

ಸಬಲೀಕರಣ
↓
ಸ್ವಾವಲಂಬನೆ ಮತ್ತು ಸಂಪನ್ಮೂಲಗಳ ನಿಯಂತ್ರಣ
↓
ಸಮಾನತೆ ಮತ್ತು ಹಕ್ಕುಗಳು
↓
ಆತ್ಮವಿಶ್ವಾಸ ಮತ್ತು ಉತ್ಪಾದನಾ ಸಾಮರ್ಥ್ಯ
↓
ಜಾಗೃತಿ ಮತ್ತು ಅಧಿಕಾರ ಸಂಬಂಧಗಳ ಪ್ರಶ್ನೆ

ಸಬಲೀಕರಣ ಎನ್ನುವುದು ಇಂದು ಅಭಿವೃದ್ಧಿಯ ಗುರಿಯಾಗಿ ಪರಿಣಮಿಸಿದೆ. ಸಮಾಜದ ಅಂಚಿನಲ್ಲಿರುವ ವಂಚಿತರು, ದಲಿತರು, ಮಹಿಳೆಯರು ಹೋರಾಟ ನಡೆಸುತ್ತಿರುವುದು ಅಧಿಕಾರ ಸಂಬಂಧಗಳನ್ನು ಕುರಿತು ಎನ್ನುವುದು ಸ್ಪಷ್ಟವಾಗಿದೆ. ಸಬಲೀಕರಣವು ಮೂಲಭೂತವಾಗಿ ತುಳಿತಕ್ಕೆ ಒಳಗಾದವರಿಗೆ ಮತ್ತು ಅಧಿಕಾರದಿಂದ ವಂಚಿತರಾದವರಿಗೆ ಅದನ್ನು ಒದಗಿಸಿಕೊಡುವ ಪ್ರಕ್ರಿಯೆಯಾಗಿದೆ. ಸಬಲೀಕರಣವು ಜನತೆ ಸ್ವಾಯತ್ತರಾಗಲು, ಸ್ವಾವಲಂಬಿಗಳಾಗಲು ಕರೆ ನೀಡುತ್ತದೆ. ಆದರೆ ಸರಕಾರದ ಕಾರ್ಯಕ್ರಮಗಳನ್ನು ಅವಲಂಬಿಸಿ ಇದನ್ನು ಸಾಧಿಸುವುದು ಅಸಾಧ್ಯ ಎನ್ನುವುದನ್ನು ಪ್ರಯೋಗವಿಲ್ಲದೆಯೂ ತಪ್ಪಾಗಿ ತೀರ್ಮಾನಿಸಿ ಅನೇಕ ಸರಕಾರೇತರ ಸಂಸ್ಥೆಗಳು ಆ ದಿಶೆಯಲ್ಲಿ ಮುಂದಾಗಿ ತಮ್ಮ ಸಮಸ್ಯೆಗಳನ್ನು ತಾವೇ ಪರಿಹರಿಸಿಕೊಳ್ಳಬೇಕು ಎಂದು ಕರೆನೀಡುತ್ತಿವೆ. ಅದರಲ್ಲೂ ಮಹಿಳೆಯರು, ವಂಚಿತರು, ಆ ದಿಶೆಯಲ್ಲಿ ಮುಂದುವರೆಯಬೇಕು ಎನ್ನುವ ಸಂದೇಶಗಳು ಕೇಳಿಬರುತ್ತಿವೆ. ಸರಕಾರದ ಕಾರ್ಯಕ್ರಮದ ಫಲಾನುಭವಿಗಳಾಗದೆ ತಮ್ಮನ್ನು ತಾವು ಸಂಘಟಿಸಿಕೊಂಡು ಆರ್ಥಿಕತೆಯಲ್ಲಿ ಸಹಭಾಗಿಗಳಾಗಿ, ನಿರ್ವಾಹಕರಾಗಿ ಸ್ವಾವಲಂಬಿಗಳಾಗಲು ಕರೆ ನೀಡಲಾಗುತ್ತಿದೆ. ಇದನ್ನು ನಿಜವಾದ ಸಬಲೀಕರಣ ಎಂದು ಹೇಳಲಾಗುವುದು. ಹಾಗೆ ನೋಡಿದರೆ ಸ್ವಾವಲಂಬಿ ಬದುಕಿನ ನಿರ್ಮಾಣವೇ ಸಬಲೀಕರಣವಾಗಿದೆ. ಮನೋರಂಜನ್ ಮೊಹಂತಿಯವರ ಪ್ರಕಾರ ಸಬಲೀಕರಣವು ಅಸ್ತಿತ್ವದಲ್ಲಿರುವ ಸಾಂಸ್ಥಿಕ ಅಧಿಕಾರ ವ್ಯವಸ್ಥೆ ಸಂಬಂಧಗಳ ನೆಲೆಯಲ್ಲಿಯೇ ಬದಲಾವಣೆಯನ್ನು ತರಲು ಪ್ರಯತ್ನಿಸುತ್ತದೆ. ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಶೇ. ೩೩ ಸ್ಥಾನಗಳನ್ನು ಮೀಸಲಾಗಿಟ್ಟಿರುವುದನ್ನೇ ಸಬಲೀಕರಣ ಎನ್ನಲಾಗಿದೆ. ಇದರಿಂದಾಗಿ ಸಮಾಜದಲ್ಲಿ ಅಧಿಕಾರ ಹಾಗೂ ಲಿಂಗ ಸಂಬಂಧಗಳು ಬದಲಾಗುತ್ತಿವೆ ಎನ್ನುವುದು ತೀರಾ ಸಿನಿಕತನದ ಹೇಳಿಕೆಯಾಗಿಬಿಡುತ್ತದೆ. ಒಟ್ಟಾರೆ ಮಹಿಳೆ ಸ್ವಾವಲಂಬನೆ, ಅರಿವು, ಸಾಮುದಾಯಿಕ ಮನೋಭಾವ, ಸಂಘಟನೆ ಕೌಶಲ್ಯ ಮತ್ತು ಸಾಮರ್ಥ್ಯದ ಬಳಕೆ, ಹೊರ ಜಗತ್ತಿನೊಂದಿಗೆ ಸಂಪರ್ಕ ಮುಂತಾದವುಗಳ ಮೂಲಕ ಅಭಿವೃದ್ಧಿ ಹೊಂದುವದನ್ನು ಸಬಲೀಕರಣ ಎಂದು ಹೇಳಬಹುದು. ಒಂದು ದೃಷ್ಟಿಯಲ್ಲಿ ನೋಡಿದಾಗ ಪ್ರಜಾಸತ್ತಾತ್ಮಕವಾದ ವ್ಯವಸ್ಥೆಯಲ್ಲಿ ಇದು ಖಂಡಿತ ಅವಳ ಹಕ್ಕು ಹೊರತು ಭಿಕ್ಷೆಯಲ್ಲ.



### ಲಿಂಗ ತರತಮ ನೀತಿ

ಲಿಂಗ ತಾರತಮ್ಯದ ಮಾತು ಇಂದು ನಿನ್ನೆಯದಲ್ಲ. ಆದರೆ ೨೧ನೆಯ ಶತಮಾನದಲ್ಲೂ ನಮ್ಮ ಮಹಿಳೆಯರು ಆ ಬಗ್ಗೆ ಹೋರಾಟ ಮಾಡಬೇಕಾಗಿ ಬಂದಿರುವುದು ಒಂದು ವಿಪರ್ಯಾಸವೇ ಹೌದು. ಇಂದಿಗೂ ನಮ್ಮಲ್ಲಿ ಗಂಡು ಹೆಣ್ಣನ್ನು ಸಮಾನ ಲಿಂಗಗಳೆಂದು ಕಾಣುತ್ತಿಲ್ಲ, ಹಾಗೆ ನಡೆಯಿಸಿಕೊಳ್ಳುತ್ತಿಲ್ಲ. ಹೆಣ್ಣು ಹುಟ್ಟಿದರೆ ಇಂದಿಗೂ ತಲೆ ಮೇಲೆ ಕೈಯಿಟ್ಟು ಅಯ್ಯೋ ಕೆಟ್ಟೆ ಎಂದು ಕುಳಿತುಕೊಳ್ಳುವ ಅದೆಷ್ಟೊ ಪಾಲಕರು ನಮ್ಮಲ್ಲಿದ್ದಾರೆ. ಇನ್ನು ಮಹಿಳೆಯನ್ನು ಇಂದಿಗೂ ಎರಡನೆಯ ದರ್ಜೆಯ ಲಿಂಗ ಎಂತಲೆ ಸಂಬೋಧಿಸಲಾಗುವುದು. ಈ ಗಂಡು ಹೆಣ್ಣಿನ ಮಧ್ಯೆ ಇರುವ ಈ ಅಸಮಾನತೆಯ ಕಂದಕವನ್ನು ಮುಚ್ಚಲು ಪ್ರಯತ್ನಿಸಿದವರೆಲ್ಲಾ ಸೋತುಹೋದರು. ನಮ್ಮದು ಮೂಲಭೂತವಾಗಿ ಪುರುಷ ಪ್ರಧಾನ ಸಮಾಜ. ನಮ್ಮಲ್ಲಿ ಕುಟುಂಬದ ಹೊರಗೂ ಮತ್ತು ಒಳಗೂ ಪುರುಷನದೇ ಪ್ರಾಬಲ್ಯ. ಹೀಗಾಗಿ ಮಹಿಳೆ ಅನೇಕ ಬಗೆಯ ಹಕ್ಕು ಮತ್ತು ಅಧಿಕಾರಗಳಿಂದ ವಂಚಿತಳಾಗಿದ್ದಾಳೆ. ಈ ಕಾರಣಕ್ಕಾಗಿಯೆ ಮಹಿಳಾ ಹೋರಾಟ, ಮಹಿಳಾ ಸಂಘಟನೆಗಳು ಉಗಮವಾಗಿವೆ. ಇನ್ನು ನಮ್ಮದು ಸಂಪ್ರದಾಯ ಪ್ರಧಾನ ನೆಲೆಯಾಗಿರುವುದರಿಂದ ಗಂಡಿನ ಹಕ್ಕುಗಳನ್ನು ಪ್ರಶ್ನಿಸುವುದೇ ತಪ್ಪು ಎನ್ನುವ ಭಾವನೆಯನ್ನು ಬೆಳೆಸಿಕೊಂಡು ಬರಲಾಗಿದೆ. ಇದು ಪುರುಷನ ಪಾಲಿಗೆ ವರವಾದರೆ ಮಹಿಳೆಯ ಪಾಲಿಗೆ ಶಾಪವಾಗಿ ಪರಿಣಮಿಸಿದೆ. ಇದರ ಪರಿಣಾಮವಾಗಿ ಪುರುಷನ ದುರಹಂಕಾರ ಮತ್ತು ಮಹಿಳೆಯ ಕೀಳರಿಮೆಗಳು ಅಂತಸ್ತು ಮತ್ತು ಪಾತ್ರ ನಿರ್ವಹಣೆಯಲ್ಲಿ ಯಥಾಸ್ಥಿತಿಯನ್ನು ಕಾಪಾಡುವಲ್ಲಿ ಪ್ರೇರಣೆಯಾಗಿವೆ.

ನಾವು ಆರಂಭದ ಸಮಾಜದ ಮೇಲೆ ಒಂದು ಬಾರಿ ದೃಷ್ಟಿಯನ್ನು ಹರಿಸಿದರೆ ಅಲ್ಲಿ ಯಾವುದೇ ಬಗೆಯ ತಾರತಮ್ಯ ನೀತಿಗಳು ಇರಲಿಲ್ಲ. ಅದು ಅತ್ಯಂತ ಮುಕ್ತ ಮತ್ತು ನಿರ್ಬಂಧ ರಹಿತ ಸಮಾಜವಾಗಿತ್ತು. ಆಗ ಮಾತೃಪ್ರಧಾನ ಕುಟುಂಬವೇ ಅಸ್ತಿತ್ವದಲ್ಲಿತ್ತು ಎನ್ನುವುದನ್ನು ಅನೇಕ ಮಾನವಶಾಸ್ತ್ರಜ್ಞರು ಒಪ್ಪಿಕೊಳ್ಳುತ್ತಾರೆ. ಆ ಮಾತೃ ಪ್ರಧಾನ ಕುಟುಂಬ ವ್ಯವಸ್ಥೆ ಪಿತೃಪ್ರಧಾನ ವ್ಯವಸ್ಥೆಗೆ ಜನ್ಮ ನೀಡಿದ ತರುವಾಯದಲ್ಲಿ ಶುರುವಾಯಿತು ಮಹಿಳೆಯ ಸ್ಥಾನಮಾನಗಳ ಅಧಃಪತನ. ಇಲ್ಲಿಯವರೆಗೆ ಆಕೆಗೆ ಮುಕ್ತ ಪರಿಸರ ನೀಡಿದ ಪುರುಷ ಈಗ ಆಕೆಯ ಮೇಲೆ ಅನೇಕ ಬಗೆಯ ನಿರ್ಬಂಧಗಳನ್ನು ವಿಧಿಸಿದನು. ಅವಳನ್ನು ತನ್ನ ಖಾಸಗಿ ಆಸ್ತಿಯ ತರಹ ಅನುಭೋಗಿಸತೊಡಗಿದ. ಅಧಿಕಾರದ ಹಿನ್ನೆಲೆಯಲ್ಲಿ ಪ್ರಧಾನ ಮತ್ತು ಪರಾಧೀನ ಎನ್ನುವ ಕಲ್ಪನೆಗಳು ಬೆಳೆದು ಬಂದವು. ನ್ಯಾಯ ನಿರ್ಣಯಗಳು, ಕಾನೂನುಗಳನ್ನು ರಚಿಸುವವರು ಪುರುಷರೇ ಆಗಿದ್ದರಿಂದ ತಮಗೆ ಪೂರಕವಾಗಿರುವ ಹಾಗೆ ನಿಯಮಗಳನ್ನು ರೂಪಿಸಿಕೊಂಡರು.

ಹಿಂದೆಂದೂ ಇಲ್ಲದ ಪಾತಿವ್ರತ್ಯದ ಕಲ್ಪನೆಗೆ ಹೆಚ್ಚಿನ ಬೆಲೆ ಕೊಡಲು ಶುರು ಮಾಡಿದರು. ಇದು ಮಹಿಳೆಯನ್ನು ಗೃಹಬಂಧಿಯಾಗಿಸುವಲ್ಲಿ ಕಾರಣವಾಯಿತು. ಗಂಡ, ಮನೆ, ಮಕ್ಕಳು ಮಾತ್ರ ಅವಳ ಕಾರ್ಯಕ್ಷೇತ್ರ ಎಂದು ನಿರ್ಧರಿಸಿ ಮನೆಯ ನಾಲ್ಕು ಗೋಡೆಗೆ ಮಾತ್ರ ಅವಳ ಸ್ಥಾನಮಾನವನ್ನು ನಿರ್ಧರಿಸಲಾಯಿತು. ಅವಳನ್ನು ಅನುತ್ಪಾದಕ ಕಾರ್ಯಗಳಲ್ಲಿ ತೊಡಗುವಂತೆ ಮಾಡಿ, ಶಿಕ್ಷಣದಿಂದ ಅವಳನ್ನು ವಂಚಿಸಲಾಯಿತು. ಆ ಮೂಲಕ ಆಕೆಯನ್ನು ಪುರುಷ ಪರಾವಲಂಬಿಯಾಗುವಂತೆ, ಅದರಲ್ಲೂ ತನ್ನನ್ನೆ ಯಾವಾಗಲೂ ಅವಲಂಬಿಸುವಂತೆ ಮಾಡಿದ. ಪರಿಣಾಮವಾಗಿ ಮಹಿಳೆ ಪುರುಷನ ನಿಯಂತ್ರಣದಲ್ಲಿ ಉಳಿಯಬೇಕಾಯಿತು. ಕೇವಲ ಒಂದು ವಸ್ತು ಎನ್ನುವ ಹಾಗೆ ಮಹಿಳೆಯನ್ನು ಪರಿಭಾವಿಸಲಾಯಿತು. ಎಲ್ಲ ಸಂದರ್ಭಗಳಲ್ಲಿ ಪುರುಷ ತನಗೆ ಪೂರಕವಾಗಿ ಅವಳನ್ನು ಬಳಸಿಕೊಳ್ಳತೊಡಗಿದ. ಮುಂದೆ ಮಹಿಳೆ ಅನಿವಾರ್ಯವಾಗಿ ಲಿಂಗಾಧಾರಿತ ಶ್ರಮವಿಭಜನೆ ಮತ್ತು ಲಿಂಗವ್ಯವಸ್ಥೆಯ ಶ್ರಮವಿಭಜನೆಯನ್ನು ಆಧರಿಸಿದ ಪಾತ್ರಗಳನ್ನು, ಕಾರ್ಯಗಳನ್ನು ಖುದ್ದಾಗಿ ಒಪ್ಪಿಕೊಂಡು ಆ ರೀತಿಯಲ್ಲಿಯೆ ಕರ್ತವ್ಯ ನಿರ್ವಹಿಸತೊಡಗಿದಳು. ಇದು ಮಹಿಳೆ ಪುರುಷಪ್ರಧಾನ ವ್ಯವಸ್ಥೆಯನ್ನು ಇನ್ನಷ್ಟು ಬಲಗೊಳಿಸಲು ಕಾರಣವಾಯಿತು. ಪುರುಷ ವ್ಯವಸ್ಥೆಯನ್ನು ಅನುಸರಿಸುವುದು ಕೇವಲ ಕರ್ತವ್ಯವಲ್ಲ, ಬದಲಾಗಿ ಅದೇ ತನ್ನ ಬದುಕಿನ ಮೌಲ್ಯ ಎಂದು ಭಾವಿಸಿದಳು ಅಥವಾ ಭಾವಿಸುವಂತೆ ಮಾಡಿದರು. ಇದು ಪುರುಷನ ದಬ್ಬಾಳಿಕೆಗೆ ಮತ್ತಷ್ಟು ಪುಷ್ಟಿ ನೀಡಿತು. ಈಗ 'ಮನೆಗೆ ಸ್ತ್ರೀ, ಹೊಲಕ್ಕೆ ಪುರುಷ' ಎಂದು ಒಪ್ಪಿಕೊಂಡಂತಾಯಿತು. ಹೀಗೆ ಕೌಟುಂಬಿಕ ಜವಾಬ್ದಾರಿಯ ಹಿನ್ನೆಲೆಯಲ್ಲಿ ರೂಪುಗೊಂಡ ಲಿಂಗವ್ಯವಸ್ಥೆ ಆಧಾರಿತ ಶ್ರಮವಿಭಜನೆ ಮಹಿಳೆಯ ಪ್ರತಿಭೆ, ಸಾಮರ್ಥ್ಯವನ್ನು ಬೆಳೆಯಗೊಡದೆ ಅಡುಗೆಮನೆಗೆ ಮಾತ್ರ ಸೀಮಿತಗೊಳಿಸಿತು. ಆಕೆ ಪುರುಷನ ಗುಲಾಮಳು ಎನ್ನುವಂತೆ ಬದುಕು ಸಾಗಿಸಬೇಕಾಯಿತು. ಪುರುಷನ ಬದುಕು ಪುರುಷನಿಗಾಗಿ, ಜೊತೆಗೆ ತನ್ನ ಬದುಕು ಕೂಡ ಅವನಿಗಾಗಿ ಎನ್ನುವಂತೆ ಜೀವನ ಸಾಗಿಸತೊಡಗಿದಳು. ಈ ಬಗೆಯ ಪುರುಷನ ಒತ್ತಾಸೆ ಮಹಿಳಾ ಸಬಲೀಕರಣದಲ್ಲಿ ಇಂದಿಗೂ ಒಂದು ದೊಡ್ಡ ತೊಡಕಾಗಿದೆ. ಜೊತೆಗೆ ಪತಿಯೇ ಪರದೈವ ಎನ್ನುವ ಹುಸಿ ಮೌಲ್ಯವನ್ನು ಬೆಳೆಸಿ ಅವಳನ್ನು ಒಟ್ಟಾರೆಯಾಗಿ ಶರಣಾಗತಿಯ ಸ್ಥಿತಿಗೆ ತಲುಪುವಂತೆ ಮಾಡಲಾಯಿತು. ಆ ಮೂಲಕ ಲಿಂಗತರತಮ ನೀತಿ ಸಬಲೀಕರಣಕ್ಕೆ ಒಂದು ದೊಡ್ಡ ಅಡೆತಡೆ ಉಂಟುಮಾಡಿತು.



# ಊರ ಉಳಿವಿಗಾಗಿ ಅಳಿದ ಮುಧೋಳದ "ಸಮಗಾರ ಚಂದ"

**ಭಾ**ರತೀಯರ ಬದುಕಿನ ಪರಮಗುರಿ, ಸದ್ಗತಿ ಸಂಪಾದನೆ. ಇವರ ಆತ್ಮಾನುಸಂಧಾನ, ಆದರ್ಶಾನುಸಂಧಾನ, ಮೌಲ್ಯನುಸಂಧಾನಗಳನ್ನು ಈ ಸದ್ಗತಿಗೆ ಸಾಧನಗಳನ್ನಾಗಿ ಪರಿಭಾವಿಸಿಕೊಂಡರು. ನಾಡಿಗಾಗಿ ಊರಿಗಾಗಿ ಸಾಯುವುದು ಅವರ ಪರಮ ಮೌಲ್ಯಗಳಾಗಿದ್ದವು. ಈ ಜೀವ ಕ್ಷಣಿಕವೆಂದು ಹಿಂದಿನವರು ತಿಳಿದು ಈ ಮೌಲ್ಯಕ್ಕಾಗಿ ಪ್ರಾಣಾರ್ಪಣೆಗಾಗಿ ತವಕಿಸುತ್ತಿದ್ದರು. ಅದು ಅವರ ಆದರ್ಶವಾಗಿತ್ತು.

ಕರ್ನಾಟಕದಲ್ಲಿ ಈ ವೀರಸ್ತೋಮ ಮೂರು ವಿಧದ್ದಾಗಿದೆ. ಗ್ರಾಮದ ಪ್ರಜಾಸಮೂಹ, ಗ್ರಾಮ ಕಾಯ್ದಿಟ್ಟ ಪಡೆ, ರಾಜನ ಸೈನ್ಯಪಡೆ. ಇವರೇ ಗ್ರಾಮದ ಪ್ರಜಾಪರಿವಾರ ಸ್ವಯಂ ವೀರರು. ನಾಡಿನ ತುಂಬೆಲ್ಲಾ ಇರುವ ವೀರಗಲ್ಲುಗಳು, ಶಾಸನಗಳು, ರಾಜಪ್ರಮುಖರಿಗೆ ಸೇರಿವೆ. ಆದರೆ ಅವರು ಗಮನಕ್ಕೆ ಬಾರದೆ ಊರಿನ ಗಡಿರಕ್ಷಣೆಗಾಗಿ ಹೋರಾಡಿದ ಸಾಮಾನ್ಯರು ಅಸಾಮಾನ್ಯರಾಗಿದ್ದಾರೆ. ಅವರೆಲ್ಲಾ ದಾಖಲೆಗಳಿಂದ ವಂಚಿತರಾದರೂ ಕೆಲವರು ಅಲ್ಲಲ್ಲಿ ಅಳಿದುಳಿದ ದಾಖಲೆಗಳಲ್ಲಿ ಚರಿತ್ರಾರ್ಹರಾಗಿದ್ದಾರೆ.

ಪ್ರಾಚೀನ ಕಾಲದಲ್ಲಿ ಹಳ್ಳಿಗಳ ಸಮೂಹ ರಕ್ಷಣೆಗೆ ಸರಿಯಾದ ವ್ಯವಸ್ಥೆ ಇರಲಿಲ್ಲ. ಹೀಗಾಗಿ ರಾಜನ ಸೈನ್ಯ ಇಲ್ಲವೇ ನೆರೆಯ ಹಳ್ಳಿಯ ದಾಳಿಕಾರರು ಆಗಾಗ ಊರುಗಳನ್ನು ಲೂಟಿಮಾಡುತ್ತಿದ್ದರು. ''ಊರು ಕೆಟ್ಟು ಸೂರೆ ಮಾಡುವಾಗ ಆರಿಗಾರು ಇಲ್ಲ'' ಎನ್ನುವಂತೆ ಆಗ ಇಡೀ ಗ್ರಾಮವೇ ಚಲ್ಲಾಪಿಲ್ಲಿಯಾಗುತ್ತಿದ್ದಿತು. ಇಂತಹ ಸಮಯದಲ್ಲಿ ಗಟ್ಟಿಯಾಗಿ ನಿಂತು ವೈರಿಗಳನ್ನು ಎದುರಿಸಿ ಊರನ್ನು ರಕ್ಷಿಸುವುದು ವೀರರ ಧೈರ್ಯವಾಗಿತ್ತು. ಆಗ ಸಾಮಾನ್ಯರು ಕೂಡ ಸಿಡಿದು ನಿಂತು ಊರಿಗಾಗಿ ಪ್ರಾಣ ಕಳೆದುಕೊಳ್ಳುತ್ತಿದ್ದರು. ಇಂತಹ ಸಾವು ಪಡೆದು ವೀರಗಲ್ಲಾದವರು ರಾಜರಲ್ಲ, ಬದಲಾಗಿ ಬಹಳಷ್ಟು ಜನಸಾಮಾನ್ಯರು! ಇವರಲ್ಲಿ ಕಾದು ಗೆದ್ದವರಿಗಿಂತ ಮರಣವನ್ನಪ್ಪಿದವರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ತಮ್ಮ ಊರನ್ನು, ಊರಿನ ಗೋವುಗಳನ್ನು, ಹೆಣ್ಣು ಮಕ್ಕಳನ್ನು, ಸಂಪತ್ತನ್ನು ರಕ್ಷಿಸಲು ಜೀವದ ಹಂಗು ತೊರೆದು ಹೋರಾಡಿದ ಅಂದಿನ ಸಾಮಾನ್ಯ ಜನರ ಅಸಾಮಾನ್ಯವಾದ ಆದರ್ಶಗಳು ಇಂದಿಗೂ ನಮಗೆ ಅನುಕರಣೀಯವಾದವುಗಳಾಗಿವೆ.

ಕೊಪ್ಪಳ ಜಿಲ್ಲೆಯ ಯಲಬುರ್ಗಿ ತಾಲ್ಲೂಕು ಕಲೆಗಳ ತವರು, ಕಲಾವಿದರನ್ನು ಪೊರೆವ ತೊಟ್ಟಿಲು. ''ಮುಧೋಳ'' ಎಂಬುದು ಈ ತಾಲ್ಲೂಕಿನಲ್ಲಿರುವ ಒಂದು ಪುಟ್ಟ ಗ್ರಾಮ. ತ್ರಿಲಿಂಗೇಶ್ವರ ದೇವಸ್ಥಾನ ಮುಧೋಳದ ದೇಸಾಯಿಯರಿಂದ ಪ್ರಸಿದ್ಧಿ ಪಡೆದ ಊರು. ಆದರೆ ಇದು ಬರೀ ಇಷ್ಟಕ್ಕೆ ನಿಲ್ಲುವುದಿಲ್ಲ. ಈ ಊರಿನಲ್ಲಿರುವ ಶಾಸನಗಳನ್ನು ಗಮನಿಸಿದರೆ ಇತಿಹಾಸದ ಪುಟಗಳಲ್ಲಿಯ ಘಟನೆಗಳು ಬಿಚ್ಚಿಕೊಳ್ಳುತ್ತವೆ. ಈ ಭಾಗವನ್ನು ಕಲ್ಯಾಣ ಚಾಲುಕ್ಯರ ಮಾಂಡಲೀಕರಾದ ಯಲಬುರ್ಗಿಯ ಸಿಂಧರು ಆಳಿದರು. ಈ ಕಲ್ಯಾಣ ಚಾಲುಕ್ಯರ ಪೂರ್ವದ ಅರಸುಗಳಾದ ರಾಷ್ಟ್ರಕೂಟರು ಕೂಡ ಈ ನಾಡನ್ನಾಳಿದರು. ರಾಷ್ಟ್ರಕೂಟರ ಅರಸನಾದ ಇಮ್ಮಡಿ ಕೃಷ್ಣನು ಬೆಳ್ವಲ ಮುನ್ನೂರನ್ನು ಆಳುತ್ತಿದ್ದನು. ಆಗ ಇವನ ದಯೆಯಿಂದ ಅವನ ಸಾಮಂತ ಅರಸನಾದ 'ಶ್ರೀಮನ್ಸಾಂ' ಎಂಬುವನಿಗೆ ಮುಧೋಳದ ಪ್ರದೇಶವನ್ನು ಪಾಲಿಸಲು ಇಮ್ಮಡಿ ಕೃಷ್ಣನು ನೀಡಿದ್ದನು. ಈ ಸಂದರ್ಭದಲ್ಲಿ ಬೆಳ್ವಲ ೩೦೦ಕ್ಕೆ ಸೇರಿದ ಮುಧೋಳದ ಮೇಲೆ ಕ್ರಿ.ಶ. ೯೭೦ರಲ್ಲಿ ಊರನ್ನು ಸೂರೆಗೊಳ್ಳಲು ರಾಜಪ್ರಮುಖನಾದ ಸನ್ತ್ಯಯ್ಯ ಎಂಬವನು ದಾಳಿಮಾಡುತ್ತಾನೆ. ತನ್ನ ಊರಿನ ಉಳಿವಿಗಾಗಿ ಈ ಊರಿನಲ್ಲಿದ್ದ ಚಪ್ಪಲಿ ಕಾಯಕದಲ್ಲಿ ತೊಡಗಿದ್ದ ಸಮಗಾರ ಚಂದನು ಈ ದಾಳಿಯಿಂದ ವಿಚಲಿತನಾಗಿ ತನ್ನ ಚರ್ಮಗಾರಿಕೆಯನ್ನು ಬದಿಗಿಟ್ಟು, ಈ ಕಾಯಕಕ್ಕಿಂತ, ತನ್ನ ಪ್ರಾಣಕ್ಕಿಂತ, ಊರ ಮಾನ ದೊಡ್ಡದೆಂದು ದಾಳಿ ಮಾಡಿದ ಸನ್ತ್ಯಯ್ಯನೊಂದಿಗೆ ಹೋರಾಡಿ ಪ್ರಾಣಾರ್ಪಣೆ ಮಾಡುತ್ತಾನೆ. ಇಡೀ ಊರಿನ ಜನ ಇದಾವುದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳದೆ ಇರುವಾಗ ಕೆಳವರ್ಗದ ಸಮಗಾರ ಚಂದನಲ್ಲಿ ಹೊಮ್ಮಿದ ವೀರತ್ವವು ಐತಿಹಾಸಿಕವಾದುದು. ಈ ನಾಡಿನ ರಕ್ಷಣೆಯ ಎದುರು ತನ್ನ ಪ್ರಾಣವನ್ನು ತೃಣ ಸಮಾನವೆಂದು ಭಾವಿಸಿ ಚಂದನು ಹುತಾತ್ಮನಾಗುತ್ತಾನೆ.

ಹೀಗೆ ಪ್ರಾಣಾರ್ಪಣೆ ಗೈದ ಸಮಗಾರಚಂದನ ಯಶೋಗಾಥೆ ಹೇಳುವ ವೀರಗಲ್ಲೊಂದು ಈ ಊರಿನ ಮಲ್ಲಿಕಾರ್ಜುನ ದೇವಾಲಯದ ಬಳಿ ಮೂಕ ಸಾಕ್ಷಿಯಾಗಿ ನಿಂತಿದೆ. ಕೆಳವರ್ಗದ ಚಂದನಂತಹ ಅನೇಕರು ಈ ನಾಡಿಗಾಗಿ ಪ್ರಾಣ ನೀಡಿದ್ದಾರೆ. ಅಂತಹವರು ಈ ನಾಡಿನ ತುಂಬೆಲ್ಲಾ ಅಲ್ಲಲ್ಲಿ ಚದುರಿ ಎಲೆಯಮರೆಯ ಫಲದಂತೆ ಇದ್ದಾರೆ. ವೀರಚರಿತ್ರೆ ಹೊಂದಿದ ಈ ಊರಿನ ಒಬ್ಬ ಕೆಳವರ್ಗದ ಸಾಮಾನ್ಯನು ರಾಷ್ಟ್ರಕೂಟ ಅರಸರ ಪ್ರತಿನಿಧಿಗಳ ಜೊತೆಗೆ ಹೋರಾಡಿ ಮಡಿದದ್ದು ಸಾಮಾನ್ಯವಾದ ಸಂಗತಿಯಲ್ಲ. ಅಲ್ಲಿನ ಮುಧೋಳ (ಬಿಜಾಪುರ ಜಿಲ್ಲೆ) ಕವಿರತ್ನ ರನ್ನನಿಗೆ ಜನ್ಮ ನೀಡಿದರೆ, ಈ ತಾಲ್ಲೂಕಿನಲ್ಲಿರುವ ಮುಧೋಳದ ಸಾಮಾನ್ಯನಾಗಿದ್ದ ಸಮಗಾರ ಚಂದನ ಸಾಹಸವು ಪ್ರತೀಕವಾಗಿ ನಿಲ್ಲುತ್ತದೆ. ಆಗಿನ ಈ ವಿಷಯ ಭೂತಕಾಲದ ಭವ್ಯ ಪರಂಪರೆ ವರ್ತಮಾನಕ್ಕೆ ಬೆಳಕು ನೀಡುತ್ತದೆ, ಭವಿಷ್ಯತ್ ಕಾಲಕ್ಕೆ ಬೆಳಕಾಗಿ ನಿಲ್ಲುತ್ತದೆ. ಮುಧೋಳದ ಸಮಗಾರ ಚಂದನೆ, ನಾಡಿಗಾಗಿ ಮಡಿದ ನಿನ್ನ ಸಾಹಸಗಾಥೆಗೆ ನಮ್ಮ ನಮನಗಳು.

**ಕ್ರಿ.ಶ. ೯೭೦ರಲ್ಲಿ ಊರನ್ನು ಸೂರೆಗೊಳ್ಳಲು ರಾಜಪ್ರಮುಖನಾದ ಸನ್ತ್ಯಯ್ಯ ಎಂಬುವನು ದಾಳಿಮಾಡುತ್ತಾನೆ. ತನ್ನ ಊರಿನ ಉಳಿವಿಗಾಗಿ ಈ ಊರಿನಲ್ಲಿದ್ದ ಚಪ್ಪಲಿ ಕಾಯಕದಲ್ಲಿ ತೊಡಗಿದ್ದ ಸಮಗಾರ ಚಂದನು ಈ ದಾಳಿಯಿಂದ ವಿಚಲಿತನಾಗಿ ತನ್ನ ಚರ್ಮಗಾರಿಕೆಯನ್ನು ಬದಿಗಿಟ್ಟು, ಈ ಕಾಯಕಕ್ಕಿಂತ, ತನ್ನ ಪ್ರಾಣಕ್ಕಿಂತ, ಊರ ಮಾನ ದೊಡ್ಡದೆಂದು ದಾಳಿಮಾಡಿದ ಸನ್ತ್ಯಯ್ಯನೊಂದಿಗೆ ಹೋರಾಡಿ ಪ್ರಾಣಾರ್ಪಣೆ ಮಾಡುತ್ತಾನೆ. ಇಡೀ ಊರಿನ ಜನ ಇದಾವುದನ್ನೂ ಲೆಕ್ಕಕ್ಕೆ ತೆಗೆದುಕೊಳ್ಳದೆ ಇರುವಾಗ ಕೆಳವರ್ಗದ ಸಮಗಾರ ಚಂದನಲ್ಲಿ ಹೊಮ್ಮಿದ ವೀರತ್ವವು ಐತಿಹಾಸಿಕವಾದುದು. ಈ ನಾಡಿನ ರಕ್ಷಣೆಯ ಎದುರು ತನ್ನ ಪ್ರಾಣವನ್ನು ತೃಣಸಮಾನವೆಂದು ಭಾವಿಸಿ ಚಂದನು ಹುತಾತ್ಮನಾಗುತ್ತಾನೆ.**



**ಡಾ|| ಮಲ್ಲಿಕಾರ್ಜುನ ಕುಂಬಾರ**
'ವಚನ', ರಾಜೂರ -೫೮೨ ೨೩೦, ತಾ. ರೋಣ; ಜಿಲ್ಲೆ: ಗದಗ

# ಬಾವಿಗಳ ಜಲಮಾಪನ ಮಾಹಿತಿಗಳು

ಎನ್. ಪಿ. ಶ್ರೀಕಾಂತ

**ವ್ಯ**ವಸಾಯ, ಕೈಗಾರಿಕೆ, ನಗರೀಕರಣಗಳು ದೇಶದ ಅಭಿವೃದ್ಧಿಯ ಹೆಗ್ಗುರುತುಗಳು. ಇದರಿಂದ ದೇಶವು ಆರ್ಥಿಕ ಅಭಿವೃದ್ಧಿಯನ್ನು ಹೊಂದುತ್ತದೆ. ಯಾವರೀತಿಯ ಅಭಿವೃದ್ಧಿಗೂ ಜಲಪೂರೈಕೆ ಬಹುಮುಖ್ಯ. ಮಳೆಯ ನೀರು ಎಲ್ಲ ಪೂರೈಕೆಗೂ ಆಧಾರ. ಜನರು, ಈ ಮಳೆಯ ನೀರನ್ನು, ಹರಿವ ನೀರಾದ ನದಿಗಳು, ಝರಿಗಳು, ಕೂಡಿಟ್ಟ ನೀರಾದ ಕೆರೆ, ಕಾಲುವೆ, ಕೊಳ ಮತ್ತು ಅಣೆಕಟ್ಟುಗಳು ಹಾಗೂ ಭೂಮಿಯೊಳಗೆ ಶೇಖರವಾಗಿರುವ ಅಂತರ್ಜಲದ ಮೂಲಕ ಬಳಸುವರು.

ಹರಿವ ನೀರು ಮತ್ತು ಕೂಡಿಟ್ಟ ನೀರುಗಳನ್ನು ಕಾಲಕಾಲಕ್ಕೆ ಬಳಸದಿದ್ದರೆ ಅವುಗಳ ಬಹುಭಾಗ ಆವೀಕರಣಕ್ಕೆ ತುತ್ತಾಗುತ್ತದೆ. ಅತ್ಯಲ್ಪ ಆವೀಕರಣದಿಂದ ನಷ್ಟವಾಗುವ ಹಾಗೂ ನಿರಂತರವಾಗಿ ದೊರಕಬಲ್ಲ ಜಲ ಠೇವಣಿ ಈ ಅಂತರ್ಜಲ.

ಅಂತರ್ಜಲದ ವಿವಿಧ ರೀತಿಯ ಠೇವಣಿ ರೂಪಗಳನ್ನು ಶಿಲೆಗಳು ನಿರ್ಧರಿಸುತ್ತವೆ. ನದಿ, ಸಮುದ್ರದ ದಂಡೆಗಳಲ್ಲಿ ಅತಿ ಮೊತ್ತವೂ, ಮೆದು ಶಿಲಾಪ್ರದೇಶಗಳಲ್ಲಿ ಸಾಮಾನ್ಯ ಮೊತ್ತವೂ, ಗಡಸು ಶಿಲಾಪ್ರದೇಶಗಳಲ್ಲಿ ಚಿಕ್ಕಮೊತ್ತವೂ ಲಭ್ಯವಾಗುತ್ತದೆ. ಹೀಗೆ ದೊರಕುವ ಅಂತರ್ಜಲದ ಮೊತ್ತವನ್ನು ಅರಿಯಲು ಹಾಗೂ ಬಳಸಲು, ಬಾವಿಗಳೇ ಕೈಗನ್ನಡಿಗಳು. ಹರಿವನೀರನ್ನು ಅಣೆಕಟ್ಟೆಗಳಲ್ಲಿ ಶೇಖರಿಸುವರು. ನೆಲದೊಳಗೆ ಹರಿವ ಅಂತರ್ಜಲವನ್ನು ಬಾವಿಗಳಿಂದ ಶೇಖರಿಸುವರು.

ಪ್ರತಿ ಶಿಲಾ ಪಂಗಡಗಳಲ್ಲೂ ಮಳೆಯ ನೀರನ್ನು ಅಂತರ್ಜಲವಾಗಿ ಶೇಖರಿಸಿ ಇಟ್ಟುಕೊಳ್ಳಲು ಅವಕಾಶವಿರುತ್ತದೆ. ಮಳೆಯ ನೀರು ಎಲ್ಲಾ ರೀತಿಯ ಶಿಲೆಗಳಲ್ಲೂ ಹರಿದು ಒಂದು ಸುದೀರ್ಘ ಯಾತ್ರೆಯನ್ನು ನಡೆಸಿ, ಮುಂದೆ ಹರಿಯುವ ಅವಕಾಶ ಇಲ್ಲದಾಗ ಶೇಖರವಾಗಿ ಅಂತರ್ಜಲ ರೂಪದಲ್ಲಿ ಬಾವಿಗಳಲ್ಲಿ ದೊರಕುತ್ತದೆ. ಆದ್ದರಿಂದಲೇ, ನಾವು ಈ ಅಂತರ್ಜಲವನ್ನು ವಿವಿಧ ಪ್ರದೇಶಗಳಲ್ಲಿ, ಅವಕಾಶ ಮತ್ತು ಅವಶ್ಯಕತೆಗೆ ತಕ್ಕಹಾಗೆ ವಿವಿಧ ರೀತಿಯ ಬಾವಿಗಳಿಂದ ಹೊರತೆಗೆಯಬಹುದು. ವಿವಿಧ ಶಿಲಾ ಪಂಗಡಗಳಲ್ಲಿ ಕಂಡುಬರುವ ಬಾವಿಗಳ ನೋಟವನ್ನು ಚಿತ್ರ - ೧ರಲ್ಲಿ ತೋರಿಸಲಾಗಿದೆ. ಚಿತ್ರ ವಿವರಣೆಯನ್ನು ಹೀಗೆ ತಿಳಿಯಬಹುದು. (ಚಿತ್ರ - ೧ರ, ಅ, ಆ ಮತ್ತು ಇ):

(ಅ) ದಂಡೆ ಪ್ರದೇಶಗಳ ಬಾವಿಗಳು : (೧) ತೋಡುಬಾವಿ, (೨) ತೋಡುಬಾವಿಯೊಳಗಿನ ಕೊರೆಬಾವಿ, (೩) ಜಲ್ಲಿ ಭರಿತ ತೂಬುಬಾವಿ, (೪) ಜಲ್ಲಿ ರಹಿತ ಬಂಬುಬಾವಿ, ೫. ಸಂಗ್ರಹ ಬಾವಿ, ೬ ಗುಹೆಬಾವಿ. ಜಲ್ಲಿ, ದಪ್ಪಮರಳು, ಜೇಡಿ, ಸಣ್ಣಮರಳು.

(ಆ) ಮೆದು ಶಿಲಾ ಪ್ರದೇಶಗಳ ಬಾವಿಗಳು : ಬಾವಿಗಳು 'ಅ'ದಂತೆಯೇ ಆದರೂ, ಶಿಲೆಗಳು, ಕಣಗಳ ಕೂಡುವಿಕೆಯಿಂದ ಆಗಿವೆ.

ಮಣ್ಣುಪದರ, ಜಲ್ಲಿಕಣಗಳು ಕೂಡಿರುವ ಮರಳುಕಲ್ಲು, ದಪ್ಪಮರಳು ಕಣಗಳ ಮರಳು ಕಲ್ಲು, ಜೇಡಿಕಲ್ಲು, ಸಣ್ಣ ಮರಳಿನ ಕಲ್ಲು.

(ಇ) ಗಡಸು ಶಿಲಾ ಪ್ರದೇಶಗಳ ಬಾವಿಗಳು : (೧, ೨ ಮತ್ತು ೫ ಮುಂಚಿನಂತೆ) (೨) ಕೊಳವೆ ಬಾವಿ (೪) ಮೆಟ್ಟಿಲ ಬಾವಿ, ಮಣ್ಣುಪದರ, ಶಿಥಿಲ ಶಿಲಾಪದರ, ಗಡಸು ಶಿಲಾಭಾಗ.

ಯಾವುದೇ ರೀತಿಯ ಬಾವಿಗಳಲ್ಲಾದರೂ ಸಹ ನೀರು ಸಿಗಬಹುದು. ಆದರೆ, ಯಾವ ಆಳದಲ್ಲಿ ಮತ್ತು ಎಷ್ಟು ನೀರು ಸಿಗುತ್ತದೆ ಎನ್ನುವುದು ಅಂತರ್ಜಲ ವಿಜ್ಞಾನಿಗಳಿಗೆ ದೊಡ್ಡಸವಾಲು. ಬಾವಿಗಳಲ್ಲಿ, ಈ ಅಂತರ್ಜಲ ಸಿಗುವ ಆಳ ಮತ್ತು ಎಷ್ಟು ಎಂಬುವುದೇ ''ಬಾವಿಯ ಜಲ ಮಾಪನ ಮಾಹಿತಿಗಳು''. ಇವನ್ನು ಅಳೆದು ವಿಶ್ಲೇಷಣೆ ಮಾಡುವುದೇ ಅಂತರ್ಜಲ ವಿಜ್ಞಾನದ ತಿರುಳು.

ಬಾವಿಗಳನ್ನು ತೋಡಿದಾಗ ಅಥವಾ ಕೊರೆದಾಗ ನೀರು ಬಂದ ನಂತರವೂ ತೋಡಿ ಅಥವಾ ಕೊರೆದು, ನೀರು ಹೊರಬರುವ ರಭಸದಲ್ಲಿ ನಿರಂತರತೆ ಕಂಡಾಗ ಅಥವಾ ಇಷ್ಟು ನೀರು ಸಾಕು ಎಂದು ತೋರಿದಾಗ ಬಾವಿಯ ಕೊರೆಯುವಿಕೆ ಅಥವಾ ತೋಡುವಿಕೆಯನ್ನು ನಿಲ್ಲಿಸುವುದು ವಾಡಿಕೆ.

ಈ ಜಲಧಾರೆ ಮತ್ತು ಜಲಮಟ್ಟ ಎಂಬುದು ಗಂಡಹೆಂಡಿರಂತೆ ಜೊತೆ ಜೊತೆಯಲ್ಲೇ ಬೆಳಕು ಚೆಲ್ಲುತ್ತವೆ. ದಾಂಪತ್ಯ ಜೀವನ ವಿರಸವಿಲ್ಲದೆ ಸರಸವಾಗಿರಬೇಕು. ಆಗ 'ಜೀವನ ಜೇನು' ಎಂಬಂತೆ, ಬಾವಿಗಳಲ್ಲಿ ಜಲಮಟ್ಟ ಜಾಸ್ತಿ ಇಳಿಯದೆ, ಜಲಧಾರೆ ಜಾಸ್ತಿ ಸಿಕ್ಕಿದರೆ ಅದೇ ದೊಡ್ಡ 'ಅಂತರ್ಜಲ ಭಂಡಾರ'. ಈ ಜಲಮಟ್ಟ ಮತ್ತು ಜಲಧಾರೆಗಳ ಚೆಲ್ಲಾಟವನ್ನು





ಚಿತ್ರ - ೧ : ವಿವಿಧ ಶಿಲಾಗುಂಪುಗಳು ಮತ್ತು ಬಾವಿಗಳು

ಗಮನಿಸಲು, ಬಾವಿಯ ಒಂದು ನಿರ್ದಿಷ್ಟ ಜಲಮಟ್ಟಕ್ಕೆ ಹೋಲಿಸಿ, ಜಲಮಟ್ಟದ 'ನಾಟ್ಯಲಹರಿ'ಯನ್ನು ಕಾಲಗಣನೆಗೆ ಅನುಸಾರವಾಗಿ ಚಿತ್ರೀಕರಿಸಿ ನೋಡಬೇಕು. ಇಂತಹ ಚಿತ್ರೀಕರಣಕ್ಕೆ ಮಾಹಿತಿಗಳ ಸ್ಪಷ್ಟತೆ ಬಹುಮುಖ್ಯ. ಇದನ್ನು ಸ್ಪಷ್ಟೀಕರಿಸುವ ಉಪಕರಣಗಳು ಬಳಕೆಯಲ್ಲಿವೆ.

ಜಲಮಟ್ಟವನ್ನು ಅರಿಯಲು, ಅಂಕಿಗಳನ್ನು ಕೆತ್ತಿರುವ ಟೇಪಿನ ಸುರುಳಿ, ವಿದ್ಯುತ್ ಸಂವೇದಕ ಅಥವಾ ಒತ್ತಡ ಮಾಪಕಗಳನ್ನು ಬಳಸುವರು. ಬುಗ್ಗೆ ಬಾವಿಗಳಲ್ಲಿ ಒತ್ತಡ ಮಾಪಕ ಮಾತ್ರವೇ ಬಳಕೆಗೆ ಬರುವುದು. ಇದಲ್ಲದೆ ನೀರು ಹೊರಬರದ ಬಾವಿಗಳನ್ನು ವೀಕ್ಷಿಸುವಾಗ ಡಿಜಿಟಲ್ ಟೇಪು, ಜಲಮಟ್ಟ ಮಾಪಕ ರೇಖಾಚಿತ್ರ ಮೂಡಿಸುವ ಯಂತ್ರಗಳನ್ನು ಬಳಸಬಹುದು.

ಜಲಧಾರೆಯನ್ನು ಅಳೆಯಲು ರಭಸ ಪ್ರೇರಿತ ವಿಧಾನಗಳು ಬಳಕೆಯಲ್ಲಿವೆ. (ಚಿತ್ರ - ೨) ಅಲ್ಪ ಜಲಧಾರೆಯನ್ನು ಅರಿಯಲು ಒಂದು ನಿಗದಿತ ಪ್ರಮಾಣದ ಬಕೀಟು, ಕೊಡ, ಡ್ರಮ್ಮು ಅಥವಾ ಚರ್ಮಚೀಲಗಳು ತುಂಬುವ ಸಮಯದಿಂದ ಅರಿಯಬಹುದು.

ಜಲಧಾರೆ ಸ್ವಲ್ಪ ರಭಸದಿಂದ ಬರುವಾಗ, ಮೇಲಿನ ರೀತಿಯಲ್ಲಿ ಅಳೆದಾಗ ಚಿಮ್ಮಿಹೋಗುವ ಸಾಧ್ಯತೆ ಇರುವುದರಿಂದ, ವಿವಿಧ ರೀತಿಯಲ್ಲಿ ಅಳವಡಿಸಿದ ವಿಸರ್ಜಕ ಪೈಪುಗಳಿಂದ ನೀರು ಹೊರಬಂದು ಅದು ಬಾಗುವ ದೂರ ಮತ್ತು ಪೈಪುಗಳ ಅಗಲದಿಂದ ನಿರ್ಧರಿಸಬಹುದು (ನಿರ್ದಿಷ್ಟ ಪ್ರಮಾಣದ ತೊಟ್ಟಿಗಳನ್ನೂ ಸಹ ಬಳಸಬಹುದು).

ಜಲಧಾರೆಯ ರಭಸ ಅತಿಯಾದಾಗ, ಈ ದೂರವನ್ನು ಅಳೆಯುವುದು ಬಹುಕಷ್ಟ. ಆದ್ದರಿಂದ, ಇತರ ವಿಧಾನಗಳಾದ ಮಾಪನ ತಟ್ಟೆ, 'ವಿ'ಕಚ್ಚುಗಳು ಇತ್ಯಾದಿಗಳನ್ನು ಬಳಸುವರು. ಮಾಪನತಟ್ಟೆ ವಿಧಾನದಲ್ಲಿ ವಿಸರ್ಜಕ ಪೈಪು ಮತ್ತು ಒಳಗಿನ ತಟ್ಟೆಯ ವ್ಯಾಸಕ್ಕೆ ತಕ್ಕಂತೆ ಒಂದು ಸಣ್ಣ ರಂಧ್ರದ ಮೂಲಕ + ಮೇಲೇರುತ್ತದೆ (ಚಿತ್ರವನ್ನು ನೋಡಿ). ಇದಕ್ಕೆ ಹೊಂದುವಂತಹ ಪಟ್ಟಿಗಳು ಜಲಧಾರೆಯ ಪ್ರಮಾಣವನ್ನು ಸೂಚಿಸುತ್ತವೆ. 'ವಿ' ಕಚ್ಚಿನಲ್ಲಿ ಒಂದು ದೊಡ್ಡ ಕಬ್ಬಿಣದ ಹಲಗೆಯನ್ನು + ಜಲಧಾರೆಯ ಸ್ವಲ್ಪಭಾಗ ತೂಬಿನ 'ವಿ' ಆಕಾರದಲ್ಲಿ ೬೦° ಅಥವಾ ೯೦° ಕೋನದಲ್ಲಿ ಕತ್ತರಿಸಿ, ಮೇಲೇರುವ ನೀರಿನ ಪ್ರಮಾಣವನ್ನು ತಿಳಿಯಲು ಸೂತ್ರಗಳು ಮತ್ತು ಪಟ್ಟಿಗಳು ಇರುತ್ತವೆ. ಇದರಿಂದ ಜಲಧಾರೆಯ ಪ್ರಮಾಣವನ್ನು ಸ್ಪಷ್ಟಪಡಿಸಿಕೊಳ್ಳಬಹುದು.

ಜಲಮಟ್ಟವನ್ನು ಮೀಟರುಗಳಲ್ಲೂ, ಜಲಧಾರೆಯನ್ನು, ಸೆಕೆಂಡಿಗೆ, ನಿಮಿಷಕ್ಕೆ, ಗಂಟೆಗೆ ಎಂದು ಲೀಟರ್ ಅಥವಾ ಘನಲೀಟರ್‌ಗಳಲ್ಲಿಯೂ ಸೂಚಿಸುವರು. ಆದ್ದರಿಂದ, ಜಲಮಟ್ಟ ಮತ್ತು ಜಲಧಾರೆಗಳನ್ನು ಒಟ್ಟಾರೆಯಾಗಿ ಗಮನಿಸುವುದು ಬಹುಮುಖ್ಯ. ಇವೆರಡೂ ಚಂಚಲ ಮನದ ಹೆಂಗಸಿನಂತೆ. ಈ ವೈವಿಧ್ಯ ರೂಪಗಳನ್ನು ಅರಿಯುವುದೇ ಅಂತರ್ಜಲ ವಿಜ್ಞಾನ. ದಂಪತಿಗಳ ಜೀವನದ ಸುಖ ದುಃಖಗಳಿಗೆ ಅವರ ಸಾಂಸಾರಿಕ ಸಮಸ್ಯೆಗಳೇ ಪರಿಸರ. ಹಾಗೇ ಅದನ್ನು ತಿಳಿಸುವುದು ಅವರ ಮುಖ. "ಮುಖ ನೋಡಿ ಮಣೆ ಹಾಕ್ತಾರೆ" ಎಂಬುದೊಂದು ಗಾದೆಯಂತೆ. ಇದೇ ರೀತಿ ಅಂತರ್ಜಲದ ಲಗಾಮುಗಳು ಹವಾಗುಣ, ಮಳೆ, ಭೂದೃಶ್ಯ ಮತ್ತು ಜಲಬಳಕೆ, ಇವೆಲ್ಲವನ್ನೂ ತಿಳಿಸುವ ಅಂತರ್ಜಲದ ಮುಖ 'ಜಲಮಟ್ಟ'.

ಬಾವಿಯೊಳಗಿನ ಜಲಮಟ್ಟವು ಶಿಲಾಸ್ತರಗಳಿಗನುಗುಣವಾಗಿ ನೆಲಮಟ್ಟದಿಂದ ನಾಲ್ಕು ಮುಖ್ಯ ರೀತಿಯಲ್ಲಿ ಕಂಡುಬರುತ್ತವೆ. ನೆಲಮಟ್ಟದಿಂದ ಕೆಳಕ್ಕೆ, ನೆಲಮಟ್ಟಕ್ಕೆ ಹತ್ತಿರ, ನೆಲಮಟ್ಟಕ್ಕೆ ಸಮನಾಗಿ ಹಾಗೂ ನೆಲಮಟ್ಟವನ್ನು ಮೀರಿ ಉಕ್ಕಿ ಹರಿಯುವ ಸ್ಥಿತಿ. ಇದಕ್ಕೆ ಮುಖ್ಯ ಕಾರಣ ಶಿಲೆಗಳ ಒತ್ತಡ.

ಜಲಮಟ್ಟವು ಯಾವಾಗಲೂ ಚಲನೆಯಲ್ಲೇ ಇರುತ್ತದೆ. ಬಾವಿಯೊಳಗಿನ ಜಲಮಟ್ಟವು ನೀರನ್ನು ಹೊರಗೆ ತೆಗೆಯದಿದ್ದರೂ ಸಹ ಬದಲಾವಣೆಯನ್ನು ಸೂಚಿಸುತ್ತದೆ. ಇದು ದೈನಿಕ, ಋತುಮಾನ, ವಾರ್ಷಿಕ ಹಾಗೂ ಕಾಲಾನುಕಾಲಗಳಿಗೂ ಸಹ ಅನ್ವಯಿಸುತ್ತದೆ. ಈ ವ್ಯತ್ಯಾಸ ಅಥವಾ ಬದಲಾವಣೆಗಳು ಶಿಲೆಗಳ ಹೀರು ಶಕ್ತಿಗೆ ಅನುಸಾರವಾಗಿ ಮತ್ತು ಬಳಕೆಗೆ ಅನುಸಾರವಾಗಿ ಆಗುವುದರಿಂದ, ಇವುಗಳಿಂದ ತಯಾರಿಸಿದ ನಕ್ಷೆಗಳು ಒಂದು ಪ್ರದೇಶದ ಅಂತರ್ಜಲ ಭಂಡಾರದ ಸ್ಥಿತಿಯನ್ನು ತಿಳಿಸುತ್ತವೆ.

ಬಾವಿಯಿಂದ ನೀರು ಹೊರತೆಗೆದು, ಕಾಲಗಣನೆ ಮತ್ತು ಜಲಧಾರೆಯ ಬಡ್ತಿಗನುಸಾರವಾಗಿ ಜಲಮಟ್ಟದ ಗಣನೆ ಮಾಡಿದಾಗ, ಅನೇಕ ಅಂತರ್ಜಲ ವಿಷಯಗಳು ಬೆಳಕಿಗೆ ಬರುತ್ತವೆ. ಅವುಗಳಲ್ಲಿ ಮುಖ್ಯವಾದವು :

ಬಾವಿಯಿಂದ ಯಾವ ಪ್ರಮಾಣದಲ್ಲಿ ಎಷ್ಟು ನೀರನ್ನು ಹೊರತೆಗೆಯಬಹುದು ?

ಶಿಲಾ ಗುಣಗಳಾದ ಹೀರುವಿಕೆ ಶಕ್ತಿ ಮತ್ತು ರವಾನಿಕ ಶಕ್ತಿ.

ಬಾವಿ-ಬಾವಿಗೂ ಇರಬೇಕಾದ ಅಂತರ. – ಹೀಗೆ ನಮ್ಮ ಬಾವಿಯು ಜಲಮಾಪನ ದೇಶಾಭಿವೃದ್ಧಿಗೆ ಒಂದು ಊರುಗೋಲಾಗಿದೆ.



ಚಿತ್ರ - ೨ : ವಿವಿಧ ಬಾವಿಗಳ ಜಲಧಾರೆಯ ಮಾಪಕ ವಿಧಾನಗಳು

ಎನ್. ಪಿ. ಶ್ರೀಕಾಂತ
೧೨೮೭, 'ಓಂ ವಿಜ್ಞಾತಿ', ೬ನೇ ಕ್ರಾಸ್, ೪ನೇ ಮೈನ್
ಚಂದ್ರಾಬಡಾವಣೆ, ವಿಜಯನಗರ, ಬೆಂಗಳೂರು - ೪೦



ಈರಪ್ಪ ಎಂ. ಕಂಬಳಿ

# ಬೀಡಿ ಲಾವ್ – ಕಾಡಿ ಲಾವ್

ಇರುವುದೆಲ್ಲವ ಬಿಟ್ಟು ಇರದುದರೆಡೆಗೆ
ತುಡಿವುದೇ ಜೀವನ — ಗೋಪಾಲಕೃಷ್ಣ ಅಡಿಗ

ಮಾನ್ಯ ವಾಚಕರೇ, ನಾನು ಬರೆಯಲುಪಕ್ರಮಿಸಿದ ಈ ಪ್ರಬಂಧಕ್ಕೆ ಮೊದಲು 'ಅರಮನೆಯಿಂದ ಸೆರೆಮನೆಗೆ' ಎಂಬ ದಿವಿನಾದ ಶೀರ್ಷಿಕೆ ಕೊಟ್ಟುಕೊಂಡು ಮುಂದುವರಿದೆನಾದರೂ, ಸ್ವಲ್ಪ ದೂರ ಕ್ರಮಿಸುವ ಹೊತ್ತಿಗೆ ಅದು ಯಾಕೋ ಅತ್ಯಂತ ವಜನಾದ ತಲೆಬರಹ ಅನ್ನಿಸಿ, ಪ್ರಜಾಪ್ರಭುತ್ವದಲ್ಲಿ ಇಲ್ಲದ ಅರಮನೆಯನ್ನು ಯಾಕೆ ಇಲ್ಲಿ ಎಳೆದುತರುವುದೆಂದು ಭಾವಿಸಿ, ಅದನ್ನು ನಿರ್ದಾಕ್ಷಿಣ್ಯವಾಗಿ ಹೊಡೆದುಹಾಕಿದೆನೆನ್ನಿರಿ. ಇನ್ನು ಸೆರೆಮನೆಯಂತೂ ಬೇಕೇ ಬೇಕು. ನಾಗರಿಕ ಜಗತ್ತಿನಲ್ಲಿ ಅದಕ್ಕೆ ಎಲ್ಲ ಕಾಲಕ್ಕೂ ಬೇಡಿಕೆಯಿದೆ. ಅದರಿಂದ ಬಿಡುಗಡೆ ಕಾಣದೆ, ಅದು ಇದ್ದರೆ ಇದ್ದುಕೊಳ್ಳಲಿ ಎಂದು ಹಾಗೇ ಮುಂದುವರಿದಿದ್ದೇನೆ ಎನ್ನಿರಿ.

'ಸೆರೆಮನೆ' ಎಂದ ತಕ್ಷಣ ನೆನಪಾಯಿತು ನೋಡಿರಿ. ಹೊರಗಿನ ನಾಗರಿಕ ಜಗತ್ತಿನಲ್ಲಿ ನಿರೂಮಳಾಗಿ ಬದುಕುತ್ತಿರುವ ನಮ್ಮಂಥ ಯಾರಿಗೇ ಆಗಲಿ ಸೆರೆಮನೆಯ ಒಳಗೆ ಬಂಧಿಗಳಾದವರ ಬದುಕಿನ ಬಗೆಗೆ ತೀವ್ರ ಕುತೂಹಲ ವಿರುವುದು ಸಹಜ. ಹತ್ತು ವರ್ಷದ ಹಿಂದೆ ಬೆಂಗಳೂರಿನ ಹೃದಯಭಾಗದಲ್ಲಿದ್ದ ಕೇಂದ್ರ ಕಾರಾಗೃಹದ ಒಳಗಿನ ಜಗತ್ತನ್ನು ನೋಡುವ ಒಂದು ಅವಕಾಶ ಮಾಡಿಕೊಂಡಿದ್ದೆವು - ಅದೂ ಅಲ್ಲಿ ಸೇವೆ ಸಲ್ಲಿಸುತ್ತಿರುವ ಗೆಳೆಯರೊಬ್ಬರ ಸಹಕಾರದಿಂದ.

ಹೊರಗೆ ಜೈಲಿನ ಆವರಣದಲ್ಲಿ ಮರದ ಕಟ್ಟೆಯ ಮೇಲೆ, ಎಲ್ಲೆಂದರಲ್ಲಿ – ಒಳಗೆ ಬಂದಿಯಾದವರ ಬಂಧು ಬಾಂಧವರು ಅಂಗಳದಲ್ಲಿ ಬೀಡು ಬಿಟ್ಟಿದ್ದರು. ಯಾವ ಯಾವುದೋ ಕಾರಣಕ್ಕೆ ಒಳಗೆ ಕೂಡಿಹಾಕಿದ್ದ ತಮ್ಮವರನ್ನು ಭೇಟಿಯಾಗಲು ಬಂದಿದ್ದರು. ಮರದ ಕಟ್ಟೆಯ ಮೇಲೆ ಕಟ್ಟಿದ್ದ ಪುಟ್ಟ ಗುಡಿಯ ಕಟಾಂಜನದ ಒಳಗೂ ದೇವರು ಬಂದಿ. ದೊಡ್ಡವರ ಸಮಾಚಾರ. ಏನೂ ಅರಿಯದ ಮಗುವೊಂದು ಮರದ ನೆರಳಲ್ಲಿ ಒಂಟಿಯಾಗಿ ಕುಂಟೋಬಿಲ್ಲೆ ಆಡುತ್ತಿತ್ತು. ಗುಡಿಯಲ್ಲಿ ಊದುಬತ್ತಿ ಉರಿಯುತ್ತಿತ್ತು. ಹೊರಗೆ ಕಟ್ಟೆಯ ಮೇಲೆ ಜಮಾಯಿಸಿದ್ದ ಜನಗಳು ಬಾಯಲ್ಲಿ ಬೀಡಿ ಉರಿಸುತ್ತ ಪಿಸಪಿಸ ಮಾತಿನಲ್ಲಿ ತೊಡಗಿದ್ದರು. ನಿಗದಿಯಾದ ದಿನದಂದು - ಗೊತ್ತುಪಡಿಸಿದ ಸಮಯಕ್ಕೆ ಗೇಟಿನಲ್ಲಿ ಅಪ್ಪಣೆಯ ಕರೆಗಾಗಿ ಕಾದಿದ್ದರವರು.

ಹಾಗೆ ನೆರೆದಿದ್ದವರನ್ನೆಲ್ಲ ದಾಟಿಕೊಂಡು ಗೇಟಿಗೆ ಬಂದ ನಾವು, ವಿಶೇಷ ಅಪ್ಪಣೆಯೊಂದಿಗೆ ತಲೆ ತಗ್ಗಿಸಿ ಒಳಗೆ ತೂರಿದ್ದೆವು. ತೀವ್ರ ಕುತೂಹಲಿಗಳಾಗಿ, ಒಂದು ಕಡೆಯಿಂದ ಹೊರಟು ನೋಡಿಕೊಂಡು ಬರುತ್ತಿರಲಾಗಿ, ಕೈದಿಗಳು ಸಾಮೂಹಿಕವಾಗಿ ಸೇರಿ ಪ್ರಾರ್ಥನೆ ಗೈಯುವ, ಊಟ ಮಾಡುವ, ಕೆಲಸ ಮಾಡುವ ಬ್ಯಾರಕ್‌ಗಳು, ಡಾರ್ಮಿಟರಿಗಳು, ಘನಘೋರ ಅಪರಾಧ ಎಸಗಿದ್ದಕ್ಕೆ ತೀವ್ರ ದಂಡನೆಗೊಳಗಾದ ನಟೋರಿಯಸ್ ಕ್ರಿಮಿನಲ್‌ಗಳನ್ನು ಪ್ರತ್ಯೇಕವಾಗಿ ಕೂಡಿಹಾಕುವ ಸೆಲ್‌ಗಳನ್ನು ಒಂದೊಂದಾಗಿ ನೋಡಿಕೊಂಡು ಬರುತ್ತಿದ್ದೆವು. ಒಂದು ಬ್ಯಾರಕ್‌ನ ಮುಂದೆ ನಿಂತು, ತುರ್ತು ಪರಿಸ್ಥಿತಿಯ ಕರಾಳ ದಿನಗಳಲ್ಲಿ ನೇತಾರ ಲಾಲ್‌ಕೃಷ್ಣ ಅಡ್ವಾನಿ, ಅಟಲ ಬಿಹಾರಿ ವಾಜಪೇಯಿ, ರಾಮಕೃಷ್ಣ ಹೆಗಡೆಯವರನ್ನೆಲ್ಲ ಇಲ್ಲೇ ಇರಿಸಲಾಗಿತ್ತು ಎಂದು, ಅದನ್ನು ಸ್ಮಾರಕವೆಂಬಂತೆ ಗೆಳೆಯರು ವಿವರಿಸುತ್ತಿದ್ದರು. ಆ ದಿನಗಳಲ್ಲಿ, ನಾನಿನ್ನೂ ಪಿ.ಯು. ಓದುತ್ತಿದ್ದ ಹುಡುಗನಾಗಿದ್ದು, ಆಗ ನಮಗದರ ಬಿಸಿ ಅಷ್ಟಾಗಿ ತಟ್ಟಿರಲಿಲ್ಲ. ತುರ್ತು ಪರಿಸ್ಥಿತಿ ತೆಗೆದುಹಾಕಿದ ಮೇಲೆಯೇ ನಾಯಕರನ್ನು ಎಲ್ಲೆಲ್ಲಿ ಇಟ್ಟು ಹಿಂಸಿಸಲಾಯಿತೆಂದು ಒಂದೊಂದಾಗಿ ಬಯಲಾದವು. ಅದು ಇವತ್ತು ಇತಿಹಾಸ.

ಹಾಗೆಯೇ, ವರ್ಷೋಪಷ್ಟಿನಲ್ಲಿ ಸದರಿ ಕಾರಾಗೃಹವೂ ನಗರದ ಹೊರವಲಯಕ್ಕೆ ಸ್ಥಳಾಂತರವಾಗಲಿದ್ದು, ಇದು ತನ್ನ ಮೂಲ ಸ್ವರೂಪದಲ್ಲಿ ಬದಲಾವಣೆ ಕಾಣುವುದರೊಳಗೇ ನನ್ನಂಥ ಕುತೂಹಲಿಗಳ ನೆನಪಿನಲ್ಲಿ ಪಳೆಯುಳಿಕೆಯಾಗಿ ಉಳಿಯುವುದರಲ್ಲಿ ಅನುಮಾನವೇ ಇಲ್ಲ. ಹಾಗಾಗುವುದರೊಳಗೇ ಅದನ್ನು ಕಣ್ತುಂಬ ವೀಕ್ಷಿಸುವ ಸದವಕಾಶ ಕಲ್ಪಿಸಿದ ಗೆಳೆಯರನ್ನು ಮನಸಾರೆ ಕೊಂಡಾಡುತ್ತಲೇ ಮುಂದಡಿಯಿಟ್ಟೆವು. ನಗರದ ಹೊರವಲಯದಲ್ಲಿ ವಿಶಾಲವಾಗಿ ನಿರ್ಮಿಸಲು ಉದ್ದೇಶಿಸಿದ ಕಾರಾಗೃಹ ಪೂರ್ಣಗೊಂಡೊಡನೆ ಬ್ರಿಟಿಷರ ಕಾಲದ ಇದನ್ನು ಒಡೆದು ಹಾಕಲಾಗುವುದೆಂದು ಗೆಳೆಯರು ವಿವರಿಸುತ್ತ ನಡೆದಿದ್ದರು. ಬ್ರಿಟಿಷರ ಕಾಲದ, ಒಂದೊಂದೂ ವಿಶೇಷ ವಿನ್ಯಾಸ ಹೊಂದಿದ್ದ ಕಟ್ಟಡಗಳನ್ನೆಲ್ಲ ಕೆಡವಿಹಾಕುವ ಮೂಲಕ ಒಂದೊಂದಾಗಿ ಅವು ಮಾಯವಾಗುತ್ತಿರುವ ಸನ್ನಿವೇಶದಲ್ಲಿ ಹಳೆಯ ಕಾಲದ ಈ 'ಸೆಂಟ್ರಲ್ ಜೈಲು' ಕೂಡ ಅವುಗಳ ಸಾಲಿಗೆ ಸೇರುವ ಮುನ್ನವೇ ಮ್ಯೂಸಿಯಂ ನೋಡುವಂತೆ ಇದನ್ನೂ ಒಮ್ಮೆ ನೋಡಿಬಿಡುವ ಅವಕಾಶ ಸಿಕ್ಕಿದ್ದೇ ನಮಗೆ ಸಂತಸದ ಸಂಗತಿಯಾಗಿತ್ತು.

ಜೈಲಿನ ದೈತ್ಯಾಕಾರದ ಎತ್ತರದ ಗೋಡೆಗಳು, ಕಾಡು ಪ್ರಾಣಿಗಳನ್ನು ಕೂಡಿಹಾಕಲು ಮಾಡಿದಂತಿದ್ದ ಸಣ್ಣ ಸೆಲ್‌ಗಳು, ಅದರಲ್ಲಿ ಒಬ್ಬನೇ ಮನುಷ್ಯ ಮಲಗಬಹುದಾದ ಕಲ್ಲುಕಟ್ಟೆ, ಅಲ್ಲೇ ಮೂಲೆಯೊಂದರಲ್ಲಿ ಪಾಯಖಾನೆ, ಮಡಿಕೆಯಲ್ಲಿ ನೀರು. ಮಹಾಪಾತಕ ಎಸಗಿ ಜೀವಾವಧಿ ಶಿಕ್ಷೆಗೆ ಗುರಿಯಾದವರನ್ನು ಇಂಥ ಕಡೆ ಇರಿಸುತ್ತಾರೆಂದು ತಿಳಿಯಿತು. ನಾವು ಹೊರ ಜಗತ್ತಿನಲ್ಲಿ, ಇನ್ನೊಬ್ಬರೊಂದಿಗೆ ಮಾತನಾಡದೆ ಒಂದು ಗಂಟೆ ಮೌನವಾಗಿ ನಾಕು ಗೋಡೆ ನಡುವೆ ಒಬ್ಬೊಂಟಿಯಾಗಿ ಕಳೆಯುವುದೆಂದರೇನೇ ಬಹುದೊಡ್ಡ ಹಿಂಸೆಯಾದಂತೆ ಭಾವಿಸುತ್ತೇವೆ. ನನ್ನಂಥವರಿಗೆ ಬಹುಶಃ ಹುಚ್ಚೇ ಹಿಡಿಯುತ್ತದೇನೋ! ಖೈದಿಗಳು ಇಲ್ಲಿ ಹೀಗೆ ಹೊರ ಜಗತ್ತಿನ ಸಂಪರ್ಕ ಕಡಿದುಕೊಂಡಂತೆ, ಏಕಾಏಕಿಯಾಗಿ ಆಯಸ್ಸು ಸವೆಸಬೇಕಾಗಿ ಬಂದದ್ದೇ ದಂಡನೆಯಲ್ಲವೆ ? ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಟ್ಟವರಾಗಿ – ಕ್ಷಣಾರ್ಧದಲ್ಲಿ ಎಸಗಿದ ತಪ್ಪಿಗೆ ಜೀವನ ಪರ್ಯಂತ ಇಂಥ ದುರ್ಭರ ಬದುಕಿಗೆ ತಲೆಗೊಡಬೇಕಲ್ಲವೇ !

ಪರಿಸ್ಥಿತಿಯ ಒತ್ತಡಕ್ಕೆ ಸಿಕ್ಕು , ಒಂದು ಕ್ಷಣ - ಮಾನಸಿಕ ಸ್ಥಿಮಿತ ಕಳೆದುಕೊಂಡವರಾಗಿ ಹಾಗೆ ಆಕಸ್ಮಿಕ ಅಪರಾಧ ಎಸಗುವವರು ಬೆರಳೆಣಿಕೆಯಷ್ಟು ಜನ ಮಾತ್ರವಂತೆ. ಅಂಥವರು ಸಿಟ್ಟಿನ ಭರದಲ್ಲಿ ಗರ ಬಡಿದವರಂತೆ ತಾನೇನು ಮಾಡುತ್ತಿದ್ದೇನೆಂಬ ಪರಿವೆಯಿಲ್ಲದೆ ಪಾತಕ ಎಸಗಿಬಿಡುತ್ತಾರೆ. ಹಿಂದೆಯೇ 'ಅಯ್ಯೋ ನಾನು ಹಾಗೆ ಮಾಡಬಾರದಿತ್ತು' ಎಂದು ಹಳಹಳಿಸಿ, ಮಾಡಿದ ತಪ್ಪಿಗೆ ಪಶ್ಚಾತ್ತಾಪ ಪಡುತ್ತಾರೆ. ಆದರೆ ಅಪರಾಧ ಕೈಮೀರಿ ನಡೆದುಹೋಗಿರುತ್ತದೆ. ಅಂಥವರಿಗೆ ವಿಧಿಸುವ ಶಿಕ್ಷೆಯ

ಪ್ರಮಾಣದಲ್ಲಿ ಕಾನೂನಿನಲ್ಲಿ ಕೊಂಚ ವಿನಾಯಿತಿಗೂ ಅವಕಾಶವಿದೆ. ಆದರೆ, ಅದೇ ಪೂರ್ವನಿಯೋಜಿತ ಹತ್ಯೆಯಲ್ಲಿ - ಮಾಡಿದವನಿರಲಿ, ಅದಕ್ಕೆ ಪ್ರೇರಣೆ ನೀಡಿದ ಹಾಗೂ ಅದಕ್ಕೆ ಸಹಕರಿಸಿದ ವ್ಯಕ್ತಿಗಳಿಗೂ ಶಿಕ್ಷೆ ಕಾದಿಟ್ಟ ಬುತ್ತಿ. ಹೊರಗಿನ ವಿಶಾಲ ನಾಗರಿಕ ಪ್ರಪಂಚದಲ್ಲಿ ನಿರೂಮಳಾಗಿರದ. ಮನುಷ್ಯ ಮನುಷ್ಯರ ಬೇಟೆಯಾಡಿ ಬಂದು ಹೀಗೆ ಪ್ರಾಣಿಗಳ ತರಹ ಸರಳುಗಳ ಹಿಂದೆ ಬೀಳುಗಳೆಯುವುದೆಂದರೆ ಇದೆಂಥಾ ಪಾಡು? ಹೀಗೇ ಯೋಚಿಸುತ್ತಿರಲಾಗಿ ಮನಸ್ಸು ತುಸು ವ್ಯಾಕುಲಗೊಂಡಂತೆ ಆಯಿತು. ಪ್ರಾಣಿ ಸಂಗ್ರಹಾಲಯದ ಕಟಾಂಜನಗಳ ಒಳಗೆ ನಮ್ಮನ್ನು ನಾವೇ ಬಂಧಿಸಿಟ್ಟುಕೊಂಡಂತೆ ಭಾಸವಾಯಿತು. ನಾನು ತುಸು ಉದ್ವಿಗ್ನಗೊಂಡಂತೆ - ಮೌನಕ್ಕೆ ಜಾರಿದ್ದು ಗೊತ್ತಾಗಿಯೋ ಏನೋ, ಗೆಳೆಯರು ಅಲ್ಲಿಂದ ಬೇರೆಡೆ ಬಯಲಿಗೆ ಕರೆದೊಯ್ದರು.

ಅಷ್ಟರಲ್ಲಿ ಒಂದು ಕಡೆ, ದೂರದಲ್ಲಿ ಕೂಡಿಹಾಕಿದ್ದ - ವಿಚಾರಣಾಧೀನ ಕೈದಿಯೊಬ್ಬ ಜೈಲಿನ ಗಾರ್ಡ್‌ನನ್ನು ಕೂಗಿ ಕರೆಯುತ್ತಿದ್ದ. ನಾವು ಅತ್ತ ತಿರುಗುತ್ತಿದ್ದಂತೆ ಗೆಳೆಯ ''ಆತ ಯಾರೆಂದು ಗುರುತು ಹಿಡಿಯಿರಿ ನೋಡೋಣ. ನಿಮಗೆ ಚೆನ್ನಾಗೇ ಗೊತ್ತು'' ಎಂದರು. ಅರೆ, ಹೌದು! ಎಲ್ಲೋ ನೋಡಿದ ಹಾಗಿದೆಯಲ್ಲ-ಪರಿಚಿತ ಮುಖವೇ! ಪತ್ರಿಕೆಗಳಲ್ಲಿ ಸಾಕಷ್ಟು ಸುದ್ದಿಯಾಗಿದ್ದನವ. ''ಸ್ವಾಮಿ ಶ್ರದ್ಧಾನಂದ ಆತನೇ'' ಎಂದು ಹೇಳಿದಾಗ ಕಕವಕವಾಗಿತ್ತು ನನ್ನ ಮನಸ್ಸಿನಲ್ಲಿ. ಬಿಳಿ ಜೈಲುಡುಗೆಯಲ್ಲಿ ನಿಂತು ನಿರ್ವಿಕಾರವಾಗಿ ಅರಚುತ್ತಿದ್ದ ಆತನ ಚಹರೆ ಕಂಡು, ರೆಪ್ಪೆ ಬಡಿಯದೆ ಆತನನ್ನು ಆಪಾದಮಸ್ತಕ ನೋಡಿದೆವು. ಅವನೆಂಥಾ ನಟೋರಿಯಸ್! ವಿಪರೀತ ಸಿಟ್ಟು ಬಂದಾಗ ''ನಿನ್ನನ್ನು ಹೂತುಬಿಡುತ್ತೇನೆ'' ಎಂದು ಪದೇ ಪದೇ ಹೇಳುವವರನ್ನು ಕಂಡಿದ್ದೇವೆ. ಅದನ್ನು ಅಕ್ಷರಶಃ ಆಚರಿಸಿ ಈಗ ಜೈಲು ಕಂಬಿ ಎಣಿಸುತ್ತಿರುವ ಮಹಾತ್ಮನೇ ಈ ಶ್ರದ್ಧಾನಂದ ಉರ್ಫ್ ಥ್ರಿಬ್ಬಲ್ - ಎಂ (ಮುರಳಿ ಮನೋಹರ ಮಿಶ್ರ - ಪೂರ್ವಾಶ್ರಮದ ಹೆಸರು). ತನ್ನ ದುರಾಲೋಚನೆಯಂತೆ ಹೆಂಡತಿಯನ್ನು ಸದ್ದುಗದ್ದಲವಿಲ್ಲದಂತೆ ಜೀವಂತ ಹೂಳುವ ಕೆಲಸವನ್ನು ಅಷ್ಟೇ ಶ್ರದ್ಧೆಯಿಂದ ಮಾಡಿ ಮುಗಿಸಿದ್ದ ಬಹಾದ್ದೂರ! ಹಾಗೆ ಮಾಡುವ ಮೂಲಕ ತನ್ನ ಹೆಸರನ್ನು ಸಾರ್ಥಕಪಡಿಸಿಕೊಂಡಿದ್ದ. ಆತನ ಆ ಬರ್ಬರ ಕೃತ್ಯಕ್ಕಾಗಿ ಕರ್ನಾಟಕ ಹೈಕೋರ್ಟು ಆತನಿಗೆ ಗಲ್ಲು ಶಿಕ್ಷೆಯನ್ನು ಕಾಯಂಗೊಳಿಸಿತ್ತು.

ವಾಚಕರೆ, ದಯವಿಟ್ಟು ಕ್ಷಮಿಸಿರಿ. ಈ ಹಂತದಲ್ಲಿ, ನನ್ನ ಈ ಬರಹದ ಶೀರ್ಷಿಕೆಯನ್ನು 'ಗಲ್ಲಿಯಿಂದ ಗಲ್ಲಿಗೆ' ಎಂದು ಅನಿವಾರ್ಯವಾಗಿ ಬದಲಾಯಿಸುವುದು ನನಗೆ ಸೂಕ್ತವಾಗಿ ಕಂಡಿತು. ಬರವಣಿಗೆ ಎನ್ನುವುದು ಮೂರು ನಾಲ್ಕು ಹಂತಗಳಲ್ಲಿ ರೂಪುಗೊಳ್ಳುವ ಪರಿಪಾಕವೆಂದು ನಂಬಿದವನು ನಾನು. ಹೀಗಾಗಿ ಪರಿಪೂರ್ಣತೆ ಕಾಣದೆ ಕೊನೆಯ ಗಳಿಗೆಯವರೆಗೆ ಬದಲಾಯಿಸುತ್ತಲೇ ಇರುವವನು.

ಉತ್ತರ ಭಾರತದ ಅಪಾಪೋಲಿ ಹುಡುಗ – ಮಿಶ್ರಾ, ಒಂದು ಕಾಲದಲ್ಲಿ ಎಸೆದಲ್ಲಿಗೆ ಹೋಗಿ ಬೀಳುವ ಅವರಿವರ ಕೈಯೊಳಗಿನ ಕಲ್ಲು ಆಗಿದ್ದ. ಎಸ್ಟೇಟು ಏಜೆನ್ಸಿ ವ್ಯವಹಾರಗಳಲ್ಲಿ, ಹೇಳಿದ ಕೆಲಸ ಮಾಡಿಕೊಡುವ – ಫೂಟ್ ಲಾಯಿರಿಯಾಗಿ ಅಲೆದುಕೊಂಡಿದ್ದವ, ಅದು ಹೇಗೋ ವಿಶ್ವಾಸಗಳಿಸಿ, ಒಂದು ದಿನ ಬೆಂಗಳೂರಿನ ತೆಕ್ಕೆಗೆ ಬಂದು ಬಿದ್ದು, ರಾಜಮನೆತನದವಳಂತಿದ್ದ ಶಕೀರಾ ಬೇಗಮ್ಮಳ

# ಶ್ರವಣಶಕ್ತಿಗೆ ಜಯವಾಗಲಿ



ಆ ಕಿವಿಗಳಿಗೆ
ಮೌನ ಹಾಡಿನ ಆರೋಹಣೆ -
ಅವರೋಹಣೆಗಳೆಲ್ಲವೂ ಗೊತ್ತು
ಅವು ನಿಶ್ಶಬ್ದ ಸ್ಪರ್ಶ ಸುಖವನ್ನು
ಮುಳುಗಿ ಅನುಭವಿಸುವ
ಅವಿಶ್ರಾಂತ ಸಾಧನದಲ್ಲಿರುತ್ತವೆ.

ಮನೆ ಕಾಯುವ ಕಣ್ಣು
ರಜೆಯಲ್ಲಿರುವಾಗ
ಅವು ಬಾಗಿಲ ಬಳಿ ಕದಲುತ್ತವೆ.
ಕತ್ತಲ ಅಧರದ ಪಿಸುಮಾತುಗಳ
ಹಿಂದೆ ಮೈಮುರಿವ ಎದೆದನಿಯನ್ನು
ಮುದ್ರಿಸಿರುತ್ತವೆ.

ಗಾಳಿಯ ಸೋಗಿನಲಿ
ಬಾಗಿಲಿನೊಳಗೆ ನುಸುಳಿ ಬರುವ ಹೆಜ್ಜೆಗಳ
ನಿಗೂಢ ದನಿಯನ್ನು
ಕಿವಿಗಳು ತಮ್ಮ ಮಾಧ್ಯಮಕ್ಕೆ
ಅನುವಾದಿಸಿಕೊಳ್ಳುತ್ತವೆ.

ಆ ಕರಡುಗಳನ್ನು
ಮನಕ್ಕೆ ಆಗಿಂದಾಗಲೆ ಕಳುಹಿಸುತ್ತವೆ

ಕಣ್ಣುಗಳ ಹಾಗೆ ಕಿವಿಗೆ
ಅಡಗಿಕೊಳ್ಳಲು ರೆಪ್ಪೆಗಳಿರುವುದಿಲ್ಲ,
ಕಿವಿಗಳ ಬಾಗಿಲು ತೆರೆದೇ ಇರುತ್ತವೆ...
ಎಂದರೆ ಎಲ್ಲ ಶಬ್ದಗಳು
ಅಲ್ಲಿ ನುಗ್ಗುವಂತಿಲ್ಲ...

ಸಹನೆಯ ರಕ್ತ ಹರಿವ ಕಿವಿಗಳು
ಪ್ರಕೃತಿಯ ತಲ್ಲಣಗೊಳಿಸುವ
ದನಿ ಮಲಿನದಲಿ
ನಿಶ್ಚಲ ಯೋಗಮುದ್ರೆಯಲ್ಲಿರುತ್ತವೆ.
ಹೆಪ್ಪುಗಟ್ಟಿದ ನಿಶ್ಶಬ್ದದಲಿ
ಶ್ರುತಿ ರಮ್ಯನಾದ ತರಂಗದಲಿ
ಉಯ್ಯಾಲೆ ತೂಗುತ್ತವೆ.

ಚುರುಕು ಕಿವಿಗಳಿಗೆ
ಮೈಗೂಡಿದ ವಿದ್ಯೆಗಳಿವು
ಕಿವಿಗಳಿಗಿರುವ ಎಲ್ಲ
ಪ್ರತಿಭೆ ಕೋನಗಳನ್ನು ಕರಗತ ಮಾಡಿಕೊಂಡಿರುವ
ನನ್ನ ಮನ ಪರವಶಿಸಿ
ದನಿ ಎತ್ತಿ ಹಾಡಿದೆ
ಶ್ರವಣ ಶಕ್ತಿಗೆ ಜಯವಾಗಲಿ ಎಂದು...

ಮೂಲ : **ಡಾ|| ಸಿ. ನಾರಾಯಣ ರೆಡ್ಡಿ**
ಜ್ಞಾನಪೀಠ ಪುರಸ್ಕೃತರು
ಅನುವಾದ : **ಡಾ|| ರಾಜೇಶ್ವರಿ ಡಿ.**
ಸಂಖ್ಯೆ ೧೯೮, ಶ್ರೀ ಗುರುಪ್ರಿಯ, ೨ನೇ ಮುಖ್ಯ ರಸ್ತೆ ಮಹಾಲಕ್ಷ್ಮೀ ಲೇಔಟ್, ಬೆಂಗಳೂರು - ೮೬

ಕುಟುಂಬದ ಸದಸ್ಯನಾದ. ಆರಂಭದಲ್ಲಿ ನಾನು ಉದ್ಧರಿಸಿದ ಅಡಿಗರ ಪದ್ಯದಂತೆ 'ಯಾವ ಮೋಹನ ಮುರಳಿ ಕರೆಯಿತೋ' ಈ ಬೆವಾರ್ಸಿ ಮುರಳಿಯ ಗಾನಕ್ಕೆ 'ಬಡೇ ಘ್‌ರ್‌ಕೀ ಬೇಟಿ' ಮರುಳಾಗಿಬಿಟ್ಟಿದ್ದಳು. ಅದೇನು ಮೋಡಿಗೆ ಒಳಗಾಗಿದ್ದಳೋ ಅವನು ಹೇಳಿದಂತೆ ಕೇಳಿಕೊಂಡು ಮೊದಲ ಗಂಡನಿಗೆ ಸೋಡಚೀಟಿ ಕೊಟ್ಟು ಇವನನ್ನು ವರಿಸಿದ್ದಳು ಆ ತಾಯಿ. ತನ್ನದೆನ್ನುವುದೆಲ್ಲವನ್ನೂ ಒಂದೊಂದಾಗಿ ಎತ್ತಿ ಎತ್ತಿ ಕೊಟ್ಟಿದ್ದಳು ಆವನಿಗೆ.

'ಭಂಡ ನಾಲಿಗೆ ಬಾಯೊಳಗಿದ್ದರೆ ಹಿಂಡುವ ಎಮ್ಮೆಯೇ ಸೈ!' ಇದು ಲೋಕಾನುಭವದಿಂದ ಸೃಷ್ಟಿಯಾದ ನುಡಿಗಟ್ಟು. ನಾಲಿಗೆಯೇ ಕೆಲವರಿಗೆ ಭಾರೀ ಬಂಡವಾಳ. ಸ್ವಯಂ ಘೋಷಿತ ಸ್ವಾಮಿಗಳಿಗೆ-ಬಾಬಾಗಳಿಗೆ ಇರುವ ಮಾತನಾಡುವ ಕಲೆಯೇ ಸಾಕು, ಮುಗ್ಧ ಜನರನ್ನು ಬಲಿ ಹಾಕಲು. ಸ್ವಾಮಿ ಶ್ರದ್ಧಾನಂದ ಇಲ್ಲಿಯೂ ಅದನ್ನೇ ಮಾಡಿದ್ದ. ಉಪಾಯವಾಗಿ, ಕಟ್ಟಾ ಮುಸ್ಲಿಂ ಕುಟುಂಬದ 'ವುಡ್ ಕರ್ಟನ್' ಭೇದಿಸಿ ಒಳತೂರಿದ್ದ. ನಲವತ್ತು ಮೀರಿದ್ದ ಬೇಗಂ ಗಂಡು ಸಂತಾನಕ್ಕಾಗಿ ಆಸೆಪಟ್ಟಳಂತೆ. ಅದನ್ನೇ ಎನ್‌ಕ್ಯಾಶ್ ಮಾಡಿಕೊಳ್ಳಲು ಹವಣಿಸಿದ ಶ್ರದ್ಧಾನಂದ, ಆಕೆಯನ್ನು ನಂಬಿಸುವಲ್ಲಿ ಯಶಸ್ವಿಯಾಗಿದ್ದ. ಆಕೆಯ ಬಳಿಯಿದ್ದ ಅಪಾರ ಆಸ್ತಿ ಪಾಸ್ತಿಯನ್ನು ಎತ್ತಿಹಾಕಲು ಹೊಂಚುಹಾಕಿದ್ದ. ಅವನು ಸ್ಕೆಚ್ ಹಾಕಿದ್ದ ನೀಲಿ ನಕ್ಷೆಯಂತೆಯೇ ಶೇಕಡಾ ತೊಂಬತ್ತೊಂಬತ್ತು ಮುಗಿದಿತ್ತು. ವಿದೇಶದಲ್ಲಿ ಹರಡಿದ್ದ ಅವರ ಕುಟುಂಬದ ಸದಸ್ಯರಿಗೆ ಅಷ್ಟರಲ್ಲಿ ಇವನ ವಾಸನೆ ಬಡಿದು, ಇವನನ್ನು ಕುಟುಂಬದಿಂದ ಹೊರಹಾಕುವ ಪ್ರಯತ್ನ ಶುರು ಮಾಡಿದಾಗ ಶ್ರದ್ಧಾನಂದ ಒಂದು ದಿನ ಆಕೆಯನ್ನು ಸದ್ದಿಲ್ಲದೆ ಜೀವಂತವಾಗಿ ಹೂತುಬಿಟ್ಟಿದ್ದ. ಅದೇ ಮನೆಯಲ್ಲಿ ಮಾನವ ಪಿಶಾಚಿಯಂತೆ ವಾಸವಾಗಿಯೂ ಇದ್ದ.

ತನ್ನ ಹೆಂಡತಿ ಕಾಣೆಯಾಗಿದ್ದಾಳೆಂದೂ ಹುಡುಕಿಕೊಡಬೇಕೆಂದೂ ಪೊಲೀಸರಿಗೆ ಅಲವತ್ತುಕೊಂಡೂ ನಾಟಕ ವಾಡಿಕೊಂಡಿದ್ದ. ಹತ್ತಿರ ಹತ್ತಿರ ಒಂದು ವರ್ಷ ಗತಿಸಿತ್ತು. ಪಾತಕಿಗಳು ಏನಾದರೊಂದು ಸುಳುಹು ಬಿಟ್ಟಿರುತ್ತಾರೆಂದು ಬಲ್ಲವರು ಹೇಳುತ್ತಾರೆ. ಪೊಲೀಸರು ಹಿಂದೆಬಿದ್ದಿದ್ದರು. ಅಂತೂ ವರ್ಷ ಕಳೆಯುವುದರೊಳಗಾಗಿ ಪ್ರಕರಣ ಬಯಲಾಯಿತು. ಸೋಫಿಸ್ಟಿಕೇಟೆಡ್, ರಾಯಲ್ ಫ್ಯಾಮಿಲಿ ಎಂದೆಲ್ಲ ವರ್ಣಿಸುವ ಶ್ರೀಮಂತ ಮುಸ್ಲಿಂ ಮನೆತನದ ಹೆಣ್ಣುಮಗಳು ಹಾಗೆ ಮಲಗಿದಂತೆಯೇ ಶ್ರದ್ಧಾನಂದನ ಕೈಯಲ್ಲಿ ಸ್ವಂತ ಮನೆಯಲ್ಲಿಯೇ ಹೂತುಹೋಗಿದ್ದವಳ ಕೊಳೆತಿದ್ದ ಕಳೇವರವನ್ನು ಮೇಲೆತ್ತಿದ್ದರು. ಬೀದಿಯಿಂದ ಅರಮನೆಗೆ; ಅರಮನೆಯಿಂದ ಈಗ ಸೆರೆಮನೆಗೆ ತಳ್ಳಲ್ಪಟ್ಟಿದ್ದ ವಿಚಾರಣಾಧೀನ ಖೈದಿಯಾಗಿ – ಪೊಲೀಸರ ಆತಿಥ್ಯದಲ್ಲಿದ್ದ ಶ್ರದ್ಧಾನಂದ ಈಗ ನಮ್ಮ ಕಣ್ಣಿಗೆ ಬಿದ್ದದ್ದು. ಹತ್ತಾರು ವರ್ಷ ವಿಚಾರಣೆ ನಡೆಯಿತು. ಕೊನೆಗೂ ಅಪರಾಧ ಸಾಬೀತಾಗಿ, ಗಲ್ಲಿಯಿಂದ 'ಗಲ್ಲಿಗೆ' ಏರಿದ್ದ – ತನ್ನ ಪ್ರಣಯ ಸಾಹಸ ಮೆರೆದಿದ್ದಕ್ಕೆ, ಅಪ್ರತಿಮ ಧೂರ್ತತನ ತೋರಿದ್ದಕ್ಕೆ!

ನಮ್ಮ ಕಾನೂನಿನಲ್ಲಿರುವ ಕಿಂಡಿಗಳಿಂದಾಗಿ, ಅನೇಕ ವೇಳೆ ವಿಳಂಬ ನೀತಿಯಿಂದಾಗಿ ಸರಿಯಾದ ಸಾಕ್ಷಿ ಪುರಾವೆಗಳು ಲಭ್ಯವಾಗದೆ ಪಾತಕಿಗಳು ಎಸಗಿದ್ದ ಅಪರಾಧ ನ್ಯಾಯಾಲಯದಲ್ಲಿ ಸಾಬೀತಾಗದೆ ಖುಲಾಸೆಯಾಗುವ ಸಾಧ್ಯತೆಗಳೂ ಸಾಕಷ್ಟಿರುವುದರಿಂದಾಗಿ ವಿಚಾರಣಾಧೀನ ಖೈದಿಯಾಗಿ ಜೈಲಿನಲ್ಲಿ ಕೊಳೆತ ಅವಧಿಯಷ್ಟೇ ಎಷ್ಟೋ ವೇಳೆ ಅವರ ಪಾಲಿಗೆ 'ದಂಡನೆ' ಎಂದು ಗೆಳೆಯ ವಿವರಿಸುತ್ತಿದ್ದ. ದೂರದಲ್ಲಿ ಅದೇ ಶ್ರದ್ಧಾನಂದ ಕ್ರಿಮಿ(ನಲ್) ಗಾರ್ಡ್‌ನನ್ನು "ಬೀಡಿ ಲಾವ್ - ಕಾಡಿ ಲಾವ್" ಎಂದು ಅಂಗಲಾಚುತ್ತಿದ್ದುದನ್ನು ನೋಡಿ ಆ ಮಾತು ನಿಜವೆನ್ನಿಸ ಹತ್ತಿತ್ತು. ಆ ವ್ಯವಸ್ಥೆಯಲ್ಲಿ ಅರಮನೆಯಿಂದ ಹೊರದೂಡಿದ ಅಷ್ಟಾವಕ್ರನಂತೆ ಥೇಟು ನಮಗವನು ತೋರಿದ್ದ.

ಪತ್ರಿಕೆಗಳಲ್ಲಿ ಬಂದ ಸಚಿತ್ರ ವರದಿಗಳನ್ನು ನೋಡಿದಾಗ – ಶಕೀರಾ ಬೇಗಮಳ ರೂಪು, ಆಕೆಯ ಅಂತಸ್ತು ಕಣ್ಣು ಕುಕ್ಕುವಂತಿದ್ದವು. ಅದೆಂಥಾ ಮಾಯೆ ಕವಿದಿರಬೇಕು ಆಕೆಗೆ? ರಾಯಭಾರಿ ಗಂಡ, ಮದುವೆ ಮಾಡಿಕೊಂಡು ಹೋದ ಹೆಣ್ಣುಮಕ್ಕಳು, ಅರಮನೆಯಂಥಾ ಮನೆ, ಆಳು-ಕಾಳು, ಎಲ್ಲಾ ಸವಲತ್ತುಗಳು ತುಂಬಿತುಳುಕುತ್ತಿದ್ದರೂ ಅಲ್ಲಿ ಸುಖ ಮರೀಚಿಕೆಯಾಗಿತ್ತೆ? ಎಲ್ಲವನ್ನು ತೊರೆದು ಶ್ರದ್ಧಾನಂದನಂಥ ಹಲಾಲುಖೋರನ ತೆಕ್ಕೆಗೆ ಬೀಳಬೇಕಾಗಿತ್ತೆ? ಕನ್ನಡ ಸಾಹಿತ್ಯ ಓದಿದ ನನಗೆ ಅಮೃತಮತಿಯು ಅಷ್ಟಾವಕ್ರನನ್ನು ಒಲಿದ ಪ್ರಸಂಗ ನೆನಪಾಯಿತು. ಅದೊಂದು ಮನೋವಿಜ್ಞಾನಕ್ಕೆ ಸಂಬಂಧಪಟ್ಟ ಸಂಗತಿಯೇ, ಇಲ್ಲಾ ಯಶೋಧರನನ್ನು ಮುಂದೆ ಜೈನ ಮುನಿಯನ್ನಾಗಿಸಲು ಜನ್ನ ರಾಣಿಯನ್ನು ಅಷ್ಟಾವಕ್ರನ ತೆಕ್ಕೆಗೆ ದೂಡುವ ವಿಪರೀತ ಪ್ರಸಂಗ ಸೃಷ್ಟಿಸಿದನೆ ಎಂದೆಲ್ಲ ತಲೆಕೆಡಿಸಿಕೊಂಡಿದ್ದೆವು ಆಗ! ಆದರೆ ಎಲ್ಲ ಕಾಲಕ್ಕೂ ಈ ತೆರನಾದ ಮಂಗಮನಸುಗಳ ತಾಕಲಾಟ ಇದ್ದೇ ಇರುತ್ತದಲ್ಲವೆ! ಸಮರ್ಥನೆಗಾಗಿ ಜಾನಪದ ಗೀತೆಯೊಂದು ಗುಮ್ಮಿಕೊಂಡು ಬಂತು :

ಎಲ್ಲೋ ಜೋಗಪ್ಪ ನಿನ್ನ ಅರಮನೆ
ಎಲ್ಲೋ ಜೋಗಪ್ಪ ನಿನ್ನ ತಳಮನೆ ?

ಇರುವ ಸುಖವನ್ನು ಕಾಲಿಂದ ಒದ್ದು ಇಂಥ ಜೋಗಪ್ಪಗಳು ನುಡಿಸುವ ಕಿನ್ನರಿಯ ಬೆನ್ನುಹತ್ತಿ ಹೋಗುವಲ್ಲಿನ ಮನೋಭೂಮಿಕೆಯಾದರೂ ಎಂಥದ್ದು? ಅಲ್ಲಿ ಸಹಿಸಲ ಸಾಧ್ಯವಾದ ಬರೀ ಏಕತಾನತೆ ಇತ್ತೆ? ಇಂಥ ಕಡೆ ಸುಖದ ಲೆಕ್ಕಾಚಾರ ಕಡೆಗೂ ಫೈಸಲ್ ಆಗುವುದಿಲ್ಲವೇನೋ!

ವಾಚಕರೇ ಕ್ಷಮಿಸಿರಿ, ನನ್ನ ಈ ಬರಹದ ತಲೆಬರಹವನ್ನು ಮತ್ತೊಮ್ಮೆ ಬದಲಾಯಿಸಲಿದ್ದೇನೆ. ಗಲ್ಲಿಯಿಂದ 'ಗಲ್ಲಿಗೆ' ಏರಿದ್ದ ಶ್ರದ್ಧಾನಂದನ ಪ್ರಕರಣ ಈಗ ಸರ್ವೋಚ್ಚ ನ್ಯಾಯಾಲಯದ ಮುಂದಿದೆ. ವಿಭಾಗೀಯ ಪೀಠದ ನ್ಯಾಯಮೂರ್ತಿಗಳಲ್ಲಿಯೇ ಒಬ್ಬರು ಗಲ್ಲು ಶಿಕ್ಷೆಯನ್ನು ಪುರಸ್ಕರಿಸಿದರೆ, ಮತ್ತೊಬ್ಬ ನ್ಯಾಯಮೂರ್ತಿ ಆತನಿಗೆ ಜೀವಾವಧಿ ಶಿಕ್ಷೆಯೇ ಸಾಕು ಎಂದು ಅಭಿಪ್ರಾಯಪಟ್ಟರು. ನಿದ್ದೆಯಲ್ಲಿರುವಂತೆಯೇ ಆಕೆಯನ್ನು ಹೂತಿದ್ದರಿಂದ ಇದು ಬರ್ಬರ ಕೃತ್ಯವಾಗಲಾರದೆಂದು ಅವರು ಸಮರ್ಥಿಸಿಕೊಂಡರಲ್ಲದೆ ಆಧುನಿಕ ನಾಗರಿಕ ಜಗತ್ತು ಗಲ್ಲು ಶಿಕ್ಷೆ ವಿಧಿಸುವುದನ್ನು 'ಅನಾಗರಿಕ ಕ್ರಮ' ಎಂದು ಚರ್ಚಿಸುವುದನ್ನೂ ಉಲ್ಲೇಖಿಸಿದ್ದರು.

ಸರ್ವೋಚ್ಚ ನ್ಯಾಯಾಲಯ ಮತ್ತೊಮ್ಮೆ ಪರಿಶೀಲಿಸಿ, ಜೀವಾವಧಿ ಶಿಕ್ಷೆಯನ್ನೇ ಕಾಯಂಗೊಳಿಸಿತು. ಆದರೆ, ಸರ್ಕಾರದ ಪರ ವಕೀಲರು, ಈಗಾಗಲೇ ಶ್ರದ್ಧಾನಂದ ಹದಿಮೂರು ವರ್ಷ ಕಾರಾಗೃಹದಲ್ಲಿದ್ದು, ಮುಂದಿನ ವರ್ಷ ಹೊರಬರುತ್ತಾನೆಂದೂ, ಕರ್ನಾಟಕದಲ್ಲಿ 'ಜೀವಾವಧಿ ಶಿಕ್ಷೆ' ಎಂದರೆ ಹದಿನಾಲ್ಕು ವರ್ಷಗಳು ಮಾತ್ರ ಎಂದೂ ತಮ್ಮ ವಾದವನ್ನು ಬಲವಾಗಿ ಮಂಡಿಸಿದಾಗ, ಸರ್ವೋಚ್ಚ ನ್ಯಾಯಾಲಯ ಸಖೇದಾಶ್ಚರ್ಯ ವ್ಯಕ್ತಪಡಿಸಿತು. ಅದು ಸರಿಯಾದ ಕ್ರಮ ಅಲ್ಲವೆಂದೂ ಜೀವಾವಧಿ ಶಿಕ್ಷೆ ಎಂದರೆ ಅವನು ಜೀವಂತ ಇರುವವರೆಗೆ ಜೈಲಿನಲ್ಲಿಯೇ ಇರಬೇಕೆಂದೂ ಸ್ಪಷ್ಟವಾಗಿ ಸೂಚಿಸಿತು. ಶ್ರದ್ಧಾನಂದನ ಪ್ರಕರಣದ ಈ ಐತಿಹಾಸಿಕ ತೀರ್ಪಿನಿಂದಾಗಿ, ಕರ್ನಾಟಕದಲ್ಲಿ ಇದೇ ಆಗಸ್ಟ್‌ನಲ್ಲಿ ಬಿಡುಗಡೆಗಾಗಿ ಕಾದಿದ್ದವರ ಪಟ್ಟಿಗೂ ಬ್ರೇಕು ಬಿತ್ತು.

ಭಾರತ ದಂಡಸಂಹಿತೆ (ಐಪಿಸಿ)ಯ ೩೦೨ನೇ ಕಂಡಿಕೆಯ ಪ್ರಕಾರ ಹತ್ಯೆಯಲ್ಲಿ ಪಾಲ್ಗೊಂಡವರು ಅಂದರೆ ಪ್ರೇರಣೆ ನೀಡಿದ, ಸಹಾಯಮಾಡಿದ ಹಾಗೂ ನೇರವಾಗಿ ಹತ್ಯೆ ಎಸಗಿದವರ ನಡುವೆ ಶಿಕ್ಷೆಯ ಪ್ರಮಾಣ (ಡಿಗ್ರೀ) ಎಂದರೆ ಕಾರಾಗೃಹ ವಾಸದ ಅವಧಿ ೨೦ ವರ್ಷಗಳು ಎಂದು ಲೆಕ್ಕ ಹಾಕಲಾಗಿತ್ತು. ಜೈಲಿನಲ್ಲಿರುವಾಗ ಆತನ ಸನ್ನಡತೆಯನ್ನು ಗಮನಿಸಿ ಒಟ್ಟು ಶಿಕ್ಷೆಯ ಮೂರನೆಯ ಒಂದು ಭಾಗವನ್ನು ಮೀರದಂತೆ ಶಿಕ್ಷೆಯಲ್ಲಿ ಮಾಫಿ ನೀಡುವ ಅಧಿಕಾರ ಆಯಾ ರಾಜ್ಯ ಸರ್ಕಾರಗಳಿಗಿದೆಯಂತೆ. ಅಂದರೆ, ಇಪ್ಪತ್ತು ವರ್ಷಗಳಲ್ಲಿ, ಸರ್ಕಾರದ ಶಿಫಾರಸಿನ ಮೇಲೆ ಗರಿಷ್ಠ ಆರು ವರ್ಷಗಳ ಅವಧಿಯನ್ನು ಮನ್ನಾಮಾಡಿ, ಹದಿನಾಲ್ಕು ವರ್ಷ ಶಿಕ್ಷೆಯನ್ನು ಪೂರೈಸಿ ಹೊರಬರಲು ಅವಕಾಶವಿದೆ.

ಶ್ರದ್ಧಾನಂದನ ಪ್ರಕರಣದಲ್ಲಿ ಸರ್ವೋಚ್ಚ ನ್ಯಾಯಾಲಯವು ದಂಡ ಪ್ರಕ್ರಿಯಾ ಸಂಹಿತೆಯ ೪೩೩-ಎ ಸೆಕ್ಷನ್ ಅಡಿಯಲ್ಲಿ ಸಮುಚಿತ ಸರ್ಕಾರಗಳು ಉದಾರವಾಗಿ ಖೈದಿಗಳ ಬಿಡಗಡೆ ಮಾಡುತ್ತಿದ್ದುದನ್ನು ಪುನರ್‌ಪರಿಶೀಲನೆ ಮಾಡಿತು. ಪರಿಣಾಮವಾಗಿ, ಗಲ್ಲು ಶಿಕ್ಷೆಗೆ ಬದಲಾಗಿ ಆಜೀವ ಜೈಲುವಾಸ ವಿಧಿಸಿದ ಪ್ರಕರಣಗಳಲ್ಲಿ ಅಂಥ ಅಪರಾಧಿಯು ಹೆಣವಾಗಿಯೇ ಹೊರಸಾಗಬೇಕೆಂಬುದನ್ನು ಒತ್ತಿ ಹೇಳಿತು. ನಾಗರಿಕ ಜಗತ್ತಿನಲ್ಲಿ ನೆಗ್ಗಿಲು ಮುಳ್ಳಿನಂತೆ ಕಾಡಿದ ಶ್ರದ್ಧಾನಂದನ ಪ್ರಕರಣ ಕೊನೆಗೂ ಹೀಗೆ ಇತ್ಯರ್ಥವಾಗಿತ್ತು. ಅದೇ ಒಂದು 'ಕಟ್ಟಾಜ್ಞೆ'ಯಾಗಿ ದಾಖಲಾಗಿತ್ತು. ಪರಪ್ಪನ ಅಗ್ರಹಾರದ ಜೈಲಿನಲ್ಲಿ ಬಿಡುಗಡೆಗೆ ಕಾದು ಕೂತಿದ್ದವರಿಗೆ ಅದೇ ಮುಳುವಾಗಿತ್ತು. ಅಂಥವರ ಪಾಲಿಗೆ ಇದ್ದ ಒಂದು ಕಿಂಡಿಯೂ ಮುಚ್ಚಿಹೋದಂತಾಯಿತು.

'ಬದುಕುವುದು' ಎಂದರೆ, ಅದೂ ಸರಿಯಾದ ದಾರಿಯಲ್ಲಿ ಬದುಕುವುದೆಂದರೆ ಒಂದು ಹುಡುಗಾಟಿಕೆಯೇ? 'ಆಡೋಣ ಬಾ-ಕೆಡಿಸೋಣ ಬಾ' ಎಂಬ ಮಕ್ಕಳಾಟಿಕೆಯೆ? ಬಗೆಹರಿಯಲಿಲ್ಲ. ಸ್ವಾಮಿ ಶ್ರದ್ಧಾನಂದನಿಗೆ ಅದೇ ಜೀವಾವಧಿ "ಬೀಡಿ ಲಾವ್-ಕಾಡಿ ಲಾವ್" ಗಟ್ಟಿಯಾಗಿತ್ತು. ಮತ್ತದೇ ಕವಿ ಗೋಪಾಲಕೃಷ್ಣ ಅಡಿಗರ ಪದ್ಯ ನೆನಪಿನ ಹಾದಿಯೇರಿ ತೇಲಿ ಬಂತು:

ಆಸೆಯೆಂಬ ತಳ ಒಡೆದ ದೋಣಿಯಲಿ
ದೂರ ತೀರ ಯಾನ
ಯಾರ ಲೀಲೆಗೊ ಯಾರೋ ಏನೋ
ಗುರಿಯಿರದೆ ಬಿಟ್ಟ ಬಾಣ

ಇದು ಬಾಳು ನೋಡು ಇದು ತಿಳಿದೆನೆಂದರು
ತಿಳಿದ ಧೀರನಿಲ್ಲ
ಹಲವುತನದ ಮೈಮರೆಸುವಾಟವಿದು
ನಿಜವು ತೋರದಲ್ಲ!

ಈರಪ್ಪ ಎಂ. ಕಂಬಳಿ
ಸಹಾಯಕ ನಿರ್ದೇಶಕ, ಭಾಷಾಂತರ ನಿರ್ದೇಶನಾಲಯ
ಬಹುಮಹಡಿಗಳ ಕಟ್ಟಡ, ಎರಡನೇ ಹಂತ
ಡಾ|| ಅಂಬೇಡ್ಕರ್ ವೀಧಿ, ಬೆಂಗಳೂರು - [illegible]



ನಭೋವಲೋಕನ

# ಮತ್ತೆ ಬಂದಿದೆ ಗ್ರಹಣ(ಗಳು)

**ಈ** ತಿಂಗಳಲ್ಲಿ ಸುದ್ದಿ ಮಾಡಲಿರುವ ಗ್ರಹಣ ಸ್ವಲ್ಪ ನಿರಾಶಾದಾಯಕವಾದದ್ದೇ ಎನ್ನಬಹುದು. ಏಕೆಂದರೆ ಎಲ್ಲೆಲ್ಲೂ ಮೋಡ ಇದ್ದೇ ಇರುತ್ತದೆ. ಯಾರಿಗೆ ನೋಡುವ ಅವಕಾಶ ಸಿಗಬಹುದು ಎಂದು ಊಹಿಸಲೂ ಸಾಧ್ಯವಿಲ್ಲ. ಪೂರ್ಣ ಗ್ರಹಣದ ಪಥ ಸೂರತ್‌ನಿಂದ ಇಂದೋರ್, ಪಾಟ್ನಾ, ವಾರಣಾಸಿ ಈ ಮೂಲಕ ಅರುಣಾಚಲ ಪ್ರದೇಶದವರೆಗೂ ಇದೆ. ಆ ಮುಂದೆ ಅದು ಚೀನಾ ಪ್ರವೇಶಿಸುತ್ತದೆ.

ಸೂರ್ಯೋದಯವಾಗುವಾಗಲೇ ಗ್ರಹಣ ಶುರುವಾಗುವುದು ಈ ಬಾರಿಯ ವಿಶೇಷ. ಸಾಮಾನ್ಯವಾಗಿ ಗ್ರಹಣ ನೋಡುವ ಆಸಕ್ತಿ ಇರುವವರು ಫಿಲ್ಟರ್ ಇತ್ಯಾದಿ ಹುಡುಕುತ್ತಾ ಕೈ ಕೈ ಹಿಸುಕಿಕೊಳ್ಳುವುದುಂಟು. ಈ ಬಾರಿ ಭಾರತದ ಯಾವುದೇ ಭಾಗದಿಂದ ಸುರಕ್ಷಿತವಾಗಿ ಸೂರ್ಯೋದಯ ನೋಡಿದರಾಯಿತು. ದಿಗಂತದಂಚಿನ ಕೆಂಪು ಸೂರ್ಯನನ್ನು ಎಂದು ನೋಡಿದರೂ ಬಾಧಕವಿಲ್ಲ. ಆದರೆ ಕೆಲವೇ ನಿಮಿಷಗಳಲ್ಲಿ ಅದರ ಪ್ರಕಾಶ ಹೆಚ್ಚುತ್ತದೆ. ಈ ಬಗ್ಗೆ ಎಚ್ಚರಿಕೆ ವಹಿಸಬೇಕು.

ಇಂದಿನ ಇಂಟರ್‌ನೆಟ್ ಯುಗದಲ್ಲಿ ಗ್ರಹಣದ ವಿವರ ಪಡೆಯುವುದು ಕಷ್ಟವೇನಿಲ್ಲ. ಗೂಗಲ್ ಅರ್ತ್ ಸಹಯೋಗದಿಂದ ಒಂದು ವಿಶೇಷ ಸೌಲಭ್ಯ ಒದಗಿದೆ.

http://xjubier.free.fr/en/site_pages/solar_eclipses/TSE_2009_GoogleMapFull.html ನಕ್ಷೆ ತೆರೆದು ನಿಮಗೆ ಬೇಕಾದ ಸ್ಥಳದ ಮೇಲೆ ಕ್ಲಿಕ್ ಮಾಡಿದರೆ ಸಾಕು ಗ್ರಹಣದ ಆರಂಭ, ಮುಕ್ತಾಯ, ಗರಿಷ್ಠ ನೋಟ ಈ ಎಲ್ಲ ವಿವರಗಳೂ ತಿಳಿಯುತ್ತವೆ. ಫೋಟೋ ತೆಗೆಯುವವರಿಗೆ ಈ ವೆಬ್‌ಸೈಟ್ ಬಹಳ ಉಪಯುಕ್ತ. ಆಕಸ್ಮಾತ್ ಮೋಡದ ಕಾರಣ ಸೂರ್ಯೋದಯ ಕಾಣದೆ, ೧೦-೧೫ ನಿಮಿಷ ಆದಮೇಲೆ ಮೋಡ ಸರಿದು ಬಿಸಿಲು ಬಂದರೆ, ಬರಿಗಣ್ಣಿನಿಂದ ಖಂಡಿತ ಸೂರ್ಯನನ್ನು ನೋಡಬೇಡಿ. ನೀರಿನ ಪ್ರತಿಫಲನ, ಸಗಣಿ ನೀರಿನ ಪ್ರತಿಫಲನ ಈ ಎಲ್ಲವೂ ಅಪಾಯಕಾರಿ. ಹಪ್ಪಳ, ಬೋಂಡ ಇತ್ಯಾದಿಗಳನ್ನು ಬಿಸಿ ಎಣ್ಣೆಯಿಂದ ತೆಗೆಯಲು ಬಳಸುವ ಜಾಲರಿ ಸೌಟನ್ನು ತನ್ನಿ. ಸೂರ್ಯನಿಗೆ ಬೆನ್ನು ಹಾಕಿ ನಿಂತು ಸೌಟಿನ ನೆರಳನ್ನು ಗೋಡೆಯ ಮೇಲೆ ಮೂಡಿಸಿ. ಪ್ರತಿಯೊಂದು ತೂತಿನಿಂದಲೂ ಚಂದ್ರನಾಕಾರದ ಬಿಂಬಗಳು ಮೂಡುವುವು. ಹೀಗೆ ನೀವು ಗ್ರಹಣವನ್ನು ನೋಡಬಹುದು. ಸೂರ್ಯನನ್ನು ನೋಡಬೇಕಾಗಿಲ್ಲ.




ಆಗಸ್ಟ್ ಹುಣ್ಣಿಮೆಯನ್ನು ಗಮನಿಸಿ. ಆಕಾಶ ಶುಭ್ರವಾಗಿದ್ದರೂ ಚಂದ್ರ ಮಂಕಾಗಿರಬಹುದು. ಪಾರ್ಶ್ವ ಛಾಯಾಗ್ರಹಣವೇನೋ ಇದೆ. ಆದರೆ ಬರಿಗಣ್ಣಿನಿಂದ ಇದನ್ನು ಗುರುತಿಸಬಲ್ಲಿರಾ ? ಇದೊಂದು ಸವಾಲು. ಜುಲೈ ೭ರ ಹುಣ್ಣಿಮೆಯಂದು ನಡೆಯುವ ಪಾರ್ಶ್ವ ಛಾಯಾಗ್ರಹಣ ನಮಗೆ ಕಾಣುವುದಿಲ್ಲ. ಆ ದಿನ ಚಂದ್ರನ ದೂರ ಗರಿಷ್ಠ; ಇದರಿಂದ ಕಡಲಿನ ಉಬ್ಬರದಲ್ಲಿ ಅಲೆಗಳ ಎತ್ತರ ಕಡಿಮೆ ಇರಬೇಕು; ಆದರೆ ಮುಂಗಾರಿನ ಆರ್ಭಟದಲ್ಲಿ ಈ ವ್ಯತ್ಯಾಸ ಬಹುಶಃ ಗೊತ್ತಾಗಲಾರದು.

೩೧ರಂದು ಜ್ಯೇಷ್ಠಾ ನಕ್ಷತ್ರವನ್ನು ಚಂದ್ರ ಮರೆಮಾಡುವ 'ಗ್ರಹಣವೂ' ಇದೆ. ರಾತ್ರಿ ೮:೩೦ಕ್ಕೆ ಚಂದ್ರನ ಪಕ್ಕದಲ್ಲಿ ಕಾಣುವ ನಕ್ಷತ್ರವನ್ನು ಗಮನಿಸಿ. ೮:೫೭ಕ್ಕೆ ನಕ್ಷತ್ರ ಇದ್ದಕ್ಕಿದ್ದಂತೆ ಮಾಯವಾಯಿತು ಎನ್ನಿಸುತ್ತದೆ. ೧೦:೩೭ಕ್ಕೆ ಚಂದ್ರನ ಇನ್ನೊಂದು ಬದಿಯಲ್ಲಿ ಕಾಣುತ್ತದೆ. ಇದು ಬೆಂಗಳೂರಿನಲ್ಲಿ ಕಾಣುವಂತೆ ಲೆಕ್ಕ ಹಾಕಿರುವ ಸಮಯ; ಕರ್ನಾಟಕದ ಇತರ ಸ್ಥಳಗಳಿಗೆ ಕೆಲವು ನಿಮಿಷಗಳ ವ್ಯತ್ಯಾಸ ಬರುತ್ತದೆ. ಇದೇ ಬಗೆಯ ಆಚ್ಛಾದನೆ ೪ರಂದೂ ನಡೆಯಲಿದೆ. ಆದರೆ ನಮಗೆ ಅವು ಪಕ್ಕ ಪಕ್ಕ ಇರುವಂತೆ ಮಾತ್ರ ಕಾಣುತ್ತವೆ. ಈ ಸಂದರ್ಭ ಉಪಯೋಗಿಸಿ ಜ್ಯೇಷ್ಠಾ ನಕ್ಷತ್ರವನ್ನು ಪತ್ತೆ ಮಾಡಬಹುದು.

೧೮ರ ಬೆಳಗಿನ ಜಾವ ಕೃತ್ತಿಕಾ ಗುಚ್ಛದ ಆಚ್ಛಾದನೆ ಇದೆ; ಆದರೆ ಅದು ಆರಂಭವಾಗುವಷ್ಟರಲ್ಲಿ ಚಂದ್ರಾಸ್ತವಾಗುತ್ತದೆ.

ಇನ್ನು ಸಂಜೆಯ ಆಕಾಶದತ್ತ ಗಮನ ಹರಿಸೋಣ. ಸಂಜೆ ಕಾಣುವ ಗ್ರಹ ಶನಿ ಒಂದೇ. ನೆತ್ತಿಯಿಂದ ಪಶ್ಚಿಮಕ್ಕೆ ಕಾಣುವ ಸಿಂಹ ಪುಂಜದಲ್ಲಿದೆ. ಅಷ್ಟೇನೂ ಪ್ರಕಾಶಮಾನವಾಗಿಲ್ಲ. ಸುಮಾರು ಒಂಬತ್ತು ಗಂಟೆಗೆ ಕಂತುತ್ತದೆ. ಉತ್ತರದ ಸಪ್ತರ್ಷಿ ಮಂಡಲ, ದಕ್ಷಿಣದಲ್ಲಿ ತ್ರಿಶಂಕು ಮತ್ತು ಕಿನ್ನರಗಳು ಮಾಲೆಯ ಹಾಗೆ ಕಂಗೊಳಿಸುವುವು. ನೆತ್ತಿಯಲ್ಲಿ ಕಾಣುವ ಇನ್ನೆರಡು ಪ್ರಕಾಶಮಾನ ನಕ್ಷತ್ರಗಳು ಚಿತ್ರಾ ಮತ್ತು ಸ್ವಾತಿ. ವೃಶ್ಚಿಕರಾಶಿಯ ಕೊಂಡಿ ಗಮನೀಯ. ವೃಶ್ಚಿಕ, ಧನು ಮೂಲಕ ಹಾದುಹೋಗುವ



೩೧ ಜುಲೈ ೮:೫೦ ರಾತ್ರಿ
ಜ್ಯೇಷ್ಠಾ, ಚಂದ್ರ



೩೧ ಜುಲೈ ರಾತ್ರಿ ೧೦:೩೦
ಜ್ಯೇಷ್ಠಾ, ಚಂದ್ರ ಆಚ್ಛಾದನೆ ಮುಕ್ತಾಯ

ಡಾ|| ಬಿ. ಎಸ್. ಶೈಲಜಾ




ಆಕಾಶಗಂಗೆಯ ಒಂದು ಭಾಗ ದಕ್ಷಿಣದ ಕಿನ್ನರ (ಸೆಂಟಾರಸ್) ಮತ್ತು ತ್ರಿಶಂಕು (ದಕ್ಷಿಣ ಶಿಲುಬೆ) ಮೂಲಕ ಸಾಗುವುದನ್ನು ಕಾಣಬಹುದು. ಇನ್ನೊಂದು ಭಾಗ ಉತ್ತರದ ಗರುಡ (ಆಕ್ವಿಲಾ), ವೀಣಾ (ಲೈರಾ) ಮತ್ತು ರಾಜಹಂಸ (ಸಿಗ್ನಸ್) ಮೂಲಕ ಹಾಯುವುದನ್ನು ಕಾಣಬಹುದು.

ಬೆಳಗಿನ ಜಾವ ಗುರುತಿಸಬಹುದಾದ ಗ್ರಹಗಳು ಗುರು ಮತ್ತು ಶುಕ್ರ - ಇವೆರಡನ್ನೂ ನೋಡಬಹುದು. ಗುರು ಮಧ್ಯರಾತ್ರಿಗೇ ಕಾಣುತ್ತದೆ. ಶುಕ್ರದ ಸಮೀಪ ಕಾಣುವ ಮಂಗಳವನ್ನು ಹುಡುಕಲು ಸ್ವಲ್ಪ ಕಷ್ಟಪಡಬೇಕಾಗಬಹುದು.

ತಿಂಗಳ ಕೊನೆಗೆ ಪರ್ಸಿಯ್ಡ್ ಉಲ್ಕಾವೃಷ್ಟಿಯ ಚಟುವಟಿಕೆ ಆರಂಭವಾಗುವುದು; ಗರಿಷ್ಠ ಮುಂದಿನ ತಿಂಗಳಿಗೆ.

ಜುಲೈ ೪ರಂದು ಭೂಮಿ - ಸೂರ್ಯರ ಅಂತರ ಕನಿಷ್ಠವಾಗುವುದು.

**ಖಗೋಳ ದಿನಚರಿ**

೧ ಚಂದ್ರನ ಪಕ್ಕ ಚಿತ್ರಾ ನಕ್ಷತ್ರ

೪ ಚಂದ್ರನ ಪಕ್ಕ ಜ್ಯೇಷ್ಠಾ ನಕ್ಷತ್ರ*

ಸೂರ್ಯ - ಭೂಮಿ ನಡುವೆ ಕನಿಷ್ಠ ದೂರ

೭ ಹುಣ್ಣಿಮೆ ೧೪:೫೧ಕ್ಕೆ ; ಭೂಮಿ - ಚಂದ್ರ ನಡುವೆ ಗರಿಷ್ಠ ದೂರ; ಪಾರ್ಶ್ವ ಛಾಯಾಗ್ರಹಣ (೧೪:೦೩ ರಿಂದ ೧೬:೧೪ ರವರೆಗೆ)

೮ ಚಂದ್ರ ರಾಹು ಬಿಂದುವಿನಲ್ಲಿ

೧೦ ಗುರು ಚಂದ್ರ ಜೋಡಿ*

೧೪ ಶುಕ್ರ - ರೋಹಿಣಿ ಜೋಡಿ

೧೫ ಚಾಂದ್ರಮಾಸದ ಕೊನೆಯ ಪಾದ

೧೮ ಚಂದ್ರ - ಕೃತ್ತಿಕಾ ಜೋಡಿ; ಶುಕ್ರ, ಮಂಗಳಗಳೂ ಸಮೀಪವೇ ಇರುತ್ತವೆ.*

೧೯ ಶುಕ್ರ - ಚಂದ್ರ ಜೋಡಿ*

೨೨ ಅಮಾವಾಸ್ಯೆ ೦೮:೦೫ಕ್ಕೆ: ಸೂರ್ಯ ಗ್ರಹಣ; ಕೇತು ಬಿಂದುವಿನಲ್ಲಿ

೨೫ ಶನಿ ಚಂದ್ರ ಜೋಡಿ*

೨೭ ಮಂಗಳ - ರೋಹಿಣಿ ಜೋಡಿ*

೩೧ ಜ್ಯೇಷ್ಠಾ ಆಚ್ಛಾದನೆ ೨೦:೫೭ರಿಂದ ೨೨:೩೭ರವರೆಗ

(* ಛಾಯಾ ಗ್ರಹಣಕ್ಕೆ ಉತ್ತಮ ಅವಕಾಶ)

ಆಗಸ್ಟ್ ೬ ಹುಣ್ಣಿಮೆ ೦೫:೩೫ಕ್ಕೆ ; ಪಾರ್ಶ್ವ ಛಾಯಾ ಗ್ರಹಣ (ಬೆಳಗಿನ ೦೪:೩೧ ರಿಂದ ೦೭:೪೮ರವರೆಗೆ)

**ಪಟ್ಟಿ**

ಸೂರ್ಯಗ್ರಹಣದ ವೇಳಾಪಟ್ಟಿ - ಕರ್ನಾಟಕದ ಎಲ್ಲಾ ಭಾಗಗಳಲ್ಲಿಯೂ ಸೂರ್ಯೋದಯಕ್ಕೆ ಮೊದಲೇ ಗ್ರಹಣ ಆರಂಭವಾಗಿರುತ್ತದೆ.

| ಸ್ಥಳ | ಗ್ರಹಣದ ಗರಿಷ್ಠ | ಮುಕ್ತಾಯ | ಶೇಕಡಾ |
|---|---|---|---|
| ಬೆಂಗಳೂರು | ೦೬:೨೧ | ೦೭:೧೭ | ೬೬ |
| ಹುಬ್ಬಳ್ಳಿ | ೦೬:೨೧ | ೦೭:೧೮ | ೭೮ |
| ಮಂಗಳೂರು | ೦೬:೨೧ | ೦೭:೧೬ | ೭೦ |
| ಮೈಸೂರು | ೦೬:೨೧ | ೦೭:೧೬ | ೬೫ |

ಡಾ|| ಬಿ. ಎಸ್. ಶೈಲಜಾ
ಜವಾಹರಲಾಲ್ ನೆಹರೂ ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಒಬಾಮಾ ಆಶ್ವಾಸನೆಗಳು ಕಾರ್ಯಗತವಾಗುವುವೆ ?




ಅಮೆರಿಕಾದ ನಾಗರಿಕರಲ್ಲಷ್ಟೇ ಅಲ್ಲದೆ ಪ್ರಪಂಚದ ಅನೇಕ ಜನವಿಭಾಗಗಳಲ್ಲಿ ಅಮೆರಿಕಾದ ನೀತಿಗಳಲ್ಲಿ ಬದಲಾವಣೆಯ ಅಲೆಯ ಆಶಾಭಾವನೆಯನ್ನು ಬಿತ್ತಿ ಅಧ್ಯಕ್ಷ ಗದ್ದುಗೆಗೇರಿದ ಮೊದಲ ಕರಿಯ ಜನಾಂಗದ ಪ್ರತಿನಿಧಿ ಬರಾಕ್ ಒಬಾಮಾ. ಆಫ್ರಿಕನ್ ಅಮೆರಿಕನ್ನರು ಎಂದು ಕರೆಸಿಕೊಳ್ಳುವ ಜನಾಂಗಕ್ಕೆ ಸೇರಿದ ವ್ಯಕ್ತಿ ಡೆಮಾಕ್ರೆಟಿಕ್ ಪಕ್ಷದ ಅಭ್ಯರ್ಥಿಯಾಗಿ ಚುನಾವಣೆಗಳಲ್ಲಿ ಜಯಗಳಿಸಿ ಅಧಿಕಾರಕ್ಕೇರಿ ಹೆಚ್ಚು ಕಡಿಮೆ ಆರು ತಿಂಗಳಾಗುತ್ತ ಬಂತು. ಚುನಾವಣೆಯ ಪ್ರಚಾರ ಕಾರ್ಯದಲ್ಲಿ ತೊಡಗಿದ್ದಾಗ ಮಂಡಿಸಿದ ಭರವಸೆಗಳನ್ನು ಕಾರ್ಯಗತಗೊಳಿಸುವ ಹಾದಿಯಲ್ಲಿ ಒಬಾಮಾ ಎಷ್ಟು ಮಟ್ಟಿಗೆ ಮುನ್ನಡೆ ಸಾಧಿಸಿದ್ದಾರೆ ಎಂದು ಅಂದಾಜು ಮಾಡಲು ಹೋಗುವುದಕ್ಕೆ ಇದು ಸಕಾಲವಲ್ಲ. ಏಕೆಂದರೆ ಆರು ತಿಂಗಳು ಬಲಿಷ್ಠ ರಾಷ್ಟ್ರವೊಂದರ ಆಡಳಿತಾವಧಿಯಲ್ಲಿ ತೀರಾ ಕಡಿಮೆ ಅವಧಿಯಾದೀತು. ಅಧಿಕಾರ ವಹಿಸಿಕೊಂಡಾಗ ಅಮೆರಿಕಾ ಎದುರಿಸುತ್ತಿದ್ದ ಸವಾಲುಗಳನ್ನು, ಪ್ರಮುಖವಾಗಿ ಆರ್ಥಿಕ ಕುಸಿತದ ಹಿನ್ನೆಲೆಯಲ್ಲಿ ನೋಡಿದಾಗ ಬದಲಾವಣೆಯ ಹಾದಿ ಸುಲಭವೇನಲ್ಲ. ಅಮೆರಿಕಾದ ಸಂದರ್ಭದಲ್ಲಿ ಬೇರೂರಿರುವ ಹಿತಾಸಕ್ತಿಗಳ ಪ್ರಬಲವಾದ ಲಾಬಿ, ಅಧಿಕಾರಶಾಹಿವರ್ಗ ಹಾಗೂ ಮಿಲಿಟರಿ – ಕೈಗಾರಿಕಾ ಸಮುಚ್ಚಯದ ಹಿಡಿತವನ್ನು ಗಮನಿಸಿದಾಗ ನಿರೀಕ್ಷೆಗಳು ಗಾಳಿಯಲ್ಲಿ ತೇಲಿಹೋಗುವ ಸಂಭವಗಳೇ ಹೆಚ್ಚು. ಅಮೆರಿಕಾ ಅಧ್ಯಕ್ಷ ಪದವಿ ಎಷ್ಟೇ ಪ್ರಬಲವಾಗಿದ್ದಾಗ್ಯೂ ರಾಜಕೀಯ ಲಾಬಿಗಳ ಪ್ರಭಾವವನ್ನು ಮೀರಿ ಹೋಗುವುದು ಕಷ್ಟ. ಅಂಥ ಪ್ರಮುಖ ಲಾಬಿಗಳಲ್ಲಿ ಮೇಲೆ ಪ್ರಸ್ತಾಪ ಮಾಡಿರುವುದನ್ನು ಬಿಟ್ಟರೆ ಯೆಹೂದ್ಯ ಲಾಬಿ ಪ್ರಮುಖವಾದ್ದು. ಅಮೆರಿಕಾದ ರಾಜಕಾರಣದಲ್ಲಿ ಈ ಲಾಬಿಯ ಪ್ರಭಾವ ಕಡೆಗಣಿಸುವಂಥದ್ದೇನಲ್ಲ. ಇವಲ್ಲದೆ ಬೇರೆ ಇತರ ಒತ್ತಡಗಳು ಸಹ ಇವೆ. ಅವನ್ನೆಲ್ಲ ಮೀರಿ ಹೊಸ ಹೆಜ್ಜೆ ಇರಿಸುವುದಕ್ಕೆ ಅಧಿಕಾರಸ್ಥ ಅಧ್ಯಕ್ಷನಿಗೆ ಎಂಟೆದೆ ಬೇಕು. ಒಬಾಮಾಗೆ ಅಂಥ ಸಾಮರ್ಥ್ಯವಿದೆಯೇ ? ಇಲ್ಲ ಆತನ ಆಶ್ವಾಸನಗೆಳೆಲ್ಲ ಹಾಗೆಯೇ ಗಾಳಿಯಲ್ಲಿ ತೂರಿ ಹೋಗುವುವೆ ಎನ್ನುವುದನ್ನು ಮುಂದಿನ ದಿನಗಳು ಸ್ಪಷ್ಟಗೊಳಿಸುತ್ತವೆ. ಈವರೆಗಿನ ವಿದ್ಯಮಾನಗಳನ್ನು, ಒಬಾಮಾ ತೆಗೆದುಕೊಂಡಿರುವ ನಿರ್ಧಾರಗಳನ್ನು, ಗಮನಿಸಿದರೆ ಹೆಚ್ಚು ನಿರೀಕ್ಷೆಗಳನ್ನಿರಿಸಿಕೊಳ್ಳುವುದು ಸರಿಯಾಗದು ಎನಿಸುತ್ತದೆ. ಆರ್ಥಿಕ ಕುಸಿತದ ಪರಿಣಾಮಗಳನ್ನು ಎದುರಿಸಲು ಅಮೆರಿಕಾದ ಅಧ್ಯಕ್ಷರು ಕೈಗೊಂಡಿರುವ ಕ್ರಮಗಳನ್ನು ಅವಲೋಕಿಸಿದಾಗ ಅದರಲ್ಲಿ ಹೊಸದೇನಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಅಲ್ಲಲ್ಲಿ ತೇಪೆ ಹಾಕುವ ಕ್ರಮಗಳಾಗಿವೆಯೇ ಹೊರತು ಅವು ಆರ್ಥಿಕ ಕ್ಷೇತ್ರದಲ್ಲಿ ಮೂಲಬದಲಾವಣೆಗಳನ್ನು ತರುವ ಹಾದಿಯಲ್ಲೇನೂ ಇರುವಂತೆ ಕಾಣುತ್ತಿಲ್ಲ. ಅಮೆರಿಕಾದ ವಿದೇಶಾಂಗ ನೀತಿಯ ಕ್ಷೇತ್ರದಲ್ಲೂ ಇದೇ ಪರಿಸ್ಥಿತಿ. ಪಶ್ಚಿಮ ಏಶಿಯಾ, ಇರಾನ್, ಇರಾಕ್, ಆಫ್ಘಾನಿಸ್ಥಾನ, ಪಾಕಿಸ್ತಾನ, ಕ್ಯೂಬಾ, ಉತ್ತರ ಕೊರಿಯ ಮುಂತಾದ ದೇಶಗಳೊಂದಿಗೆ ವ್ಯವಹಾರದಲ್ಲಿ ಈವರೆಗೆ ತಳೆದಿರುವ ಧೋರಣೆಗಳಿಗಿಂತ ಒಬಾಮಾ ನೀತಿಗಳಲ್ಲಿ ಹೆಚ್ಚಿನ ವ್ಯತ್ಯಾಸವೇನಿಲ್ಲ. ಅಮೆರಿಕಾದ ನಿಲುವುಗಳ ಪುನರ್ ದೃಢೀಕರಣವನ್ನು ಗುರುತಿಸಬಹುದು ಅಷ್ಟೆ. ಅಲ್ಲಲ್ಲಿ ಆಲಂಕಾರಿಕವಾದ ತಾತ್ಕಾಲಿಕ ಬದಲಾವಣೆಗಳನ್ನು ಮಾತ್ರ ಕಾಣಬಹುದೇ ಹೊರತು ಹೊಸ ಹಾದಿಯ ಸೂಚಕವೇನಲ್ಲ.

= ಸೀಯಾರ್ಕೆ =

ಅಧಿಕಾರ ವಹಿಸಿಕೊಂಡ ಮೇಲೆ ಮೊದಲ ಬಾರಿಗೆ ಪಶ್ಚಿಮ ಏಶಿಯದ ಕೆಲ ದೇಶಗಳಿಗೆ ಭೇಟಿ ನೀಡಿದ ಸಂದರ್ಭದಲ್ಲಿ ಈಜಿಪ್ತಿನ ರಾಜಧಾನಿ ಕೈರೋದಲ್ಲಿ ಇಸ್ಲಾಮಿಕ್ ಜಗತ್ತನ್ನು ಉದ್ದೇಶಿಸಿ ಒಬಾಮಾ ಮಾಡಿದ ಭಾಷಣ ಜಗತ್ತಿನ ಎಲ್ಲರ ಗಮನ ಸೆಳೆದಿದೆ. ಕೈರೋ ವಿಶ್ವವಿದ್ಯಾನಿಲಯದಲ್ಲಿ ಅವರು ಮಾಡಿದ ಭಾವನಾತ್ಮಕ ಭಾಷಣ ಮಿಶ್ರ ಪ್ರತಿಕ್ರಿಯೆಯನ್ನು ಉಂಟುಮಾಡಿದೆ. ಮುಸ್ಲಿಂ ಜಗತ್ತಿನೊಂದಿಗೆ ಸಂಬಂಧಗಳಲ್ಲಿ ಅಮೆರಿಕಾ ಹೊಸ ನೆಲೆ ಅರಸಲು ಬಯಸುತ್ತದೆ ಎಂದು ಪ್ರಾರಂಭಿಸಿದ ಅವರ ಭಾಷಣದಲ್ಲಿ 'ನಾಗರಿಕತೆಗಳ ಸಂಘರ್ಷ'ದ ಅನಿವಾರ್ಯತೆಯ ಸಿದ್ಧಾಂತವನ್ನು ತಳ್ಳಿಹಾಕಿದರೂ ಸೂಚಿಸಿದ ಪರಿಹಾರಗಳು ಮಾತ್ರ ಹಳೆಯವೆ. ಇಸ್ರೇಲಿ - ಪ್ಯಾಲೆಸ್ಟೈನ್ ಸಮಸ್ಯೆಯ ಬಗ್ಗೆ ಹೆಚ್ಚು ಪ್ರಸ್ತಾಪ ಮಾಡಿದ ಒಬಾಮಾ ಯೆಹೂದ್ಯರ - ಮತ್ತು ಪ್ಯಾಲಸ್ತೀನಿಯನ್ನರ ಸ್ವತಂತ್ರ ತಾಯ್ನಾಡಿನ ಹಂಬಲದ ಹಿಂದಿರುವ ದುರಂತವನ್ನು ಸ್ಮರಿಸಿ, ಇತಿಹಾಸವನ್ನು ಕೆದಕಿದರು. ಸಂಘರ್ಷಗಳಲ್ಲಿ ಸಂಭವಿಸಿದ ಸಾವು ನೋವುಗಳ ಬಗೆಗೆ ಶೋಕ ವ್ಯಕ್ತಪಡಿಸಿದರು. ಆದರೆ ಇಸ್ರೇಲು ಪಶ್ಚಿಮದಂಡೆ ಪ್ರದೇಶದಲ್ಲಿ ಹಮಾಸ್‌ನ ಮೇಲೆ ನಡೆಸಿದ ದಾಳಿಯಲ್ಲಿ ನಡೆಸಿದ ನರಮೇಧವನ್ನು ಕುರಿತು ಚಕಾರವೆತ್ತಲಿಲ್ಲ. ಇಸ್ರೇಲ್ - ಅಮೆರಿಕಾ ಸಂಬಂಧಗಳು ಗಟ್ಟಿಯಾದವು ಮತ್ತು ಐತಿಹಾಸಿಕವಾದುವು ಎಂದು ಹೇಳಿ ಇಸ್ರೇಲಿನ ಅಸ್ತಿತ್ವವನ್ನು ಎತ್ತಿ ಹಿಡಿದ ಒಬಾಮಾ ಇಸ್ರೇಲಿನ ವಿಸ್ತರಣಾವಾದವನ್ನಾಗಲಿ, ಇಸ್ರೇಲ್ ಅಂತರರಾಷ್ಟ್ರೀಯ ಒಪ್ಪಂದಗಳನ್ನು, ವಿಶ್ವಸಂಸ್ಥೆಯ ಆದೇಶಗಳನ್ನು ಉಲ್ಲಂಘಿಸಿರುವುದನ್ನು ಖಂಡಿಸಲಿಲ್ಲ. ಇಸ್ರೇಲ್ ಆಕ್ರಮಿಸಿಕೊಂಡಿರುವ ಪ್ರದೇಶಗಳಲ್ಲಿ ಯೆಹೂದ್ಯರನ್ನು ನೆಲೆಗೊಳಿಸುವುದನ್ನು ಅಮೆರಿಕಾ ಒಪ್ಪುವುದಿಲ್ಲ ಎಂದು ಹೇಳಿದರಷ್ಟೇ ಹೊರತು ಅದನ್ನು ತೆರವುಗೊಳಿಸಬೇಕೆಂದು ಒತ್ತಾಯ ಪಡಿಸಲಿಲ್ಲ. ಹಾಗೆಯೇ ಅವರು ಪ್ಯಾಲಸ್ತೀನಿಯರ ಸ್ವತಂತ್ರ ನಾಡಿನ ಸ್ಥಾಪನೆಯ ಅಗತ್ಯವನ್ನು ಪ್ರತಿಪಾದಿಸಿದರು. ಈ ಪ್ರದೇಶದಲ್ಲಿ ಅಮೆರಿಕಾ ಈ ಎರಡೂ ರಾಷ್ಟ್ರಗಳ ಸ್ಥಾಪನೆಯನ್ನು ಆಗ್ರಹಪಡಿಸುತ್ತದೆ ಎಂದರು. ಅವರ ಈ ಹೇಳಿಕೆಗಳಲ್ಲಿ ಹೊಸ ವಿಷಯವಾಗಲಿ, ಪ್ರಸ್ತಾಪವಾಗಲಿ ಇಲ್ಲ. ಇವೆಲ್ಲ ಅಮೆರಿಕಾ ಈ ಹಿಂದೆ ಅಂಗೀಕರಿಸಿರುವ ತೀರ್ಮಾನಗಳೆ.

ಇಸ್ರೇಲ್‌ನ ನಾಯಕರು 'ಪುನರ್ವಸತಿ' ಕುರಿತು ಒಬಾಮಾ ಮಾಡಿದ ಪ್ರಸ್ತಾಪವನ್ನು ತಿರಸ್ಕರಿಸಿದ್ದಾರೆ. 'ಪುನರ್ವಸತಿ'ಯ ಮುಂದುವರಿಕೆಯನ್ನು ನಿಲ್ಲಿಸುವ ಕನಿಷ್ಠ ಕ್ರಮ ಕೈಗೊಳ್ಳುವುದಕ್ಕೂ ಇಸ್ರೇಲಿ ನಾಯಕರು ಸಿದ್ಧರಿಲ್ಲ. ಪ್ರಬಲವಾದ ಯೆಹೂದ್ಯವಾದಿ ಲೂಟಿಯ ಬೆಂಬಲ ಪಡೆದಿರುವ ಇಸ್ರೇಲಿನ ಮೇಲೆ ಯಾವುದೇ ಬಗೆಯ ಒತ್ತಡವನ್ನು ತರಲು ಒಬಾಮಾ ಎರಡು ಸಲ ಯೋಚಿಸಬೇಕಾಗಿದೆ. ಅದರಿಂದಾಗಿಯೇ, ಪಶ್ಚಿಮ ಏಶಿಯಾದ ಮುಸ್ಲಿಂ ಜನಾಂಗ ಒಬಾಮಾರ ಭಾಷಣವನ್ನು, ಅವರ ಆಶಯಗಳನ್ನು, ಸಂಶಯದಿಂದ ನೋಡುತ್ತಿವೆ. ಹಿಜ್ಬುಲ್ಲಾ ನಾಯಕರ ಪ್ರಕಾರ ಅಮೆರಿಕಾದ ನೀತಿಯಲ್ಲಿ ನಿಜವಾದ ಪರಿವರ್ತನೆ ಸೂಚನೆಗಳೇನೂ ಇಲ್ಲ. ಮುಸ್ಲಿಂ ಜಗತ್ತಿನ ಬಗ್ಗೆ ಸಹಾನುಭೂತಿ ಮಾತ್ರ ವ್ಯಕ್ತವಾಗಿದೆ ಅಷ್ಟೆ ಎಂದು ಪ್ರತಿಕ್ರಿಯಿಸಿದ್ದಾರೆ. ಷಿಯಾ ತಂಡದ ನಾಯಕರು ಪಶ್ಚಿಮ ಏಶಿಯದ ಸಂಘರ್ಷದ ಬಗ್ಗೆ ನಮಗೆ ಉಪನ್ಯಾಸ,






ಬಿ. ಶ್ರೀನಿವಾಸ
ಶಿರಸ್ತೇದಾರರು
ಜಿಲ್ಲಾ ನ್ಯಾಯಾಲಯ, ಹಾವೇರಿ


# ಅಲ್ಲಿ... ನನ್ನವರಿದ್ದಾರೆ

**ಮೋ**ಟು ಬೀಡಿಯ ಹೊಗೆಯಲ್ಲಿ
ತೂರಿ ಬಿಟ್ಟ ಕನಸುಗಳಿಲ್ಲ
ಒಡೆಯನಿಲ್ಲದ ರಂಟಕುಂಟಗಳ
ರಟ್ಟೆಗಳಲ್ಲಿ ಬಲವಿಲ್ಲ

ಹೊರಳಿ ಹೊರಳಿ
ಅರಳಿದ ಮಣ್ಣಿಗೆ
ತೀರಿಸುತಿದೆ ಗರಿಕೆ
ಯಾವುದೋ ಹಳೆಯ ಹರಕೆ.

ಅವ್ವನೊಂದಿಗೆ ಮಾತಿಗೆಂದು
ಅವಸರದಿ ಬಂದ
ಚುಮು ಚುಮು ನಸುಕಿಗೆ
ಬಾಯಿ ಹೋಗಿದೆ!
ಇಬ್ಬನಿ
ಕಂಬನಿ ಸುರಿಸಿದೆ!
ಪಿಸುಗುಟ್ಟಿದ ರಂಗವಲ್ಲಿಗೆ
ಜೀವ ಹೋಗಿದೆ.

ಹಿಟ್ಟು ಬೀಸಿದ ಕಲ್ಲು
ಮೂಕವಾಗಿದೆ
ಹರಕೆ ತುಂಬಿದ
ಅವ್ವನ ಹಾಡಿನೊಂದಿಗೆ.

ಎತ್ತುಗಳ ಕೊರಳ ಗಂಟೆ
ನಿಶ್ಯಬ್ದವಾಗಿದೆ
ಗಂಜಲದ ವಾಸನೆ
ಹಸಿಹುಲ್ಲು ಮಣ್ಣ ವಾಸನೆ
ದೂರ ದೂರ ಸಾಗಿವೆ ...

ಅಪ್ಪ ಮಗನ ನಡುವೆ
ಅಂಟು ಬರೆಸಿ
ನಂಟು ಬೆಳೆಸಿದೆ
ಜೇಡರ ಹುಳುವೊಂದು.
ಹಳೆಯ ಪಳೆಯ
ಮಾತುಗಳೆಲ್ಲ ಅಟ್ಟ ಸೇರಿ
ಊರು ತುಂಬಾ
ಸೋರಿಹೋಗಿದೆ ಮೌನ.

ಸೂರ್ಯಂಗೂ ಮುನ್ನ
ಹೊಲದಲ್ಲಿ ಉದಯಿಸಿದವರು
ಸಂಜೆ ಕೆಂಪು ಸೂರ್ಯನ ಜೊತೆಗೆ
ಮನೆಗೆ ಮರಳಿದವರು.
ಆ ಗೂಡುಗಳಲಿಲ್ಲ ...
ಅಗೋ ನಿಂತಿದ್ದಾರೆ
ಕಾರ್ಖಾನೆಗಳ ಹೊರಗೆ!

ಅಪ್ಪನ ಬೆವರ ಹನಿಗೆ
ಅವ್ವನ ಕಣ್ಣ ಹನಿ ಸೇರಿಸಿ
ಪದಕ ಪಡೆದವರು
ಎಲ್ಲೋ ಸಭೆ ನಡೆಸಿದ್ದಾರೆ
ಯಾವುದೋ ಪಾರ್ಕಿನಲ್ಲಿ!

ನೆಲ ಕದ್ದು
ಹಗಲು ಕದ್ದು
ರಾತ್ರಿಗಳನ್ನು ಕದ್ದವರು
ಊರ ಗರ್ಭದೊಳಿದ್ದರೂ
ಉಳಿಸಬೇಕಿದೆ
ಕೆಂಪೇಗೌಡನ ಗತ್ತಿನ ಊರನ್ನು
ಯಾಕೆಂದರೆ
ಅಲ್ಲಿ ನನ್ನವರಿದ್ದಾರೆ
ಗೂಡು ಬಿಟ್ಟುಬಂದ
ನನ್ನವರಿದ್ದಾರೆ ...

ಉಪದೇಶಗಳು ಬೇಕಿಲ್ಲ, ಪ್ಯಾಲಸ್ಟೈನ್ ರಾಜ್ಯ ಸ್ಥಾಪನೆಯ ವಿಷಯದಲ್ಲಿ ಸಂಪೂರ್ಣವಾಗಿ ಬದಲಾದ ನೀತಿ ಹಾಗೂ ನಿರ್ದಿಷ್ಟ ಕ್ರಮಗಳು ಅಗತ್ಯವಿದೆ ಎಂದು ಹೇಳಿದ್ದಾರೆ. ಪ್ಯಾಲಸ್ಟೈನ್ ಹಮಾಸ್ ತಂಡ ಮತ್ತು ಲೆಬನಾನಿನ ಹಿಜ್ಬುಲ್ಲಾ ಪಕ್ಷ, ಒಬಾಮಾ ತಮ್ಮ ನುಡಿಗಳ ಬದ್ಧತೆಯನ್ನು ನಿರ್ದಿಷ್ಟ ಕ್ರಿಯೆಯಿಂದ ಕಾರ್ಯಗತಗೊಳಿಸಿದಾಗ ಮಾತ್ರ ಅವರ ಪ್ರಾಮಾಣಿಕತೆಯನ್ನು ಒಪ್ಪಲು ಸಾಧ್ಯ ಎಂದು ಹೇಳಿವೆ.

ಒಟ್ಟಾರೆ ಹೇಳಬೇಕೆಂದರೆ ಬರಾಕ್ ಒಬಾಮಾ ಭಾಷಣ ಗೊಂದಲದ ಗೂಡು. ಅವರ ಉದ್ದೇಶ ಸದ್ಭಾವನೆಯಿಂದ ಕೂಡಿದ್ದಾಗಿರಲು ಸಾಕು. ಆದರೆ ಅವು ಕಾರ್ಯಗತವಾಗುವ ಸೂಚನೆಗಳೇನಿಲ್ಲ. ಇರಾನಿನ ಹಿರಿಯ ನಾಯಕ ಅಯಾತೊಲ್ಲ ಖೊಮೇನಿ ಅಭಿಪ್ರಾಯದಲ್ಲಿ ಬದಲಾವಣೆಗಳನ್ನು ಕಾರ್ಯ ರೂಪದಲ್ಲಿ ತಂದು ತೋರಿಸಬೇಕೇ ಹೊರತು, ಮುಸ್ಲಿಂ - ಜಗತ್ತನ್ನು ಒಲಿಸಿಕೊಳ್ಳಲು ಸದುದ್ದೇಶದ ಭಾಷಣಗಳನ್ನು ಮಾಡಿ ಅಲ್ಲ. ಒಬಾಮಾರ ಕೈರೋ ಭಾಷಣದ ಬಗ್ಗೆ ನಡೆಸಿದ ಸರ್ವೇಕ್ಷಣೆಗಳು ಕುತೂಹಲಕರವಾಗಿವೆ. ಇಸ್ರೇಲಿ ರೇಡಿಯೊ ಪ್ರಕಟಿಸಿರುವ ಸಮೀಕ್ಷೆಯ ಪ್ರಕಾರ ಶೇ. ೪೭.೧ ಮಂದಿ ಇಸ್ರೇಲಿಗಳು ಒಬಾಮಾ ಇಸ್ರೇಲಿ ಹಿತರಕ್ಷಣೆಗಿಂತ ಹೆಚ್ಚಾಗಿ ಅರಬ್ ದೇಶಗಳ ಹಿತಾಸಕ್ತಿ ಕಾಪಾಡಲು ಆಸಕ್ತರಾಗಿದ್ದಾರೆ ಎಂದು ಭಾವಿಸಿದ್ದಾರೆ. ಅಮೆರಿಕಾದಲ್ಲಿರುವ ಸಂಸ್ಥೆಯೊಂದರ ಸಮೀಕ್ಷೆಯಂತೆ ಈಜಿಪ್ಟಿನ ಬಹುತೇಕ ಮಂದಿ ಅಮೆರಿಕನ್ನರ ಮಾತುಗಳನ್ನು ನಂಬುವುದಿಲ್ಲ. ಶೇ. ೬೭ರಷ್ಟು ಮಂದಿ ಈಜಿಪ್ಷಿಯನ್ನರು ಅಮೆರಿಕಾ ಪ್ರಪಂಚದಲ್ಲಿ ನಕಾರಾತ್ಮಕ ಪಾತ್ರ ವಹಿಸುತ್ತಿದೆ ಎಂದೂ ಸುಮಾರು ಶೇ. ೭೬ರಷ್ಟು ಜನ ಅಮೆರಿಕಾ ಇಸ್ಲಾಮಿಕ್ ಜನರನ್ನು ದುರ್ಬಲಗೊಳಿಸಿ, ಛಿದ್ರಗೊಳಿಸಲು ನೋಡುತ್ತಿದೆ ಎಂದೂ ಭಾವಿಸಿದ್ದಾರೆ. ಅಮೆರಿಕಾದ ಅಧ್ಯಕ್ಷ ಒಬಾಮಾ ನಿಜವಾಗಿ ಬದಲಾವಣೆಯ ಹರಿಕಾರ ಆಗಬೇಕಾದರೆ, ತಮ್ಮ ಮಾತುಗಳಲ್ಲಿ ವಿಶ್ವಾಸ ಉಂಟುಮಾಡಬೇಕಾದರೆ, ಮುಂಬರುವ ದಿನಗಳಲ್ಲಿ ನಿರ್ದಿಷ್ಟ ಕ್ರಮಗಳನ್ನು ಜಾರಿಗೊಳಿಸುವ ಮೂಲಕ ತಮ್ಮ ಪ್ರಾಮಾಣಿಕತೆಯನ್ನು ಸಾಬೀತು ಮಾಡಬೇಕಾಗಿದೆ.


ಚಿಯಾಕೆ
[illegible]
ಬೆಂಗಳೂರು - [illegible]

# ಅಭಿವೃದ್ಧಿ ಹೆಸರಿನಲ್ಲಿ ಭೂಕಬಳಿಕೆ – ಬೀದಿಪಾಲಾದ ರೈತ

**ಕು. ಸ. ಮಧುಸೂದನ**

**ಆ**ಧುನಿಕ ಜಗತ್ತನ್ನು ಆಳಲು ಹೊರಟಿರುವ 'ಅಭಿವೃದ್ಧಿ' ಎಂಬ ಮಾಯಾವಿ ರಾಕ್ಷಸ ಇವತ್ತು ನಮ್ಮ ರೈತರ ತ್ಯಾಗವನ್ನು ಕೇಳುತ್ತಿದ್ದಾನೆ. ಅದೂ ಎಂತಹ ತ್ಯಾಗ! ಅವರ ಅಸ್ಮಿತೆಯ ಒಂದು ಭಾಗವಾದ ಭೂಮಿಯನ್ನೇ ಕಳೆದುಕೊಳ್ಳುವಂತಹ ತ್ಯಾಗವನ್ನು! ಬೇರೆ ಬೇರೆ ಕಾರಣಗಳಿಗಾಗಿ ಸರಕಾರ ಮತ್ತು ಅದರ ನೆರವಿನಿಂದ ಖಾಸಗಿಯವರು ನಡೆಸುತ್ತಿರುವ ಭೂಸ್ವಾಧೀನದಿಂದ ಲಕ್ಷಾಂತರ ಜನರು ತಮ್ಮ ಭೂಮಿ ಕಳೆದುಕೊಂಡು ನಿರಾಶ್ರಿತರಾಗಿದ್ದಾರೆ ಮತ್ತು ಈ ಕ್ಷಣದಲ್ಲೂ ಈ ಪ್ರಕ್ರಿಯೆ ಮುಂದುವರೆಯುತ್ತಿದೆ.

ನೂರಾರು ವರ್ಷಗಳಿಂದಲೂ ತಾವು ಉಳುತ್ತಿರುವ, ಬೆಳೆಯುತ್ತಿರುವ ಭೂಮಿಯನ್ನು ಕಳೆದುಕೊಂಡು, ಅದರೊಂದಿಗಿನ ಭಾವನಾತ್ಮಕ ಸಂಬಂಧವನ್ನು ಕಡಿದುಕೊಂಡು, ಸರಕಾರ ನೀಡುವ ಪರಿಹಾರವೆಂಬ ಭಿಕ್ಷೆಯನ್ನು ಪಡೆದು ಅಪರಿಚಿತ ಊರಿನಲ್ಲಿ ಅಸಹಾಯಕರಾಗಿ ನಿಲ್ಲುವಂತಹ ತ್ಯಾಗವನ್ನು ಇವತ್ತಿನ ಅಭಿವೃದ್ಧಿಯ ಮಾದರಿ ಕೇಳುತ್ತಿದೆ.

ಈ ಬಗ್ಗೆ ಇನ್ನಷ್ಟು ಚರ್ಚಿಸುವ ಮುನ್ನ ಈ ಭೂಸ್ವಾಧೀನ ಪ್ರಕ್ರಿಯೆ ಪ್ರಾರಂಭವಾದ ಬಗೆಯನ್ನು ಮತ್ತು ಸದ್ಯದ ಸ್ಥಿತಿಯನ್ನು ಪರಿಶೀಲಿಸೋಣ.

ರೈತರ ಕೃಷಿ ಭೂಮಿಯನ್ನು ಸರಕಾರ ಸ್ವಾಧೀನಪಡಿಸಿಕೊಳ್ಳುವ ಪರಿಪಾಠ ಮೊದಲು ಶುರುವಾಗಿದ್ದು ಸ್ವಾತಂತ್ರ್ಯ ಬಂದ ಹೊಸತರಲ್ಲಿ, ಅಂದರೆ ಐವತ್ತರ ದಶಕದಲ್ಲಿ. ಬೃಹತ್ ಕೈಗಾರಿಕೆಗಳಿಂದ ಮಾತ್ರ ದೇಶದ ಅಭಿವೃದ್ಧಿ ಸಾಧ್ಯ ಎಂಬ ನಂಬಿಕೆಯಿಂದ ಮೊದಲ ಹಂತದಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ರೈತರ ಭೂಮಿಯನ್ನು ಮೊದಲ ಬಾರಿಗೆ ವಶಪಡಿಸಿಕೊಳ್ಳಲಾಯಿತು. ನಂತರ ನೀರಾವರಿ ಯೋಜನೆಗಳಿಗಾಗಿ ಮತ್ತು ಕೈಗಾರಿಕೆಗಳಿಗೆ ವಿದ್ಯುತ್ ನೀಡಲು ಜಲವಿದ್ಯುತ್ ಯೋಜನೆಗಳನ್ನು ಸ್ಥಾಪಿಸಲು ಲಕ್ಷಾಂತರ ಹೆಕ್ಟೇರ್‌ಗಳಷ್ಟು ಭೂಮಿಯನ್ನು ವಶಪಡಿಸಿಕೊಳ್ಳಲಾಯಿತು.

ಹೀಗೆ ಸ್ವಾತಂತ್ರ್ಯ ಬಂದ ಹೊಸತರಲ್ಲಿ ನಡೆದ ಇಂತಹ ಭೂಸ್ವಾಧೀನ ಪ್ರಕ್ರಿಯೆಗೆ ರೈತರಿಂದ ಅಂತಹ ಪ್ರತಿರೋಧವೇನೂ ಇರಲಿಲ್ಲ. ಯಾಕೆಂದರೆ ಅಂದಿನ ಸನ್ನಿವೇಶದಲ್ಲಿ ಜನರು ತ್ಯಾಗಮಾಡಲು ದೇಶಾಭಿಮಾನದಂತಹ ಆದರ್ಶಗಳಿದ್ದವು. ಜೊತೆಗೆ ಅವತ್ತಿನ ಪ್ರಭುತ್ವದ ಬಗ್ಗೆ ನಂಬಿಕೆಯೂ ಇತ್ತು.

ಆದರೆ ಯಾವಾಗ ಕೇಂದ್ರ ಸರಕಾರ ತೊಂಭತ್ತರ ದಶಕದಲ್ಲಿ ಮುಕ್ತ ಆರ್ಥಿಕ ನೀತಿಯನ್ನು ಜಾರಿಗೆ ತಂದಿತೋ ಅಂದಿನಿಂದ ಭೂಸ್ವಾಧೀನ ಪ್ರಕ್ರಿಯೆಗೆ ಇನ್ನಿಲ್ಲದ ವೇಗ ಬಂದುಬಿಟ್ಟಿತು. ಮನಮೋಹನ ಸಿಂಗ್ ಅವರು ಜಾರಿಗೆ ತಂದ ಉದಾರೀಕರಣ ನೀತಿಯಿಂದಾಗಿ ಭಾರತದೊಳಗೆ ಕಾಲಿಟ್ಟ ಬಹುರಾಷ್ಟ್ರೀಯ ಕಂಪನಿಗಳು ತಮ್ಮ ಕಾರ್ಯಘಟಕಗಳಿಗೆ ಮತ್ತು ಸಿಬ್ಬಂದಿ ವರ್ಗಕ್ಕೆ ಬೇಕಾದ ಉಪನಗರಗಳನ್ನು ನಿರ್ಮಿಸಲು ಅವಶ್ಯವಿದ್ದ ಭೂಮಿಯನ್ನು ಸರಕಾರಗಳ ನೆರವಿನಿಂದ ಸ್ವಾಧೀನ ಪಡಿಸಿಕೊಳ್ಳಲು ಪ್ರಾರಂಭಿಸಿದವು. ಉದಾಹರಣೆಗೆ, ಬೆಂಗಳೂರು ನಗರದ ಸುತ್ತಮುತ್ತಲಿನ ರೈತರ ಭೂಮಿಯನ್ನು ತೊಂಬತ್ತರ ದಶಕದಲ್ಲಿ ಕಾಲಿಟ್ಟ ಐಟಿ- ಬಿಟಿ ಕಂಪನಿಗಳು ಸ್ವಾಧೀನಪಡಿಸಿಕೊಂಡವು. ತದನಂತರ ವಿಶೇಷ ಆರ್ಥಿಕ ವಲಯಗಳನ್ನು ಆರಂಭಿಸಲು ಹೆಚ್ಚಿನ ಪ್ರಮಾಣದಲ್ಲಿ ಕೃಷಿ ಭೂಮಿಯನ್ನು ವಶಪಡಿಸಿಕೊಳ್ಳಲು ಸರಕಾರಗಳು ಮುಂದಾದವು.

ಈ ರೀತಿ ರೈತರ ಭೂಮಿಯನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ಮತ್ತು ಅದನ್ನು ಖಾಸಗಿಯವರ ಮಡಿಲಿಗೆ ಹಾಕುವ ಸರಕಾರಗಳು, ರೈತ ಮತ್ತು ಭೂಮಿಯ ನಡುವಿನ ಭಾವನಾತ್ಮಕ ಸಂಬಂಧಗಳ ಬಗೆಗಿನ ಕೆಲವು ಸತ್ಯಗಳನ್ನು ಅರ್ಥಮಾಡಿಕೊಳ್ಳಲು ವಿಫಲವಾಗಿವೆ. ಆ ಮಟ್ಟಿಗೆ ಅವು ಜಡವಾಗಿವೆ.

ಭೂಮಿಯು ರೈತನಿಗೆ ಕೇವಲ ಒಂದು ಉತ್ಪಾದನಾ ಸಾಧನವಲ್ಲ. ಆತ ಅದನ್ನೆಂದೂ ನಿರ್ಜೀವ ನೆಲದ ಒಂದು ತುಂಡು ಎಂದು ಪರಿಗಣಿಸಿದವನಲ್ಲ. ಅದರಲ್ಲೂ ಭಾರತದಂತಹ ಕೃಷಿಪ್ರಧಾನ ಸಂಸ್ಕೃತಿಯ ಪಾರಂಪರಿಕ ಮೌಲ್ಯಗಳ ವ್ಯವಸ್ಥೆಯಲ್ಲಿ 'ವ್ಯವಸಾಯ' ಅನ್ನುವುದು ಕೇವಲ ಒಂದು ವೃತ್ತಿಯಲ್ಲ. ಬದಲಿಗೆ ಅದು ರೈತನ ಜೀವನಕ್ರಮವಾಗಿದೆ. ರೈತನೊಬ್ಬ ತಾನು ವಾಸಿಸುವ ಪ್ರದೇಶದಲ್ಲಿನ ಜಾತ್ರೆ, ಹಬ್ಬ-ಹರಿದಿನ, ದಾಯಾದಿಗಳ ಕಿತ್ತಾಟ, ಕಳ್ಳತನ, ಜಗಳ ಮುಂತಾದವುಗಳನ್ನು ಸಾಮೂಹಿಕವಾಗಿ ಅನುಭವಿಸುತ್ತ, ನಿಭಾಯಿಸುತ್ತ, ವೈಯಕ್ತಿಕ ಸುಖ-ದುಃಖಗಳನ್ನು ಪರಸ್ಪರ ಹಂಚಿಕೊಳ್ಳುತ್ತ ಸಣ್ಣಪುಟ್ಟ ಏರುಪೇರುಗಳನ್ನು ಸಹಜವಾಗಿ ಸ್ವೀಕರಿಸುತ್ತ ಸಾಗಿಸುತ್ತಿದ್ದ ಬದುಕನ್ನು ಕತ್ತರಿಸಿಬಿಡುವ ತ್ಯಾಗದ ಪರಿಣಾಮ ಎಂಥದ್ದು ಅನ್ನುವುದು ಅಭಿವೃದ್ಧಿಯ ಹರಿಕಥೆ ಹಾಡುವವರಿಗೆ ಅರ್ಥವಾಗುವುದು ಹೇಗೆ ತಾನೆ ಸಾಧ್ಯ ?

ತಾನು ವಾಸಿಸುವ ಊರು, ಸಾಗುವಳಿ ಮಾಡುವ ಭೂಮಿ ಎಲ್ಲವೂ ವ್ಯಕ್ತಿಯೊಬ್ಬನ ಐಡೆಂಟಿಟಿಗೆ ಪೂರಕವಾದುವು. ಪ್ರತಿ ಮನುಷ್ಯನ ಪರಿಚಯವಿರುವುದೇ ಆತ ಹುಟ್ಟಿ ಬೆಳೆದ ಮಣ್ಣಿನಲ್ಲಿ. ಅವನು ತನ್ನನ್ನು ಪರಿಚಯಿಸಿಕೊಳ್ಳುವುದೇ ಆ ನೆಲದ ಹೆಸರಿನಲ್ಲಿ. ಮನುಷ್ಯ ಮತ್ತು ಭೂಮಿಯ ನಡುವೆ ಇರುವ ವಿಶಿಷ್ಟವಾದ ಸಂಬಂಧವನ್ನು ಅಭಿವೃದ್ಧಿ ತರುವ ಶ್ರೀಮಂತಿಕೆಯಿಂದ ಸರಿದೂಗಿಸಲಾಗದು.



ನೂರಾರು ವರ್ಷಗಳಿಂದಲೂ ತಾವು ಉಳುತ್ತಿರುವ, ಬೆಳೆಯುತ್ತಿರುವ ಭೂಮಿಯನ್ನು ಕಳೆದುಕೊಂಡು, ಅದರೊಂದಿಗಿನ ಭಾವನಾತ್ಮಕ ಸಂಬಂಧವನ್ನು ಕಡಿದುಕೊಂಡು, ಸರಕಾರ ನೀಡುವ ಪರಿಹಾರವೆಂಬ ಭಿಕ್ಷೆಯನ್ನು ಪಡೆದು ಅಪರಿಚಿತ ಊರಿನಲ್ಲಿ ಅಸಹಾಯಕರಾಗಿ ನಿಲ್ಲುವಂತಹ ತ್ಯಾಗವನ್ನು ಇವತ್ತಿನ ಅಭಿವೃದ್ಧಿಯ ಮಾದರಿ ಕೇಳುತ್ತಿದೆ.

ಸಾಂಸ್ಕೃತಿಕವಾಗಿ ನಮ್ಮ ಅಸ್ಮಿತೆಯನ್ನು ರೂಪಿಸುವ ನೀರು, ಭಾಷೆಗಳಂತೆಯೇ ಭೂಮಿ ಅನ್ನುವುದು ಸಹ ಒಂದು ಸಾಂಸ್ಕೃತಿಕ ಅಸ್ಮಿತೆಯ ಒಂದು ಅಂಶ. ಪ್ರತಿಯೊಬ್ಬ ಮನುಷ್ಯನ ಜೀವನವೂ ರೂಪುಗೊಳ್ಳುವುದು ಆತ ಬದುಕುತ್ತಿರುವ, ಅವಲಂಬಿಸಿರುವ ನೆಲ-ಜಲಗಳಿಂದಲೇ. ಆತನ ಅಸ್ಮಿತೆ ರೂಪಿತವಾಗುವುದೇ ಇವುಗಳಿಂದ.

ಆದ್ದರಿಂದಲೇ ಭೂಮಿ ಅನ್ನುವುದು ರೈತರಿಗೆ ಕೇವಲ ಅನ್ನದ ಪ್ರಶ್ನೆಯಲ್ಲ, ಆತನ ಒಟ್ಟು ಜೀವನ ಶೈಲಿಯನ್ನು ನಿರ್ಧರಿಸುವ, ಅವನನ್ನು ಮುನ್ನಡೆಸುವ ಜೀವಂತ ಶಕ್ತಿಯಾಗಿದೆ.

ಆದರೆ ಆಧುನಿಕ ಅಭಿವೃದ್ಧಿಯ ಬೇರೆಲ್ಲ ಬಂಡವಾಳಗಳಂತೆಯೇ ಭೂಮಿ ಸಹ ಲಾಭ ತರುವ ಒಂದು ಸ್ಥಿರ ಬಂಡವಾಳವಾಗಿದೆ. ಬೇರೆ ಸಂಪನ್ಮೂಲಗಳಂತೆ ಅದೂ ಸಹ ಬಳಸಬಹುದಾದ, ಪರಭಾರೆ ಮಾಡಬಹುದಾದ ಒಂದು ಸಂಪನ್ಮೂಲ. ರೈತನ ದೃಷ್ಟಿಯಲ್ಲಿ ಭೂಮಿಯು ಪರಭಾರೆ ಮಾಡಬಹುದಾದ ಸಂಪನ್ಮೂಲವಲ್ಲ.

ರೈತನೊಬ್ಬ ಭೂಮಿಯನ್ನು ಕಳೆದುಕೊಳ್ಳುವುದೆಂದರೆ ತನ್ನ ಪೂರ್ವಿಕರ ನೆನಪುಗಳನ್ನು, ಅವರು ಕಲಿಸಿಕೊಟ್ಟ ಉಳುಮೆಯೆಂಬ ಸೃಜನಶೀಲ ಬಾಳುವೆಯ ವಿಧಾನವನ್ನು ಕಳೆದುಕೊಳ್ಳುವುದು ಎಂದರ್ಥ. ಅಲ್ಲದೆ, ಭೂಮಿಯ ಜೊತೆಗೆ ಕೃಷಿಗಾಗಿ ತಾನು ಸಾಕಿಕೊಂಡ ರಾಸುಗಳನ್ನು ಕಳೆದುಕೊಳ್ಳುವ, ತನ್ಮೂಲಕ ಪ್ರಾಣಿಗಳೊಂದಿಗೆ (ಪ್ರಕೃತಿಯೊಂದಿಗೆ) ಸಹಬಾಳ್ವೆ ನಡೆಸುವ ಜೀವ ಔದಾರ್ಯತೆಯನ್ನು ಕಳೆದುಕೊಳ್ಳುವುದು ಎಂದಾಗುತ್ತದೆ.

ಆದ್ದರಿಂದಲೇ ಭೂಮಿ ಅನ್ನುವುದು ರೈತನೊಬ್ಬನಿಗೆ ರಿಯಲ್ ಎಸ್ಟೇಟ್ ದಂಧೆಯಲ್ಲಿ ಬೆಲೆ ನಿರ್ಧಾರಗೊಳ್ಳುವಂತಹ ಒಂದು ಆಸ್ತಿಯಲ್ಲ, ಅದು ಆತನ ಸ್ವಾವಲಂಬನೆಯ, ಸ್ವಾಭಿಮಾನದ ಸಂಕೇತ, ಆತನ ಆತ್ಮಗೌರವದ ಲಾಂಛನವೂ ಹೌದು.

ಆದರೆ ಇಪ್ಪತ್ತೊಂದನೆಯ ಶತಮಾನದಲ್ಲಿನ ಅಭಿವೃದ್ಧಿಯೆಂಬ ಮಾಯಾವಿಯ ಕೈಚಳಕದಿಂದ ಭೂಮಿ ಬಂಡವಾಳವಾಗಿ ಪರಿವರ್ತನೆಯಾಗುತ್ತಿದೆ. ತನ್ನ ಹಕ್ಕುಗಳನ್ನು ಕಳೆದುಕೊಂಡ ರೈತ ಭೂಮಿಯ ಮೇಲಿನ ತನ್ನ ಮಾಲಿಕತ್ವವನ್ನು ಬಂಡವಾಳಶಾಹಿಗಳಿಗೆ ಬಿಟ್ಟುಕೊಟ್ಟು ತನ್ನ ಭೂಮಿಯಲ್ಲೇ ಜೀತಗಾರನಾಗಿ ದುಡಿಯಬೇಕಾದ ದುರ್ಗತಿ ಬಂದೊದಗಿದೆ. ಆದ್ದರಿಂದ ಇನ್ನಾದರೂ ನಮ್ಮ ಸರಕಾರಗಳು ರೈತರನ್ನು ಭೂಮಿಹೀನರನ್ನಾಗಿ ಮಾಡುವ ಅಭಿವೃದ್ಧಿ ಕಲ್ಪನೆಯನ್ನು ಕೈಬಿಟ್ಟು ಪರ್ಯಾಯ ಮಾದರಿಯನ್ನು ಹುಡುಕುವ ಪ್ರಯತ್ನ ಮಾಡಬೇಕಾಗಿದೆ.


ಕು. ಸ. ಮಧುಸೂದನ

ವಿಜಯ ಬ್ಯಾಂಕ್ ಮಹಡಿ, ರಂಗೇನಹಳ್ಳಿ-೫೭೭ ೧೪೪

ಚಿಕ್ಕಮಗಳೂರು ಜಿಲ್ಲೆ


# ಸೀತಾ



ರಾಮು ಬರ್‍ತಾನಂತ

ರಾಮು ಬರೋತನಕ ಸೀತಾ ಕಾಯಬೇಕಂತ

ಕಾಯೋದು ಆಕಿನ್ದು ತಪಸ್ಸಂತ

ಏನ ಫಲ ಸಿಕ್ಕ್ಯು ಅದು ಸೀತಾನ್ದು ಫಲ ಅಂತ

ಆದರೂ ಕಾಯ್ತಾಳಂತ ಸೀತಾ

ಅದು ಆಕಿನ್ದು ಕರ್‍ಮ ಅಂತ

ಅನಿಸ್ತೈತಿ ನಂಗ ಹೆಣ್ಣ ಮೊದಲೊ ಹೆಣ್ಣಿನ ಕರ್‍ಮಫಲ ಮೊದಲೊ

ಅಮ್ಮನ ಅಮ್ಮ ಹೇಳ್ತಿದ್ಲು

ನಾವು ಹುಟ್ಟೋದಕ್ಕ ಮೊದ್ಲ

ನಮ್ಮ ಹಣೆಬರಹ ಬರ್‍ದಿರ್‍ತೈತಂತ

ಇಂತಹ ಕಡೀನ ಹೆಣ್ಣು ಗಟ್ಟಿಯಾಗಬೇಕು

ಹೆಣ್ಣು ಹೆಣ್ಣಾಗಬೇಕು

ಪರಮಹಂಸ್ರು ಹೇಳ್ತಾರ

ನಿನ್ನ ಕಾಲಿಗೆ ಮೊದ್ಲು ಮೆಟ್ಟು ಹಾಕೋದನ್ನ ಕಲಿ

ಮುಳ್ಳಿನ ಮ್ಯಾಲ ಕಾಲಿಡೋದು ತನ್ನಷ್ಟಕ್ಕ ತಾನ ಗೊತ್ತಾಗ್ತೈತಿ ಅಂತ

ಹೀಂಗ, ಹೆಣ್ಣು ತನ್ನೊಳಗಿನ ತನ್ನ ತಿಳಕ್ಕೊಂಡ್ರ

ಹಣೆಬರಹ ಆಕಿನಂತ ಆಗ್ತೈತಿ, ಇಲ್ಲಾಂದ್ರ

ಸೀತಾಗ ಭೂಮಿಯಾದ್ರು ಬಾಯ ತೆಗಿತು, ಆದರ

ಇವತ್ತಿನ ಹೆಣ್ಣಿಗೆ ತನ್ನೊಂದ ಕಾಲ ಇಡಾಕೂ

ಜಾಗ ಸಿಗಂಗಿಲ್ಲ.


ಶೀಲಾ ಮಳಿಮಠ

ಸಿದ್ದಂಗಳ, ಹೆಚ್.ಐ.ಜಿ.-೧೨೦೭, ಯಲಹಂಕ ಉಪನಗರ, ಬೆಂಗಳೂರು - ೬೪



# ಆರ್ದ್ರ ಗರ್ವದ ಹುಡುಗಿಯರ ಹಾಡು

## (ವೈದೇಹಿಯವರ ಕಾವ್ಯ : ಸ್ತ್ರೀ ಸಂಕಥನ ಸ್ವರೂಪ)

> ವೈದೇಹಿಯವರ ಕಾವ್ಯದಲ್ಲಿ ತಾವು ಪ್ರೀತಿಸಿದ ಗಂಡುಗಳ ಪ್ರೀತಿಯನ್ನೇ ಹಾಸಿ, ಹೊದ್ದು, ಮುಳುಗಿ, ಮತ್ತೆದ್ದು, ವಿಷಾದ, ನಿರಾಸೆ, ನಿರಾಕರಣೆ, ತಲ್ಲಣ, ತಳಮಳಗಳನ್ನು ಅನುಭವಿಸುತ್ತಾ ಪ್ರೀತಿಯನ್ನೇ ತಮ್ಮ ವ್ಯಕ್ತಿತ್ವದ ಮುಖ್ಯ ಅಸ್ಮಿತೆಯಾಗಿಸಿಕೊಂಡ, ಪ್ರೀತಿಯನ್ನೇ ಜೀವ-ಜೀವನಗಳ ದ್ರವ್ಯವಾಗಿಸಿಕೊಂಡ ಹೆಣ್ಣುಮಕ್ಕಳ ಹಾಗೆಯೇ ಅದಕ್ಕೆ ವಿರುದ್ಧ ನೆಲೆಯಲ್ಲಿ ನಿಂತು, ಪುರುಷ ಪ್ರಧಾನ ಸಮಾಜದ ಮೌಲ್ಯಗಳನ್ನು ನಿರ್ಭೀತಿಯಿಂದ ಪ್ರಶ್ನಿಸುವ, ನಿರಾಕರಿಸುವ, ಸೂಕ್ಷ್ಮ ಸಂವೇದನಗಳನ್ನು ಒಳಗೊಂಡ ಹೆಣ್ಣುಮಕ್ಕಳೂ ವೈದೇಹಿಯವರ ಕಾವ್ಯದಲ್ಲಿ ಸಿಗುತ್ತಾರೆ. ಪಿತೃಪ್ರಧಾನ ಸಮಾಜ ತಮಗೆ ಕೊಟ್ಟ ಮಾದರಿಯನ್ನು ನಿರಾಕರಿಸಿ ತಮ್ಮ ಸ್ವಂತಿಕೆಯ ಹುಡುಕಾಟದಲ್ಲಿ ತೊಡಗಿಕೊಂಡು ಅದನ್ನು ಸಮಾಜದೆದುರು ಪ್ರಸ್ತುತಪಡಿಸುವಲ್ಲಿ ತೊಡಗಿದ ಹೆಣ್ಣುಮಕ್ಕಳಿವರು.

**ವೈ**ದೇಹಿಯವರು ಅದ್ಭುತ ಕಥೆಗಾರ್ತಿ. ಅವರ ಕಥೆಗಳಲ್ಲಿನ ಭಾಷೆಯ ಕಾವ್ಯಾತ್ಮಕ ಗುಣವನ್ನು ಬಹುತೇಕ ವಿಮರ್ಶಕರು, ಸಹೃದಯರು ಈಗಾಗಲೇ ಗುರುತಿಸಿದ್ದಾರೆ. ಕಾವ್ಯಾತ್ಮಕ ಭಾಷೆ ವೈದೇಹಿಯವರ ಬರಹದ ಬಹಳ ಮುಖ್ಯಗುಣ. ವೈದೇಹಿ ಕವಯಿತ್ರಿಯಾಗಿಯೂ ಮಹತ್ತ್ವಗಳಿಸಿರುವುದು ಆಕಸ್ಮಿಕವಲ್ಲ. ವೈದೇಹಿಯವರ ಎರಡು ಕವನ ಸಂಕಲನಗಳು ಪ್ರಕಟಗೊಂಡಿವೆ. 'ಬಿಂದು ಬಿಂದಿಗೆ' (೧೯೯೦) ಮತ್ತು 'ಪಾರಿಜಾತ' (೧೯೯೯).

ಅವರ ಮೊದಲನೆಯ ಸಂಕಲನದ ಶೀರ್ಷಿಕೆಯಲ್ಲಿನ ಬಿಂದು, ಬಿಂದಿಗೆ - ಎರಡೂ ಪದಗಳು ಮಹಿಳೆಯರ ಬದುಕನ್ನು ಸಂಕೇತಿಸುತ್ತಾ, ಅರ್ಥ ಮತ್ತು ಧ್ವನಿಗಳನ್ನು ವಿಸ್ತರಿಸುವ ಪದಗಳೇ ಆಗಿವೆ. ಈ ಸಂಕಲನದಲ್ಲಿಯೇ ಇರುವ, 'ತಿಳಿದವರೇ... ಹೇಳಿ' ಮತ್ತು ಪಾರಿಜಾತದಲ್ಲಿರುವ 'ಹಾಡುವುದೆಂದರೆ' 'ಚುಕ್ಕಿಪದ್ಯ' ಹಾಗೂ 'ಮುಗುದೆಯ ಸಮಸ್ಯೆ' ಕವನಗಳು ಕಾವ್ಯಕ್ರಿಯೆಯಲ್ಲಿ ತೊಡಗಿಕೊಂಡ ಮಹಿಳೆಯ ಅನನ್ಯ ಅನುಭವ ವಿಶೇಷಗಳನ್ನು ಸಂಕಥನ ಮಾಡುತ್ತವೆ.

ವೈದೇಹಿಯವರ 'ಕಾವ್ಯಮೀಮಾಂಸೆ' ಎಂದೇ ಗುರುತಾಗಿರುವ 'ತಿಳಿದವರೇ... ಹೇಳಿ' ಕವನದಲ್ಲಿ ವೈದೇಹಿ ತಮ್ಮ ಸ್ತ್ರೀಲೋಕದ ಅನುಭವ ಪರಿಕರಗಳೊಡನೆ ಪುರುಷಲೋಕದ ನಿಲುವುಗಳನ್ನು ಛಿದ್ರಗೊಳಿಸುವ, ಮತ್ತೆ ಅಲ್ಲಿ ತಮ್ಮತನ, ಸ್ವಂತಿಕೆಯನ್ನು ಗುರುತಿಸಿ, ವಿಸ್ತರಿಸುವ ಪ್ರಯತ್ನವನ್ನು ಯಶಸ್ವಿಯಾಗಿಯೇ ನಡೆಸಿದ್ದಾರೆ. ಅದಾಗಲೇ ಜನಾಭಿರುಚಿಯಲ್ಲಿ ಸ್ಥಾನಗಳಿಸಿ ಪಟ್ಟಾಗಿ ಕುಳಿತುಬಿಟ್ಟಿರುವ 'ಮಾಂಸದಡುಗೆಯ ಒಡ್ಡೋಲಗ'ದಲ್ಲಿ 'ಕುದಿಕುದಿದು ಬತ್ತಿ' ರಾತ್ರಿಯಾದರೂ ಹಳಸದೆ ಉಳಿದುಕೊಳ್ಳುವ 'ತಿಳಿಸಾರಿ'ನ ಅಸ್ತಿತ್ವವನ್ನು ಗುರುತಿಸಿ, ಪ್ರತಿಪಾದಿಸುವ ಕೆಲಸ ಸದ್ದುಗದ್ದಲವಿಲ್ಲದೆ ತಣ್ಣಗೆ ಈ ಕವನದಲ್ಲಿ ಜರುಗುತ್ತದೆ. ಅದು ಮೇಲುನೋಟಕ್ಕೆ ಕಾವ್ಯಕ್ರಿಯೆಗೆ ಸಂಬಂಧಪಟ್ಟಂತೆ ಕಂಡರೂ ಒಳಾರ್ಥದಲ್ಲಿ ಎರಡು ಭಿನ್ನ ವ್ಯಕ್ತಿತ್ವಗಳ ಅನಾವರಣವನ್ನೂ ಮಾಡುತ್ತದೆ. ಭಿನ್ನತೆಗಳು ಅಸಮಾನತೆಯ ಅಡಿಗಲ್ಲುಗಳಾಗಬೇಕಿಲ್ಲ ಎಂಬ ತತ್ತ್ವವನ್ನು ಎತ್ತಿಹಿಡಿಯುತ್ತದೆ. 'ಕಾವ್ಯದ ಬಗ್ಗೆ ತಿಳಿದವರೇ। ಹೇಳಿ ನನಗೆ ಕಾವ್ಯ ಗೊತ್ತಿಲ್ಲ।' ಎಂಬ ವ್ಯಂಗ್ಯ ಮತ್ತು ಒಪ್ಪಿಗೆಗಳ ಮೂಲಕವೇ ಆರಂಭಗೊಳ್ಳುವ ಕವನ 'ತಿಳಿಸಾರು ಗೊತ್ತು' ಎಂಬುದನ್ನು ಯಾವುದೇ ಕೀಳರಿಮೆ, ಪೂರ್ವಗ್ರಹಗಳಿಲ್ಲದೆ ಎತ್ತಿ ಹಿಡಿಯುತ್ತದೆ. 'ಮಾಂಸದಡುಗೆಯ ಒಡ್ಡೋಲಗದಲ್ಲಿ' ತಿಳಿಸಾರು ಅಸ್ತಿತ್ವವೇ ಇಲ್ಲದಂತೆ ಬದುಕಬೇಕಾಗಿರುವ ಸ್ಥಿತಿಯಲ್ಲಿ, ಕವನ 'ತಿಳಿಸಾರಿ'ನ ಮಹತ್ತ್ವವನ್ನು ಗುರುತಿಸುತ್ತಾ ಹೋಗುತ್ತದೆ. 'ತಿಳಿಸಾರು ಎಂದರೆ ಏನೆಂದುಕೊಂಡಿರಿ ?' ಪ್ರಶ್ನೆಯಲ್ಲಿ ಕವಯಿತ್ರಿಯ ಅಭಿಮಾನ, ಆಸ್ಮಿತೆಗಳು ಗುರುತಾಗುತ್ತವೆ. ''ಜಲತತ್ತ್ವ-ಗಂಧತತ್ತ್ವ - ಕುದಿದು ಹದಗೊಂಡ ಸಾರತತ್ತ್ವ'' – ಹೀಗೆ ಎಲ್ಲವೂ ಒಂದುಗೂಡಿ 'ತಿಳಿಸಾರು' ಆಗುತ್ತದೆ. ಆ ತತ್ತ್ವಗಳು ಹದಗೊಂಡು ಒಂದಾದ ಕಾರಣವಾಗಿಯೇ ರಾತ್ರಿಯಾದರೂ ಅದು ಹಳಸದೆ ಹಾಗೇ ಉಳಿಯುತ್ತದೆ. ಮತ್ತೆ ಕವನ 'ಕಾವ್ಯದ ಬಗ್ಗೆ ದೊಡ್ಡಕೆ ತಿಳಿದವರೇ। ಹೇಳಿ. ಗೊತ್ತೇ ತಿಳಿಸಾರು ನಿಮಗೆ ? ಕ್ಷಮಿಸಿ, ಗೊತ್ತಿಲ್ಲ ಕಾವ್ಯ ನನಗೆ'। ಎಂಬ ವ್ಯಂಗ್ಯದೊಂದಿಗೇ ಅಂತ್ಯವಾಗುತ್ತದೆ.

ವಾಸ್ತವ ಜಗತ್ತು ಮತ್ತು ಕಾವ್ಯ ಜಗತ್ತುಗಳೆರಡೂ ಸ್ತ್ರೀ ಮತ್ತು ಸ್ತ್ರೀಸಂವೇದನೆಗಳನ್ನು ಅವಜ್ಞೆಗೆ ಒಳಪಡಿಸಿರುವ ಸಂದರ್ಭದಲ್ಲಿ ಕಾವ್ಯ ರಚಿಸುತ್ತಿರುವ ಯಾವುದೇ ಓರ್ವ ಮಹಿಳೆಗೂ ತುರ್ತಾಗಿ ಬೇಕಾದ ಸ್ವಂತಿಕೆ ಮತ್ತು ಆತ್ಮವಿಶ್ವಾಸಗಳು ಘನೀಕೃತಗೊಂಡ ಅನುಭವವನ್ನು ಈ ಕವನ ಕಟ್ಟಿಕೊಡುತ್ತದೆ. ತನ್ನ ಸತ್ಯ, ಸಹಜ ಅನುಭವಗಳ ಅಭಿವ್ಯಕ್ತಿ ಕ್ಷುಲ್ಲಕವಾಗಬೇಕಿಲ್ಲ, ಸಂಕೋಚಕ್ಕೆ ಒಳಗಾಗಬೇಕಿಲ್ಲ. ಅದು ತನ್ನಿಂದ ತಾನೇ ಪೂರ್ಣವಾದುದು, ಸ್ವಂತಿಕೆ ಉಳ್ಳದ್ದು ಎಂಬ ಸೃಜನಶೀಲ ಪ್ರಜ್ಞೆಯನ್ನು ಕವಿತೆ ಇಡಿಯಾಗಿ ಕಟ್ಟಿಕೊಡುತ್ತದೆ.

'ಮಾಂಸದಡುಗೆ' ಮತ್ತು 'ತಿಳಿಸಾರು' ಕೇವಲ ರುಚಿ, ಅಭಿರುಚಿಗಳ ಪ್ರಶ್ನೆಯಾಗಿಯಷ್ಟೇ ಉಳಿದುಕೊಳ್ಳುವುದಿಲ್ಲ. ಅವು ಆಯಾಯ ಜಗತ್ತುಗಳು ಪ್ರತಿನಿಧಿಸುವ ತಾತ್ತ್ವಿಕ ನೆಲೆಗಳನ್ನೂ ಧ್ವನಿಸುತ್ತವೆ. 'ಮಾಂಸದಡುಗೆಯ ಒಡ್ಡೋಲಗ'ದ ವೈಭವ ಎಷ್ಟು ಸತ್ಯ ಮತ್ತು ಅಭಿಮಾನಾರ್ಹ ವಿಷಯವೋ, ರಾತ್ರಿಯಾದರೂ ಹಳಸದ ತಿಳಿಸಾರಿನ ಅಸ್ತಿತ್ವವೂ ಅಷ್ಟೇ ಸತ್ಯ ಮತ್ತು ಅಭಿಮಾನಾರ್ಹವಾದುದು. 'ನಿಮ್ಮಂತೆಯೇ ನಾವಾಗುತ್ತೇವೆ' ಎಂದು ಸಮಾನತೆ ಸಾಧಿಸಹೊರಡದ, 'ನಾವಿರುವಂತೆಯೇ ನಾವು ನಿಮಗೆ ಸಮಾನ' ಎಂದು ಹೇಳುವ ಇಲ್ಲಿನ ಮನಃಸ್ಥಿತಿ ಸ್ತ್ರೀಸಂಕಥನದ ಬಹಳ ಮುಖ್ಯ ಕೇಂದ್ರ. ಹಾಗೆ ನೋಡಿದರೆ ವೈದೇಹಿಯವರ ಒಟ್ಟು ಸಾಹಿತ್ಯಧ್ವನಿಯೇ ಅದಾಗಿದೆ ಎಂದರೆ ತಪ್ಪಲ್ಲ.

ಸೃಜನಶೀಲಕ್ರಿಯೆಯ ಒಳಹೊರಗುಗಳನ್ನು ಸ್ತ್ರೀಕೇಂದ್ರಿತ ನೆಲೆಯಲ್ಲಿ ಹಿಡಿದಿಡುವ ಕಾರ್ಯ 'ಹಾಡುವುದೆಂದರೆ' ಮತ್ತು 'ಮುಗುದೆಯ ಸಮಸ್ಯೆ' ಕವನಗಳಲ್ಲಿ ನಡೆದಿದೆ.

**ಎಂ. ಎಸ್. ವೇದಾ**

'ಹಾಡುವುದೆಂದರೆ' ಕವನ, ಕಾವ್ಯಕ್ರಿಯೆಯನ್ನು ಉಸಿರಾಡುವಷ್ಟೇ ಸಹಜವಾಗಿ ನೋಡುತ್ತದೆ. ಈ ಕುರಿತ ಹಾಗೆ ಕವನ ಜನಪದ ನಿಲುವುಗಳತ್ತಲೇ ವಾಲುತ್ತದೆ. ಕಾವ್ಯದಲ್ಲಿ ಶಬ್ದಾಲಂಕಾರ, ರಾಗ, ಪ್ರಸ್ತಾರ ಈ ಅಂಶಗಳೇ ಮುಖ್ಯವಲ್ಲದೆ 'ಭಾವಕೋಶ'ವೇ ಮುಖ್ಯವಾಗುವುದನ್ನು ಕವಿತೆ ಎತ್ತಿಹಿಡಿಯುತ್ತದೆ. ಹಾಡು 'ಕಟ್ಟು'ವಂಥದ್ದಲ್ಲ. ಬದುಕೇ ಹಾಡಾದ ರೀತಿಯದು. ''ಮಾತು ಆಡುತ್ತ ಅರೆದದ್ದು, ಕೇರಿದ್ದು, ಹೆಕ್ಕಿದ್ದು, ಮೌನ ತೇಯುತ್ತ ತೆತ್ತಿದ್ದು, ಅತ್ತಿದ್ದು, ಸಂಭ್ರಮಿಸಿದ್ದು, ಹಾಂ ಹೋ ಹೇ ನಡುವೆ ವಿಜ್ರುಂಭಿಸಿದ್ದೇ'' ಹಾಡಾಗಿದೆ. ಇಲ್ಲಿ ಮಾತಿಗೂ ಧ್ವನಿಯಿದೆ. ಮೌನಕ್ಕೂ ಧ್ವನಿಯಿದೆ. ''ಹಾಡಿಗೆಲ್ಲಿದೆ ಕೊರತೆ ನಮ್ಮ ನಾರಿಯರಿಗೆ'' ? ಎಂದು ವೈದೇಹಿ ಇಲ್ಲಿ ಪ್ರಶ್ನಿಸುತ್ತಾರೆ. ''... ಬರಹವನ್ನು ಸ್ತ್ರೀಯರು ಸಹಜವಾಗಿ ಬಳಸಬಲ್ಲರು... ಅದು ವ್ಯಕ್ತಿತ್ವಕ್ಕಿಂತ ಬೇರೆಯಾಗಿ ರೂಪುಗೊಳ್ಳುವ ಕೃತಕವಾದ ನುಡಿಗಳಲ್ಲ. ಮತ್ತು 'ವಿಶ್ರಾಂತಿ'ಯ ಭಾಗವೂ ಅಲ್ಲ.. ಹೇಳುವುದನ್ನು ತಮ್ಮ ವ್ಯಕ್ತಿತ್ವದ ಮುಂದುವರಿಕೆಯ ಭಾಗವಾಗಿಯೇ ರೂಢಿಸಿಕೊಂಡಿದ್ದಾರೆ...'' ಸ್ತ್ರೀ ಸಂವಹನವನ್ನು ಕುರಿತಂತೆ ವಿಮರ್ಶಕರು ಹೇಳುವ ಈ ಮಾತುಗಳಿಗೆ ಪೂರಕವಾಗಿ ಇಡೀ ಕವಿತೆ ಸ್ತ್ರೀಸೃಜನಶೀಲಕ್ರಿಯೆಯನ್ನು ವ್ಯಾಖ್ಯಾನಿಸುತ್ತದೆ. (ಹಾಗೆ ನೋಡಿದರೆ ವೈದೇಹಿಯವರ ಕಾವ್ಯದಲ್ಲಿ ಹಾಡಿಗೆ ಬಹಳ ದೊಡ್ಡ ಸ್ಥಾನವಿದೆ. ಬದುಕು ಬೇರೆಯಲ್ಲ, ಹಾಡು ಬೇರೆಯಲ್ಲ. ಅವರ ಕಾವ್ಯದಲ್ಲಿ ಬರುವ ಹುಡುಗಿಯರೆಲ್ಲ ಹಾಡಿಕೊಳ್ಳುತ್ತಲೇ ಇರುವವರು ಮತ್ತು ಹಾಡಿನಲ್ಲಿಯೇ ತಮ್ಮ ಜೀವನಾನುಭವ, ಜೀವನ ಪ್ರೀತಿಗಳನ್ನು ಅಭಿವ್ಯಕ್ತಿಸಿ, ಉಳಿಸಿಕೊಳ್ಳುತ್ತಿರುವವರೂ ಆಗಿದ್ದಾರೆ.)

ಹೊನಲ ನಡುವಿನ ಬಾಳ ದೋಣಿ ಮನೆ ನಾವು
ನೋವು ನಲಿವಾದಾಗ ನರಳುವೆವು ಬಿರಿಯುವೆವು
ನರಳು ಬಿರಿವುಗಳೇ ಹಾಡಾಗಿ ಘಮಿಸಿದರೆ
ಕಾವ್ಯ ದೇವತೆಗೆಂದು ಅರ್ಪಿಸುವೆವು

ಕಾವ್ಯಕ್ರಿಯೆಗೆ ಸಂಬಂಧಿಸಿದಂತೆ ಕವಯಿತ್ರಿ ಕೊಡುವ ಈ ವ್ಯಾಖ್ಯಾನ ಬದುಕಿಗೆ ಬದ್ಧವಾಗಿರುವಂಥದ್ದು. ಇಹದ ಬದುಕಿನ ಸುಖ, ದುಃಖಗಳೇ ಹಾಡಾಗುವ, ಪಾಡಾಗುವ, ಕಾವ್ಯದೇವತೆಗೆ ಅರ್ಪಿತವಾಗುವ ಕಾವ್ಯಕ್ರಿಯೆಯನ್ನು ವೈದೇಹಿ, ಕಾವ್ಯಮೀಮಾಂಸೆಯಾಗಿ, ವಿದ್ವತ್ತಿನ ಕ್ರಿಯೆಯಾಗಿ ನೋಡುವುದಿಲ್ಲ. ಬದುಕಿನ ನಿರಂತರ ಪ್ರಕ್ರಿಯೆಯಾಗಿ ನೋಡುತ್ತಾರೆ. ''ಅಡುಗೆ ಮನೆ ಕಿಟಕಿಯಲ್ಲಿ। ನೆನೆದು ಕುಳಿತಿಹ ಹಕ್ಕಿ। ಪಕ್ಕಾ ಇಹದ ಹಾಡು। ದೇವರಿನ್ನಾಕೆ ? - ಕರೆಯುವುದಿಲ್ಲ''। (ದೇವರಿನ್ನಾಕೆ ? ಕರೆಯುವುದಿಲ್ಲ). ಕಾವ್ಯಕ್ರಿಯೆ ಸ್ತ್ರೀಗೆ 'ಇಹದ ಹಾಡಾ'ಗುವುದೇ ಅವಳ ಕಾವ್ಯದ ಬಹುದೊಡ್ಡ ಇತ್ಯಾತ್ಮಕ ಅಂಶವಾಗಿದೆ. ಅಂತಹ 'ಹಾಡಿ'ಗೆ ಎಷ್ಟೆಲ್ಲಾ ಅಡೆತಡೆಗಳು ಬಂದರೂ ''ನಾ ಹಾಡುವುದನು ಮಾತ್ರ ನಿಲ್ಲಿಸುವುದಿಲ್ಲ'' ಎನ್ನುವ ನಿಲುವು, ಇಲ್ಲಿನ ಹೆಣ್ಣುಮಗಳದು.

'ಚುಕ್ಕಿಪದ್ಯ' ಅವಳ ಕಾವ್ಯಕ್ರಿಯೆಯ ತುರ್ತುಗಳೇನು ಎಂಬುದನ್ನು ನೇರವಾಗಿ ಅನಾವರಣಗೊಳಿಸುತ್ತದೆ. 'ಏನೋ ಒಂದು ಹೇಳಲಿತ್ತು। ಹೇಳಲಾರದೆ। ಪದ್ಯ ಬರೆದಳು। ಏನೋ ಒಂದು ತಿಳಿಯಲಿತ್ತು। ತಿಳಿಯಲಾರದ ಪದ್ಯ ಬರೆದಳು।' ಎಂದು ಆರಂಭವಾಗುವ ಪದ್ಯ, ಅವಳ




...ಅವ್ರು ಯಾಕೆ ನಾಯಿ ಸಾಕಿದ್ದಾರೆ ಅಂತ ಗೊತ್ತಾಯ್ತು ಈಗ...!!

'ಅಳಲು, ನಗಲು, ಬಿಗುಮಾನ ಬಿಡಲು, ಮೌನದ ಆದಿರೂಪ ಬಿಡಿಸಿ ನೋಡುವಾಸೆಯಿಂದ, ಹುಡುಗು ಬುದ್ಧಿಯಿಂದ ಬರೆಯಹೋದದ್ದಕ್ಕೇ ಯಾವ ಹೆಸರು ಎಂದು ತಿಳಿಯದೆ 'ಪದ್ಯ' ಎಂದು ಹೆಸರಿಡುತ್ತಾಳೆ ಅವಳು. ಅವಳು ಬರೆದ ಪದ್ಯದ ಮಹತ್ವ ಏನು ಎಂಬುದರಲ್ಲಿ 'ಚುಕ್ಕಿಪದ್ಯ'ದ ಮಹತ್ವ ಕಂಡುಬರುತ್ತದೆ. 'ಓದುವೆಯಾ ಅವಳ ಪದ್ಯ ? ಓದಲಾರೆ ಗೆಳತಿ ನೀನು। ನೋಡುವೆಯ ? ನೋಡಲಾರೆ। ಟೇಪು ಹಿಡಿದು ಅಳೆಯಲಾರೆ। ಒರೆಗಲ್ಲಿಗೆ ಶಬ್ದ ತಿಕ್ಕಿ। ಮಂಜುಟ್ಟಿ ಗುಲಗಂಜಿ ಸಮಕೆ। ತೂಕ ಹೇಳಲಾರೆ। ಅವಳ ಪದ್ಯ ಅವಳದೇ। ನೀನು ಮುಟ್ಟಲಾರೆ।'

ಇಡೀ ಪದ್ಯ 'ಅವಳ' 'ಪದ್ಯ'ದ ಹುಟ್ಟು, ಅದಕ್ಕೆ ಕಾರಣ, ಪದ್ಯದ ಬೆಳವಣಿಗೆಯ ಪ್ರಕ್ರಿಯೆಗಳನ್ನು ಆಚ್ಚರಿಯ ಸಂಗತಿಯೆಂದೇ ವಿವರಿಸುತ್ತದೆ. ಅವಳ ಪದ್ಯವನ್ನು ''ಓದಲಾಗದ, ಅಳೆಯಲಾಗದ, ಒರೆಗಲ್ಲಿಗೆ ತಿಕ್ಕಿ ತೂಕ ಹೇಳಲಾರದ'' ಪರಿಮಿತಿ ಪದ್ಯದಾಚೆಗಿನ ಓದುಗ ಲೋಕದ್ದು. ಕೊನೆಪಕ್ಷ ಅದನ್ನು 'ಮುಟ್ಟ'ಬೇಕೆಂದರೆ ಅದೂ ಸಾಧ್ಯವಾಗುವಂಥದಲ್ಲ. ಇಲ್ಲಿ ವ್ಯಕ್ತವಾಗುತ್ತಿರುವುದು 'ಅವಳ' ಅಹಂಕಾರದ ಭಾವವಲ್ಲ. ಅವಳ ಪದ್ಯದ ಅನನ್ಯತೆಯ ಭಾವ. ಗೆಳತಿಗೇ ಮುಟ್ಟಲಾರದ ಅವಳ 'ಪದ್ಯ' 'ಗೆಳೆಯ'ರು ಮುಟ್ಟುವ ವಿಷಯದಿಂದ ಬಹಳವೇ ದೂರ ಉಳಿಯುತ್ತದೆ. ಅವಳ ಪದ್ಯವನ್ನು 'ಮುಟ್ಟು'ವುದಕ್ಕೂ ಒಂದು ತಯಾರಿಕೆ ಅವಶ್ಯಕತೆ ಇದೆ ಎಂಬುದನ್ನು ಪರೋಕ್ಷವಾಗಿ ಎತ್ತಿ ಹಿಡಿಯುವ ಅನುಭವವನ್ನು ಕವಿತೆ ಮೂಡಿಸುತ್ತದೆ.

ಬದುಕಿಗೆ ಬದ್ಧವಾಗಿರುವ, ತನ್ನಿಂದ ತಾನೇ ಅನನ್ಯವಾಗಿರುವ ಈ ಕಾವ್ಯಕ್ರಿಯೆಯಲ್ಲಿ ತೊಡಗುವಾಗ ಮಹಿಳೆ ತಾನು ಮಹಿಳೆಯಾಗಿರುವ ಕಾರಣಕ್ಕೇ ಎದುರಿಸುವ ಸಮಸ್ಯೆಗಳು 'ಮುಗುದೆಯ ಸಮಸ್ಯೆ' ಕವನದಲ್ಲಿ ತೆರೆದುಕೊಳ್ಳುತ್ತದೆ. ಮೇಲುನೋಟಕ್ಕೆ ಹಾಸ್ಯದಂತೆ ಕಂಡರೂ ಅದು ಅಲ್ಲಿಯೇ ವಿರಮಿಸುವುದಿಲ್ಲ. ಹಾಸ್ಯದ ಮೂಲಕವೇ ಸಹೃದಯರ ಮುಂದೆ ಗಂಭೀರ ಸಮಸ್ಯೆಯೊಂದನ್ನು ಇಡುತ್ತದೆ. ಅಡುಗೆಯ ಮನೆಯನ್ನೆ ಜಗತ್ತಾಗಿ ಹೊಂದಿದ ಭಾರತೀಯ ನಾರಿಯ ಸಮಸ್ಯೆಯದು. ''ಗುಡುಗುಡುಗುಡು ಅರೆಯುವಾಗ। ಮನದ ಗರಿಗೆದರಿ। ಎಂತೆಂಥ ಲಹರಿ !''ಗಳು ಅವಳಲ್ಲಿ ಮೂಡಿಬಿಡುತ್ತವೆ. ಅವುಗಳನ್ನು ಬಂಧಿಸಿಡಲು ಅವಳುಟ್ಟಿರುವ ಸೀರೆಗೆ ಸಾಧ್ಯವಾಗುತ್ತಿಲ್ಲ. ಹಾಗಾಗಿ ''ಸೀರೆಯುಡುವುದನೆ ಬಿಟ್ಟು ತೊಡಲೆ ಜೇಬಿನಂಗೀ ?'' ಎಂದು ಪ್ರಶ್ನಿಸುತ್ತಾಳೆ. ಏಕೆಂದರೆ ''ಮುದ್ದುರವಗಳನ್ನು। ಒದ್ದೆ ಕೈಗಳಿಂದ ಬಂಧಿಸಿಡಲು'' ಸಾಧ್ಯವಾಗುತ್ತದೆಯೆಂಬ ಆಸೆಯಿಂದ, 'ಭಾರತೀಯ ನಾರಿ। ಆವಿಯಾಗಿ ಹೋಗುತ್ತಿರುವೆ। ಸೂಚಿಸುವೆಯ ದಾರಿ ?' ಎಂಬ ವಿಷಾದದ ಪ್ರಶ್ನೆಯೊಂದಿಗೆ ಕವನ ಮುಕ್ತಾಯವಾಗುತ್ತದೆ. ಸೀರೆ ಮತ್ತು ಜೇಬಿನಂಗಿಗಳು ಸಮಾಜದಲ್ಲಿ ಹೊಂದಿರುವ ಹೆಣ್ಣು-ಗಂಡುಗಳ ನಡುವಿನ ಅಸಮಾನತೆಯನ್ನು ಇಡಿಯಾಗಿ ಹೊರಡಿಸುತ್ತವೆ. ತನ್ನೆಲ್ಲಾ ದಿನನಿತ್ಯದ ಕೆಲಸಕಾರ್ಯಗಳ ನಡುವಿನ ತನ್ನ ಸೃಜನಶೀಲತೆಯನ್ನು ಕಾದಿರಿಸಿಕೊಳ್ಳಬೇಕಾದ ಸವಾಲು ಅವಳ ಮುಂದಿದೆ. ಹಾಗಾಗಿ ಅವಳ ಸೃಜನಶೀಲತೆ, ಗಂಡಿನದಕ್ಕಿಂತ ಹಿರಿದಾಗಿಯೇ ಗುರುತಾಗಬೇಕಾಗುತ್ತದೆ. ಆದರೆ ಹಾಗೇನೂ ಗುರುತಾಗುತ್ತಿಲ್ಲವೆಂಬುದೇ ದುರಂತ. ನಾರಿಗೆ ಹಾಡು ಸಹಜವಾಗಿ ಹುಟ್ಟಿನೊಡನೆಯೇ ಬರುವ ಪ್ರತಿಭೆಯಾದರೂ ಅದು ಎಷ್ಟೆಲ್ಲ ಅಡೆತಡೆಗಳನ್ನು ದಾಟಿ ಅಭಿವ್ಯಕ್ತಗೊಳ್ಳಬೇಕಾಗುತ್ತದೆ. ದಾಟಲು ಸಾಧ್ಯವಾಗದ ಎಷ್ಟೋ ಪ್ರತಿಭೆಗಳು ಹಾಗೆಯೇ ಮುರುಟಿಯೂ ಹೋಗಬಹುದು. ಸ್ತ್ರೀ ಅಭಿವ್ಯಕ್ತಿಗೆ ಸಂಬಂಧಪಟ್ಟ ಈ ಎಲ್ಲ ವಿಚಾರಗಳೂ ಅಖಂಡವಾಗಿ ಸ್ತ್ರೀ ಸಂಕಥನವನ್ನೇ ಮಾಡುತ್ತವೆ.

ವೈದೇಹಿಯವರ ಬಹುಪಾಲು ಕವಿತೆಗಳು ಸ್ತ್ರೀಕೇಂದ್ರಿತವಾಗೇ ಇದ್ದು ಅವಳ ಭಾವ, ಅನುಭವಗಳನ್ನೇ ಅಭಿವ್ಯಕ್ತಿಸಿವೆ. 'ಬಿಂದುಬಿಂದಿಗೆ'ಯ ಮೊದಲಭಾಗಕ್ಕೆ 'ಅವಳ ಕವಿತೆಗಳು' ಎಂದು ಕೊಟ್ಟಿರುವ ಶೀರ್ಷಿಕೆ ಅರ್ಥಪೂರ್ಣವಾದುದೆ ಆಗಿದೆ. ''ಅವಳ ಕವಿತೆ''ಗಳು ಯಾವೊಬ್ಬ ಹೆಣ್ಣಿನ ಕವಿತೆಗಳೂ ಆಗಬಹುದು. ಅನುಭವಗಳೂ ಆಗಬಹುದು. ಸ್ತ್ರೀಲೋಕವೇ ಇಲ್ಲಿನ ಎಲ್ಲ ಕವಿತೆಗಳ ಕೇಂದ್ರ. ತನ್ನ ಲೋಕ, ತನ್ನ ಭಾವ, ತನ್ನ ಅನುಭವ, ತನ್ನ ಸಾಧನ, ತನ್ನ ಪರಿಕರಗಳು – ಹೀಗೆ ಎಲ್ಲವುಗಳಲ್ಲಿಯೂ 'ತನ್ನ'ದ್ದನ್ನೇ ಅಭಿವ್ಯಕ್ತಿಸುವ, ಅನ್ವೇಷಿಸುವ, ವಿಶ್ಲೇಷಿಸುವ ಕಾರ್ಯವನ್ನು 'ಅವಳ ಕವಿತೆಗಳು' ಅಖಂಡವಾಗಿ ನಿರ್ವಹಿಸುತ್ತವೆ. ಇಲ್ಲಿನ ಕವಿತೆಗಳಲ್ಲಿ 'ವರುಷಕೊಮ್ಮೆ ಕುಸಿಯುವ ಮಾಡಿಗೆ ಹೊಸಹುಲ್ಲು ಹೊದೆಸುವ' ಹುಡುಗಿಯಿಂದ ಹಿಡಿದು ಚಂದ್ರಾಮ ದೇವನನ್ನು ಪ್ರೀತಿಸುವ ಬೆರಣಿ ತಟ್ಟುವ ಹುಡುಗಿ, ಅಡುಗೆ ಮನೆಯ ಹುಡುಗಿ, ಯಾರೇ ಈ ಪ್ರಬುದ್ಧದೇವ ? ಎಂದು ಪ್ರಶ್ನಿಸುವ ಹುಡುಗಿ, ಶಿವನ ಮೀಸುವ ಹುಡುಗಿ, ಪೋಲಿ ವನಮಾಲಿಯನ್ನು ಪ್ರೀತಿಸಿದ ಗೋಪಿಯಪಾಡಿನ ಹುಡುಗಿ – ಹೀಗೆ ಎಷ್ಟು ಬಗೆಯ, ಎಂತೆಂಥ ತಳಮಳ, ಕಳವಳಗಳನ್ನು ಹೊಂದಿದ ಅವುಗಳನ್ನು ತಮಗೆ ತಿಳಿದಂತೆ ಮೀರಲೆತ್ನಿಸಿದ, ಮೀರಿದ

ವರ್ತಮಾನ, ಭವಿಷ್ಯತ್ತುಗಳನ್ನು ಅರ್ಥೈಸುವ ಧ್ವನಿಪೂರ್ಣ ಪರಿಕರಗಳಾಗಿಬಿಡುತ್ತವೆ. ಯಾರದೋ ಪುಟ ಹರಿಯದ ನಕ್ಷೆ, 'ಕೇದಗೆ' ಹೂವಿಯದಾ ನೆನಪು, ಕಾಪಿಟ್ಟ ಹುಟ್ಟಿದಿನಗಳು, ಅರೆಬರೆದ ಕವನ, ಕರವಸ್ತ್ರದಲಿ ಅಡಗಿರುವ ಬಿಸುಸುಯ್ಯಲು, ಉತ್ಕಂಠರಾಗದ ಮತ್ತಿರುವ ಪತ್ರವಿದ್ದಿರಬಹುದಾದ ಖಾಲಿ ಲಕೋಟೆ, ಹೆಸರಿಲ್ಲದವನ ಫೋಟೋ, ಹೀಗೆ ಚೀಲದೊಳಗಿನ ಪ್ರತಿಯೊಂದು ವಸ್ತುವಿಗೂ ಒಂದೊಂದು ಅರ್ಥ, ಸಂಕೇತಗಳು ದೊರೆತುಕೊಂಡು ಚೀಲ ಅವಳ ಬದುಕಿನ ಕಥೆಯನ್ನು ಹೇಳುವ ವಕ್ತಾರವೇ ಆಗಿಬಿಡುತ್ತದೆ. ಅದಕ್ಕೆ ಕವಯಿತ್ರಿ ಕೊಡುವ ವ್ಯಾಖ್ಯಾನ ಅರ್ಥಪೂರ್ಣವಾದುದು.

ಬಾಲ್ಯ ಯೌವನವೃದ್ಧಾಪ್ಯ ನೆರಳುಗಳು ।
ಸೇರಿಕೊಂಡಿರಬಹುದು ಆ ಕೋಶದಲ್ಲಿ ।
ಗಾರ್ಹಸ್ಥ್ಯ ವೇಶ್ಯಾ ಅಭಿಸಾರವಾಸನೆಗಳು ।
ಧರ್ಮಲಕ್ಷಣ ಅವಸ್ಥಾಂತರವೇಷದಲ್ಲಿ ।
(ನೋಡಬಾರದು ಚೀಲದೊಳಗನು)

ಒಂದು ಗಂಡು ತನ್ನೆಲ್ಲಾ ವಾಸನೆಗಳ ಮೂಲಕವೇ ಸತ್ಯವಾಗುವ ಸಮಾಜದಲ್ಲಿ ಮಹಿಳೆಯನ್ನು ವಾಸನೆಗಳ ಪ್ರಪಂಚದಿಂದಲೇ ದೂರವಿಟ್ಟು 'ಪರಮಪಾತಿವ್ರತ್ಯ'ದ 'ದಿವ್ಯ'ದಲ್ಲಿ ಪ್ರತಿಷ್ಠಾಪಿಸಿಬಿಟ್ಟಿರುವ ವಾಸ್ತವವೂ ಇದೆ. ಆ 'ದಿವ್ಯ'ದ ಸೋಗನ್ನು ಕಳಚಿ ಅವಳೊಳಗಿರುವ ವಾಸನಾ ಪ್ರಪಂಚಕ್ಕೆ ಮನೋರೂಪವನ್ನಾದರೂ ಕೊಡುವ ಕಾರ್ಯವನ್ನು ಕವಿತೆ ನಿರ್ವಹಿಸುತ್ತದೆ. ಹಾಗೆಂದು ಚೀಲದೊಳಗಿನ ಲೋಕ ಮತ್ತು ಮನಸಿನ ಲೋಕ ಎರಡೂ ಒಂದೇ ಎಂದು ತೂಗುವುದನ್ನು, ತಪ್ಪು ಸಮೀಕರಣವೆಂದೂ ಕವಿತೆ ಎಚ್ಚರಿಸುತ್ತದೆ. ಏಕೆಂದರೆ ಚೀಲದೊಳಗೆ ಇಣುಕಿ ನೋಡಬಹುದಾದರೂ ಮನಸ್ಸಿನೊಳಗಡೆ ಇಣುಕಿ ನೋಡಲಾಗದ ಅಲ್ಲಿಂದೇನೂ ಹೊರ ತೆಗೆಯಲಾರದ ಪರಿಮಿತಿ ಪುರುಷಲೋಕಕ್ಕೆ ಇದ್ದೇ ಇದೆ.

ಚೀಲದ ರೂಪಕವನ್ನಿಟ್ಟುಕೊಂಡು ವೈದೇಹಿಯವರು, ಕವಿತೆಯಲ್ಲಿ ಮಹಿಳೆಯನ್ನು ಕುರಿತಾದ ಸಂಕೀರ್ಣ ಚಿತ್ರಣವೊಂದನ್ನು ನೀಡುತ್ತಾರೆ. ಆ ಚಿತ್ರಣ ಅವಳನ್ನು ಕುರಿತಂತೆ ಯಾವ ಪೂರ್ವ ಗ್ರಹೀತಗಳೂ, ಲೆಕ್ಕಾಚಾರಗಳೂ, ಸಮೀಕರಣಗಳೂ ಸಾಧ್ಯವಿಲ್ಲ ಎಂಬ ಸತ್ಯವನ್ನು ಎತ್ತಿಹಿಡಿದು ಪುರುಷಲೋಕದ ಪರಿಮಿತಿಯನ್ನು ಬೊಟ್ಟು ಮಾಡಿ ತೋರಿಸುತ್ತದೆ. ಹೆಣ್ಣುಗಳ ಚೀಲವೆಂದು ನಿಕೃಷ್ಟನೋಟಕ್ಕೆ ಒಳಗಾಗುವ ಚೀಲ, ಅದೇ ಹೆಣ್ಣುಮಕ್ಕಳ ಅಸ್ಮಿತೆಯ ದೊಡ್ಡ ಸಂಕೇತವಾಗಿ ಸ್ಥಾಪಿತವಾಗುವುದು ಕವಿತೆಯ ಯಶಸ್ಸಾಗಿದೆ.

ತನ್ನ ಅಸ್ಮಿತೆಯನ್ನು ಗುರುತಿಸಿಕೊಂಡು, ಅದನ್ನು ಸ್ಥಾಪಿಸುವ, ಅದಕ್ಕೆ ಅಡ್ಡಿಯಾಗುತ್ತಿರುವ ಪಿತೃಪ್ರಧಾನ ಮೌಲ್ಯಗಳನ್ನು ಪ್ರಶ್ನಿಸುವ, ಪ್ರತಿಭಟಿಸುವ, ವ್ಯಂಗ್ಯ ಮಾಡುವ ಸ್ತ್ರೀಸಂವೇದನೆಗಳನ್ನು ಒಳಗೊಂಡ ಸಂಕಥನಗಳು ವೈದೇಹಿಯವರ ಹಲವು ಕವಿತೆಗಳಲ್ಲಿ ನೋಡಲು ಬರುತ್ತವೆ. 'ನಮ್ಮ ಹಿರಿಯರು ಯಾರು ಕೇಳು ಮಗಳೇ', ''ಸ್ವಯಂವರಗೀತೆ'' (ಪಾರಿಜಾತ) ಕವನಗಳಲ್ಲಿ ಅದನ್ನು ಸಾಂದ್ರವಾಗಿ ಕಾಣಬಹುದು.

ನಮ್ಮ ಹಿರಿಯರು (ಅವರನ್ನೇ ಪಿತೃಗಳೆನ್ನಬಹುದು) ಸೃಷ್ಟಿಸಿದ ಮೌಲ್ಯಗಳು ಸ್ತ್ರೀಯರ ಸುತ್ತ ಬೇಲಿಗಳನ್ನೇ ನಿರ್ಮಿಸಿವೆ ಅಂತಹ ವ್ಯವಸ್ಥೆಯಲ್ಲಿ ಸ್ತ್ರೀಯರು

## ಏಕಾಕಿ

ನಲ್ಲಾ .

ಜಗತ್ತಿನ ಜಾತ್ರೆಯಲ್ಲಿ
ನೀನೆಲ್ಲಿ ಕಳೆದು ಹೋದೆ !
ಬದುಕಿನ ಯಾತ್ರೆಯಲ್ಲಿ
ನಾನಿಲ್ಲಿ ಏಕಾಕಿಯಾದೆ !!

ಕುಸುಮ ನಕೋಸಾ ಕರಾಳೆ

'ಹೊಸಿಲಾಚೆಯೇನುಂಟು?। ಪ್ರಶ್ನಾರ್ಥಕವ ಚಿವುಟ ।
ಕೆನ್ನೆ ತಟ್ಟಿಸಿಕೊಂಡು ಬಾಡಿದವರು,ಒಳಗೋಡಿದವರು।'
ಮಾತ್ರವೇ ಆಗಿದ್ದಾರೆ. 'ಓದುವ, ಬರೆವ, ಕಲಿವಾಸೆಗಳೆಲ್ಲವೂ ಅವರಲ್ಲಿ ಅಂಗಳ ತುಂಬ ಥಕಥೈ' ಎಂದು ಕುಣಿದಿವೆ. ಆದರೆ ವ್ಯವಸ್ಥೆ 'ಚೆಂಗರುವನ್ನು ಬಿಗಿದು ಬಿಗಿದು ಕಟ್ಟಿದಂತೆ' ಸ್ತ್ರೀಯರನ್ನು ಕಟ್ಟಿ ಹಾಕಿದೆ. ಇಂತಹ ವ್ಯವಸ್ಥೆಯಲ್ಲಿ ಸ್ತ್ರೀಯರಿಗೆ ಸಿಕ್ಕ ಬದುಕಾದರೂ ಎಂಥದ್ದು ?

'ಹತ್ತಿ ಉರಿಯದ ಸೌದೆ, ಭಕ್ತಿಭಾವದ ಬದುಕು
ಉಸಿರ ಬಿಸಿಯನೆ ಒಟ್ಟಿ ಒಲೆಯನೂದಿದರು'

ಎಂಬಂತಹ ಬದುಕು. ಅಂತಹ ಬದುಕಿನಲ್ಲಿ ಹೆಣ್ಣುಮಕ್ಕಳು ಸ್ವಂತಕ್ಕೇನು ಬೇಕು ? ಎಂಬುದನ್ನು ಮರೆತವರು ಆಗಿ ಈ ಸಮಾಜ ಏನಾಗಬೇಕೆಂದು ಬಯಸಿತೋ ಅದೇ ಆಗಿ, ಆಗಿ ಬದುಕಿದರು.

ರಾತ್ರಿ ಹಾಸಿಗೆಯಾಗಿ, ಹಗಲು ದಾಸಿಯೇ ಆಗಿ
ಶ್ಲೋಕಕ್ಕೆ ತಕ್ಕಂತೆ ಪಾಕ ಮುಗುಚಿದರು.

ಅವರು ಹೇಳಿದಂತೆಯೇ 'ಆಗಿ' ಬದುಕಿದರೂ ಅವರಿಗೊಂದು ಅಸ್ತಿತ್ವ ದೊರೆಯಿತೆ ? ಎಂದರೆ ಅದೂ ಇಲ್ಲ.

ಅಟ್ಟರೂ ಬರಿಯ ಒಗ್ಗರಣೆಯಾದರು
ಉಟ್ಟ ಸೀರೆ ತೊಟ್ಟ ಆಭರಣವಾದರು
ಬಾಣಂತಿ ಕೋಣೆಯಲಿ ಅಜ್ಞಾತವಾದರು.

ನಿರ್ಜೀವ ವಸ್ತುಗಳೊಂದಿಗೆ ಅವರೂ ನಿರ್ಜೀವ ವಸ್ತುಗಳಾಗಿಯೇ ಆಟಕ್ಕುಂಟು, ಲೆಕ್ಕಕ್ಕಿಲ್ಲದ ಬಾಬಿನವರಾಗಿಯೇ ಉಳಿದರು. ಅಲ್ಲಿ ಇಲ್ಲಿ ಅವರ ವಿರುದ್ಧ ಧ್ವನಿ ಎತ್ತಿದ ಸ್ತ್ರೀಯರ ಧ್ವನಿಯನ್ನೂ ಆ ವ್ಯವಸ್ಥೆ ಮುಚ್ಚಿಹಾಕಿದೆ. ಆ ದಾಖಲೆಗಳೂ ಇವೆ.

ಇಂತಹ ವ್ಯವಸ್ಥೆಯನ್ನು ಕುರಿತಂತೆ, ಆ ವ್ಯವಸ್ಥೆಯಲ್ಲಿ ನೊಂದು ಬೆಂದಿರುವ ತಾಯಿ, ಮಗಳಿಗೆ ಎಚ್ಚರಿಕೆ ಕೊಡುತ್ತಾಳೆ :

'ನನ್ನ ಮಗಳೇ ಕೇಳು ನಮ್ಮ ಹಿರಿಯರ ಹಾದಿ
ರಕ್ತ ಒಣಗಿದ ಸರಳು । ಒಣ
ಮರಮರಮರಾಮಮಂತ್ರದ ಮರಳು ।
ಸಾಲು ಉರುಳು । ನಡೆ ಮಗೂ ಹೆಗಲಲಿದೆ ।
ಸಾವಿರ ಸವಾಲು ।

ಹಿರಿಯರೆನ್ನಿಸಿಕೊಂಡವರು ರೂಪಿಸಿ, ಹೆಣ್ಣುಗಳ ಮೇಲೆ ಹೇರಿದ ವ್ಯವಸ್ಥೆಯಲ್ಲಿ ಯಾವುವೂ ಇತ್ಯಾತ್ಮಕವಾದವುಗಳೇ ಅಲ್ಲ, ಎಲ್ಲವೂ ನೇತ್ಯಾತ್ಮಕ ನೆಲೆಗಟ್ಟಿನಲ್ಲಿಯೇ ರೂಪುಗೊಂಡವುಗಳಾಗಿವೆ. ಅಂತಹ ವ್ಯವಸ್ಥೆಯ ಭಾಗವಾಗಿ ಕಳೆದುಹೋಗಿರಬಹುದಾದ ತಾಯಿಯೊಬ್ಬಳು ಮಗಳಿಗೆ ವ್ಯವಸ್ಥೆ ಕುರಿತು ಎಚ್ಚರಿಕೆ ನೀಡಿ ಅದರ ವಿರುದ್ಧ ನಿಲ್ಲಬೇಕಾಗಿರುವ ಮಗಳ ಹೆಗಲ ಮೇಲಿನ ಸಾವಿರಾರು ಸವಾಲುಗಳನ್ನು ನೆನಪಿಸಿಕೊಡುತ್ತಾಳೆ.

ಸ್ತ್ರೀಯ ಬದುಕಿನ ಸಮಸ್ಯೆಗಳಿಗೆ ಅವಳದೇ ಆದ ಕಾರಣಗಳು ಇವೆಯೆಂದು ಅನ್ನಿಸುವುದಿಲ್ಲ. ಪುರುಷ ಪ್ರಪಂಚದ ಹಸ್ತಕ್ಷೇಪವೇ ಅವಳ ಬದುಕಲ್ಲಿ ಸಮಸ್ಯೆಗಳನ್ನು ತಂದೊಡ್ಡಿದೆ. ಅಂತಹ ಸಂದರ್ಭದಲ್ಲಿಯೂ ಅವಳ ಚೈತನ್ಯ ಉಡುಗದ ಧೀಶಕ್ತಿಯ ಕಡೆಗೇ ವೈದೇಹಿಯವರು ತಮ್ಮ ಕಾವ್ಯದಲ್ಲಿ ಒತ್ತು ಕೊಡುತ್ತಾರೆ. ಹೆಣ್ಣಿನ ಅದಮ್ಯ ಚೈತನ್ಯದ ಬಗೆಗೆ ಅವರಿಗೆ ಹೆಚ್ಚು ಆತ್ಮವಿಶ್ವಾಸವಿದೆ. ಸೂರ್ಯನನ್ನೂ ಮೀರಿಸಿದ 'ಸುಡುವ ಕಾಯಕ' ಅವಳದು. ಆದರೆ ಅವಳು ಸುಟ್ಟು ಕರಕಲಾಗಿ ಅಸ್ತಿತ್ವವನ್ನು ಕಳೆದುಕೊಂಡು ಬಿಡುವುದಿಲ್ಲ. ಸ್ವತಃ ಸೂರ್ಯಳಾಗಿ – 'ನಿತ್ಯ ಮೂಡುತ ನಿತ್ಯ ಮುಳುಗುತ । ಕಷ್ಟ ಸುಖಗಳ ಬೆಟ್ಟ ಕಡಲಲಿ । ನಿತ್ಯ ಸುಡುತಿಹೆನು ।' (ಬಿಂದು-ಬಿಂದಿಗೆ) ಎನ್ನುತ್ತಲೇ ಉಳಿದುಕೊಳ್ಳುತ್ತಾಳೆ.

ಭೂಮಿಯ ಮೇಲಿನ ಸೂರ್ಯಳಾಗಿರುವ ಸ್ತ್ರೀಯ ಸಂಕಥನ ತಾಯಿಯಾಗಿ, ಮಗಳಾಗಿ, ಹೆಂಡತಿಯಾಗಿ, ಅಕ್ಕನಾಗಿ, ತಂಗಿಯಾಗಿ ಹೀಗೆ ಹಲವು ಪಾತ್ರಗಳಲ್ಲಿ ವೈದೇಹಿಯವರ ಕವನಗಳಲ್ಲಿ ತೆರೆದುಕೊಳ್ಳುತ್ತಾ ಹೋಗುತ್ತದೆ. ಎಂತಹ ಸ್ಥಿತಿಯಲ್ಲಿಯೂ ವೈದೇಹಿಯವರ ಕಾವ್ಯದ ಮಹಿಳೆ ಬದುಕಿಗೆ ಬೆನ್ನುಹಾಕದವಳಾಗಿಯೇ ಸ್ಥಾಪಿತಳಾಗುತ್ತಾಳೆ. ವ್ಯವಸ್ಥೆಯನ್ನು ಪ್ರತಿಭಟಿಸಿ, ಧಿಕ್ಕರಿಸುವುದು ಅವಳಿಗೆ ಎಷ್ಟು ಮುಖ್ಯವಾಗಿದೆಯೋ, ತನಗೆ ದಕ್ಕಿದ ಬದುಕಿನಲ್ಲಿ ತನ್ನನ್ನು ಕಳೆದುಕೊಳ್ಳದೆ ಬದುಕುವುದೂ ಅವಳಿಗೆ ಅಷ್ಟೇ ಮುಖ್ಯವಾಗಿದೆ. ಹಾಗಾಗಿ ವೈದೇಹಿಯವರ ಕಾವ್ಯದಲ್ಲಿ ಬರುವ ಮಹಿಳೆಯರು ಸಂಸಾರವನ್ನು ನಿರಾಕರಿಸಿ, 'ಗಂಗೆ ಗೌರಿಯ ತುಂಬು ಸಂಸಾರವಂದಿಗನನ್ನು ಹುಡುಕಿ ಹೊರಟುಬಿಟ್ಟ' ಅಕ್ಕನ ಹಾದಿಯತ್ತ ಕುತೂಹಲ ತೋರುವುದಿಲ್ಲ. (ಸಂಸಾರಿ ಪದ). ವನದ ಕರೆ ಕೇಳಿದರೂ ತಾಳಿಕೊಳ್ಳುವ ಗುಣ ಅವರಲ್ಲಿದೆ. ಏಕೆಂದರೆ ಅವರಿಗೆ 'ಉರಿಯುವುದಾದರೂ, ಅರೆಯುವುದಾದರೂ' ಇಹದ ಬದುಕು ಮುಖ್ಯವಾಗಿದೆ. ಬದುಕನ್ನು ಎತ್ತಿ ಹಿಡಿಯುವ ಮೌಲ್ಯಕ್ಕಿಂತ ಬದುಕಿನಲ್ಲಿ ಮತ್ತಾವ ಹಿರಿದಾದ ಮೌಲ್ಯಗಳೂ ಇರಲು ಸಾಧ್ಯವಿಲ್ಲ ಎಂಬುದನ್ನು ಒಪ್ಪಿಕೊಂಡಾಗ ವೈದೇಹಿಯವರ ಕಾವ್ಯದಲ್ಲಿ ಬರುವ ಸ್ತ್ರೀ ಸಂಕಥನಗಳು 'ಸಾರ್ಥಕ'ವಾಗಿ ಕಂಡುಬರುತ್ತವೆ, 'ಸಾರ್ಥಕತೆ'ಯನ್ನು ಹೊಂದುತ್ತವೆ.

ಎಂ. ಎಸ್. ವೇದಾ
'ಅಲಂಪು', ಮ. ಸಂ. ೧೨೫೭, ಪಡುವಣ ರಸ್ತೆ, ೪ನೇ ತಿರುವು ೪ನೇ ಹಂತ, ಟಿ. ಕೆ. ಬಡಾವಣೆ, ಕುವೆಂಪು ನಗರ, ಮೈಸೂರು - ೨೩



## ವಸಿಷ್ಠರು ಮತ್ತು ವಾಲ್ಮೀಕಿಯರು

(ಸಮಾಜವಾದಿ ಸಂಕಥನಗಳು - ೩)

ಡಿ. ಎಸ್. ನಾಗಭೂಷಣ

**ಪುಟ : xii + ೩೫೬** **ಬೆಲೆ : ರೂ. ೧೫೦**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ' ಕಪ್ಪಗಲ್ಲು ರಸ್ತೆ

ಗಾಂಧಿನಗರ, ಬಳ್ಳಾರಿ - ೫೮೩ ೧೦೩.

ರಾಮಮನೋಹರ ಲೋಹಿಯಾ ಅವರ ಜನ್ಮಶತಮಾನ ಉತ್ಸವದ ಅಂಗವಾಗಿ, ಸಮಾಜವಾದೀ ಸಂಕಥನಗಳೆಂಬ ರೂಪದಲ್ಲಿ ಇಲ್ಲಿನ ಬರಹಗಳನ್ನು ಸಂಗ್ರಹಿಸಿ ಲೋಹಿಯಾ ಪ್ರಕಾಶನ ಹೊರತಂದಿದೆ. ಇವು ಶ್ರೀ ಡಿ. ಎಸ್. ನಾಗಭೂಷಣ ಅವರ ಮೌಲಿಕ, ವಿದ್ವತ್ಪೂರ್ಣ, ಸಮಾಜವಾದಿ ಚಿಂತನೆಯ ಪ್ರಬುದ್ಧ ಬರಹಗಳು. ಸಮಾಜವಾದ ಸೋಗಿನ ಪ್ರದರ್ಶನವಾಗಬಾರದು. ನಮ್ಮ ದೇಶದಲ್ಲಿ ಮಾತ್ರ ಇದೇ ಆಗಿದ್ದು, ನಮ್ಮ ಕಾಲದ ರಾಜಕೀಯ ತಲ್ಲಣಗಳ, ಸಾಮಾಜಿಕ ತಳಮಳಗಳ ಸ್ಪಷ್ಟ ನೋಟ ಮತ್ತು ಅರಿವು ನಮ್ಮಲ್ಲಿದ್ದೂ ನಾವೇಕೆ ಅನ್ಯಾಯದ ವಿರುದ್ಧ ದನಿಯೆತ್ತುತ್ತಿಲ್ಲವೆಂಬ ಆತಂಕವೂ ಈ ಬರಹಗಳಲ್ಲಿದೆ. ವಿಶಾಲ ವ್ಯಾಪ್ತಿಯ ನೇರ, ಸ್ಪಷ್ಟ, ನಿಷ್ಠುರ ಬರವಣಿಗೆ ಇವರ ವೈಶಿಷ್ಟ್ಯ.




## ದಶರಥನ ವನವಾಸ

(ಚಿತ್ರಾ ಮುದ್ಗಲ್ ಅವರ ಹತ್ತು ಪ್ರತಿನಿಧಿ ಕತೆಗಳು)



ಕನ್ನಡಕ್ಕೆ : ಆರ್. ಪಿ. ಹೆಗಡೆ

**ಪುಟ : ೨೦೪** **ಬೆಲೆ : ರೂ. ೯೦**

**ಚಿಂತನ ಪುಸ್ತಕ ಮಳಿಗೆ**, ಪಂಡಿತ್ ಸಾರ್ವಜನಿಕ ಲೈಬ್ರರಿ

ಶಿರಸಿ, ಉತ್ತರ ಕನ್ನಡ ಜಿಲ್ಲೆ - ೫೮೧ ೪೦೧

ಕಡುಬಡವರ, ಅಸಹಾಯಕರ ಬದುಕಿನೊಳಹೊಕ್ಕು ಅವರನ್ನು ಗ್ರಹಿಸಿ ಬರೆದಿರುವ ಕಥೆಗಳಿವು. ಸಂಪೂರ್ಣ ವ್ಯಕ್ತಿಗತವೆಂಬಂತೆ ಕಂಡುಬರುವ, ಅವರವರ ಹಣೆಬರಹವೆಂಬಂತೆ ವ್ಯಾಖ್ಯಾನಿಸಲಾಗುವ ಕಷ್ಟಕಾರ್ಪಣ್ಯಗಳಿಗೆ ಸಹ ಮಾನವರು ಒಳ್ಳೆಯ ಅಥವಾ ಕೆಟ್ಟ ರೀತಿಯಲ್ಲಿ ಸ್ಪಂದಿಸುವ ಸಂದರ್ಭಗಳು ಕಥೆಗಳಲ್ಲಿ ಹೇರಳವಾಗಿವೆ. ಬದುಕಲೇಬೇಕೆಂಬ ಪ್ರೀತಿ ಮತ್ತು ಛಲವನ್ನು ಹೊತ್ತ ಕಥಾಪಾತ್ರಗಳಿಗೆ ಬಡತನದ ಬಗ್ಗೆ ಬೇಸರವಿಲ್ಲ; ತಮ್ಮ ದೌರ್ಬಲ್ಯಗಳನ್ನು ಹೊಂಚುಹಾಕಿ ಅದನ್ನೇ ಮುಂದುಮಾಡಿ ಪಗಡೆಯಾಡುವ ಜನರ ಬಗ್ಗೆ ಆಕ್ರೋಶವಿರುವುದು 'ಪ್ರಾಣ' ಮತ್ತು 'ಹಸಿವು' ಕಥೆಗಳಲ್ಲಿ. ಬಹಳ ಜಾಗ್ರತೆಯಿಂದ ಮಾಡಿದ ಶ್ರೀ ಆರ್. ಪಿ. ಹೆಗಡೆ ಅವರ ಅನುವಾದವಂತೂ ಕನ್ನಡದ ಸ್ವಂತ ಕಥೆಗಳೇನೋ ಎನ್ನುವಂತಿವೆ.

## ಭಾರತದಲ್ಲಿ ಶಿಕ್ಷಣ - ಸವಾಲು ಸಾಧ್ಯತೆ



ಕನ್ನಡಕ್ಕೆ : ಆರ್. ಡಿ. ಹೆಗಡೆ

**ಪುಟ : iv + ೧೦೦** **ಬೆಲೆ : ರೂ. ೬೦**

**ಚಿಂತನ ಪುಸ್ತಕ ಮಳಿಗೆ**, ಪಂಡಿತ್ ಸಾರ್ವಜನಿಕ ಲೈಬ್ರರಿ

ಶಿರಸಿ, ಉತ್ತರ ಕನ್ನಡ ಜಿಲ್ಲೆ - ೫೮೧ ೪೦೧

ಮುಖಪುಟದಲ್ಲಿನ ಶಾಲಾ ಬಾಲಕರಿಬ್ಬರು ಕಠಿಣ ಕಲ್ಲುಬಂಡೆಯ ಮೇಲೆ ಬರಿಗಾಲನ್ನಿಟ್ಟು ಮುಖದಲ್ಲಿ ಭಯ, ಆತಂಕವಿದ್ದರೂ ಅಷ್ಟೇ ಹಟವನ್ನು ತೋರ್ಪಡಿಸುತ್ತ ಶಾಲೆಗೆ ಹೋಗುತ್ತಿದ್ದಾರೆ. ಬಡ ವಿದ್ಯಾರ್ಥಿಗಳಿಗೆ ಭಾರತದ ಇಂದಿನ ಶಿಕ್ಷಣ ಪದ್ಧತಿ ಎಷ್ಟು ತ್ರಾಸದಾಯಕವೆಂಬುದರ ಸಂಕೇತವಿದು. ಶಿಕ್ಷಣವು ವಾಣಿಜ್ಯೀಕರಣಗೊಂಡು ಬೌದ್ಧಿಕ ಅರ್ಹತೆಗಿಂತ ಆರ್ಥಿಕ ಅರ್ಹತೆ ಮೇಲುಗೈಯಾಗಿದ್ದು ಬಡವರಿಗೆ ಶಿಕ್ಷಣ ಗಗನಕುಸುಮವಾಗಿದೆ. ಸರಕಾರಗಳು ಬದಲಾದಂತೆ ಪಠ್ಯಗಳನ್ನು ಆಡಳಿತ ಪಕ್ಷಕ್ಕೆ ಬೇಕಾದಂತೆ ಬದಲಾಯಿಸುವ ಅಪಾಯಕಾರಿ ಬೆಳವಣಿಗೆ ವಿರುದ್ಧ ಈಗಾಗಲೇ ಬುದ್ಧಿಜೀವಿಗಳು ದನಿಯೆತ್ತಿದ್ದಾರೆ. ಶಿಕ್ಷಣತಜ್ಞರು, ವಿಶ್ವವಿದ್ಯಾನಿಲಯಗಳ ಪ್ರಾಧ್ಯಾಪಕರು ಈ ಬಗ್ಗೆ ನಡೆಸಿದ ಚಿಂತನೆಗಳ ಸಂಗ್ರಹ. ಶ್ರೀ ಆರ್. ಡಿ. ಹೆಗಡೆ ಇವನ್ನು ಅನುವಾದಿಸಿದ್ದಾರೆ.



## ಲೋಹದ ಕಣ್ಣು (ಕವನ ಸಂಕಲನ)

ಡಾ|| ಎಚ್. ಎಲ್. ಪುಷ್ಪ

**ಪುಟ : ೧೦೪** **ಬೆಲೆ : ರೂ. ೫೦**

**ಲೋಹಿಯಾ ಪ್ರಕಾಶನ**, 'ಕ್ಷಿತಿಜ' ಕಪ್ಪಗಲ್ಲು ರಸ್ತೆ

ಗಾಂಧಿನಗರ, ಬಳ್ಳಾರಿ - ೫೮೩ ೧೦೩

ಶ್ರೀಮತಿ ಎಚ್. ಎಲ್. ಪುಷ್ಪ ಆಧುನಿಕ ಕಾವ್ಯದಲ್ಲಿ ಪರಿಚಿತ ಹೆಸರು. ಬಹಳ ಕಾಲದ ನಂತರ ಅವರ ಕವನ ಸಂಕಲನ ಇದೀಗ ಹೊರಬಂದಿದೆ. ಈಗಾಗಲೇ ವಿಮರ್ಶಕರನೇಕರಿಂದ ಮೆಚ್ಚುಗೆ ಗಳಿಸಿರುವ ಕವಯಿತ್ರಿಗೆ ಅನೇಕ ಪ್ರಶಸ್ತಿಗಳು ಸಂದಿವೆ. ವಿಭಿನ್ನ ಜಾಡು ಹಿಡಿದು ರೂಪಕದ ಭಾಷೆಯಲ್ಲಿ ಇರುವ ಇಲ್ಲಿನ ಕವಿತೆಗಳು ಸಾಮಾನ್ಯ ಓದುಗನನ್ನು ಸ್ವಲ್ಪಮಟ್ಟಿಗೆ ಕಂಗಾಲು ಮಾಡುತ್ತವೆ. ''ಇಲ್ಲಿನ ಕೆಲವು ಕವಿತೆಗಳು ತೃಪ್ತಿಕೊಟ್ಟರೆ ಇನ್ನು ಕೆಲವು ನಿಜಾರ್ಥದಲ್ಲಿ ಅರೆ ರೂಪು ತಳೆದ ಶಿಶುಗಳೇ ಆಗಿವೆ'' ಎಂದು ಪುಸ್ತಕದಲ್ಲಿನ ಅರಿಕೆಯಲ್ಲಿ ಶ್ರೀಮತಿ ಪುಷ್ಪ ತಮ್ಮ ಅಳಲು ವ್ಯಕ್ತಪಡಿಸಿ, ಇನ್ನೂ ಚೆನ್ನಾಗಿ ಬರೆಯಬೇಕಾದ ಬಗ್ಗೆ ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದಾರೆ. ಖ್ಯಾತ ವಿಮರ್ಶಕ ಡಾ|| ಜಿ. ಎಸ್. ಆಮೂರ ಅವರ ಶುಭ ಹಾರೈಕೆಯ ಮುನ್ನುಡಿ ಇರುವ ಈ ಸಂಕಲನದಲ್ಲಿ ೩೪ ಕವಿತೆಗಳಿವೆ.



## ಪೃಥ್ವಿಯ ಯಶೋಗಾಥೆ

ಎಂ. ವೆಂಕಟಸ್ವಾಮಿ

**ಪುಟ : ೧೬೦ + iv** **ಬೆಲೆ : ರೂ. ೯೦**

**ಜಾಗೃತಿ ಪ್ರಿಂಟರ್ಸ್**, ನಂ. ೫೬/೧-೬, ನರಸಿಂಹಯ್ಯ ಗಾರ್ಡನ್, ಕೊಟ್ಟಿಗೆಪಾಳ್ಯ, ಮಾಗಡಿ ಮುಖ್ಯರಸ್ತೆ

ಬೆಂಗಳೂರು - ೫೬೦ ೦೯೧

ರತ್ನಗರ್ಭಾ ವಸುಂಧರಾ ಎಂದು ವರ್ಣಿಸಲ್ಪಟ್ಟ ನಮ್ಮ ಭೂಮಿಯ ಅಂತರಾಳದ ಬಗ್ಗೆ ನಮಗೆಷ್ಟು ಗೊತ್ತಿದೆ? ಭೂಮಿ ಎಂದರೆ ಬರಿಮಣ್ಣು. ಪ್ರತಿಯೊಂದು ವಸ್ತುವಿನ ಮೂಲವೂ ಮಣ್ಣಿಂದಲೇ. ಆಹಾರ, ಜೀವಜಲಗಳಿಂದ ಸಕಲ ಜೀವರಾಶಿಯನ್ನು ಪೊರೆಯುವ ಭೂಮಿ ತನ್ನೊಡಲೊಳಗಿನ ಜ್ವಾಲಾಮುಖಿ, ಭೂಕಂಪ, ಸುನಾಮಿ ಯಂತಹ ಅತಿರೇಕಗಳಿಂದ ನಾಶವನ್ನೂ ಮಾಡಬಲ್ಲುದು. ಭೂಗರ್ಭಶಾಸ್ತ್ರಜ್ಞರು ಇಂದು ಭೂಮಿಯ, ಸಾಗರಗಳ ಸ್ವರೂಪದ ಬಗ್ಗೆ ಅನೇಕ ರಹಸ್ಯಗಳನ್ನು ಪತ್ತೆಮಾಡಿದ್ದಾರೆ. ದುರುಳ ಮನುಷ್ಯನಂತೂ ಭೂಮಿಯು ವರವಾಗಿ ನೀಡಿದ್ದರಲ್ಲಿ ತೃಪ್ತನಾಗದೆ ದರೋಡೆಕೋರನಂತೆ ವರ್ತಿಸಿ ಶಾಪಗ್ರಸ್ತನಾಗಿದ್ದಾನೆ. ಭೂಮಿಯ ರೋಚಕ ಕಥಾನಕವನ್ನು ನಮಗಾಗಿ ತಿಳಿಸಿದವರು ಭೂವಿಜ್ಞಾನಿ ಶ್ರೀ ಎಂ. ವೆಂಕಟಸ್ವಾಮಿ.

## ಸಿರಾ ತಾಲ್ಲೂಕು ದರ್ಶನ




ಡಾ|| ಎನ್. ಸಂದೀಶ್ವರ

**ಪುಟ : xvi + ೬೩೭** **ಬೆಲೆ : ರೂ. ೨೫೦**

**ಪೂರ್ಣಚಂದ್ರ ತೇಜಸ್ವಿ ಪ್ರಕಾಶನ**, ಬಾಲಾಜಿನಗರ, ಸಿರಾ

ತುಮಕೂರು ಜಿಲ್ಲೆ

ಮಾಹಿತಿಗಳ ಮಹಾಪೂರವೇ ಹರಿದುಬಂದಂತಿರುವ ಈ ಪುಸ್ತಕದಲ್ಲಿ ಸಿರಾ ತಾಲ್ಲೂಕು ಹಾಗೂ ಸುತ್ತಮುತ್ತಲ ಗ್ರಾಮಗಳ ಪರಿಚಯವಿದೆ. ಎಲ್ಲ ಕ್ಷೇತ್ರಗಳಲ್ಲಿ ಹೆಜ್ಜೆ ಮೂಡಿಸಿ, ವಿಪುಲ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಮೆರೆವ ಈ ನೆಲದ ಪೂರ್ವೇತಿಹಾಸ, ಶೈಕ್ಷಣಿಕ ಸಾಧನೆ, ಬದುಕಿನ ವಿವರ ಇವುಗಳ ಬಗ್ಗೆ ಹೇರಳ ಮಾಹಿತಿಯಿದೆ. ಒಂದೊಂದು ಗ್ರಾಮವನ್ನೂ ಅಕ್ಕರೆಯಿಂದ ಶ್ರದ್ಧೆಯಿಂದ ಅಧ್ಯಯನ ಮಾಡಿದ್ದು ನೋಡಿದಾಗ ಡಾ|| ಎನ್. ಸಂದೀಶ್ವರರ ಸಾಧನೆಯ ಬಗ್ಗೆ ಗೌರವಾದರಗಳು ಮೂಡುತ್ತವೆ. ಗ್ರಾಮೀಣ ಆಚರಣೆಗಳು, ಜನರು ಬಿಡಲೊಪ್ಪದ ಸಂಪ್ರದಾಯಗಳು ಇಂದಿಗೂ ಉಳಿದುಕೊಂಡಿವೆ. ಕೊನೆಯಲ್ಲಿ ವಿವಿಧ ಪತ್ರಿಕೆಗಳಲ್ಲಿ ಮೂಡಿದ ಹಾಗೂ ಬರಹಗಾರರಾಗಿ ಹೆಸರುಮಾಡಿದ ಈ ಪ್ರದೇಶದ ಮಹನೀಯರ ಪರಿಚಯವಿದೆ. ಗ್ರಾಮೀಣ ಪರಿಸರದ ಜಾನಪದ ವಿಶ್ವಕೋಶವೆನ್ನಬಹುದು.

– ಇಂದಿರಾಕುಮಾರಿ

೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨




ಮತ್ತು ದಾರ್ಶನಿಕರೆಂದು ಹೆಸರಾದ ವಿಲ್ ಡ್ಯುರಾಂಟ್ ಅವರ ಸೂಕ್ತಿಯೊಂದಿದೆ :

'ತನ್ನೊಳಗಿನಿಂದಲೇ ತನಗೆ ತಾನೆ ನಾಶವಾಗುವುದನ್ನು ತಪ್ಪಿಸಲಾರದವರೆಗೆ ಯಾವೊಂದು ಮಹಾನ್ ನಾಗರಿಕತೆಯೂ ಜಯವನ್ನು ಗಳಿಸಲಾರದು.'

'ಅಪೊಕಾಲಿಪ್ಟೊ' ಎಂದರೆ ಬೈಬಲ್ಲಿನಲ್ಲಿ ಬರೆದಿರುವ ಭವಿಷ್ಯದರ್ಶನ ಅಥವಾ ಕಾಲಜ್ಞಾನ ಎಂಬರ್ಥವಿದೆಯಾದರೂ ಸಿನಿಮಾದಲ್ಲಿ ಇದೊಂದು ರೂಪಕದಂತೆ ಬಳಕೆಯಾಗಿದ್ದು 'ನವೋದಯ' ಅಥವಾ 'ಅನಾವರಣ' ಎಂಬರ್ಥಗಳನ್ನೂ ಹೊಂದಿದೆ.

ತನ್ನ ಪಾಡಿಗೆ ತಾನು ವಿವಿಧ ವಿನೋದಾವಳಿಗಳು, ಹಾಡು ನೃತ್ಯಗಳು, ಕಥಾಕೇಳಿಗಳೊಂದಿಗೆ ಶಾಂತಿಯಿಂದ ಬದುಕುತ್ತಿದ್ದ ಕಾಡಿನ ಆದಿವಾಸಿಗಳ ಮೇಲೆ ಎರಗುವ ಕಾನನ ಸಾಮ್ರಾಜ್ಯಶಾಹಿಗಳ ಪಡೆಯೊಂದು ಆದಿವಾಸಿಗಳನ್ನು ಹೆಡೆಮುರಿಕಟ್ಟಿ ಗುಲಾಮರನ್ನಾಗಿ ದುಡಿಸಿಕೊಳ್ಳಲು ಮತ್ತು ತಮ್ಮನ್ನು ಸಲಹುವ ದೇವತೆಯ ಪ್ರೀತ್ಯರ್ಥ ಬಲಿ ಕೊಡಲು ಎಳೆದೊಯ್ಯುತ್ತಾರೆ. ತಮ್ಮ ತಾಯಿ-ತಂದೆ-ಬಂಧುಗಳನ್ನು ಅನುಸರಿಸಿಬರುತ್ತಿರುವ ಚಿಕ್ಕಮಕ್ಕಳ ಸಾಲುಗಳನ್ನು ನಾವಿಲ್ಲಿ ನೋಡುತ್ತೇವೆ. ದುಡಿಯಲಾಗದ ಮತ್ತು ಬಲಿಕೊಡಲಾಗದ ಈ ಚಿಕ್ಕಮಕ್ಕಳು ಕಾನನ ಸಾಮ್ರಾಜ್ಯಶಾಹಿಗಳಿಗೆ ಬೇಡವಾಗುತ್ತಾರೆ. ಹೀಗೆ ಹಿಂಬಾಲಿಸಿ ಬರುತ್ತಿದ್ದ ಚಿಕ್ಕಹುಡುಗಿಯೊಬ್ಬಳನ್ನು ಪಡೆಯೊಳಗೊಬ್ಬನು ಕಟ್ಟಿಗೆಯಿಂದ ತಿವಿದು ಹಿಂದಕ್ಕೆ ಅಟ್ಟುತ್ತಾನೆ. ಮನನೊಂದ ಆ ಬಾಲಕಿ ''ನಮ್ಮನ್ನು ಹಿಂಸೆಯಿಂದ ಆಳುತ್ತಿರುವ ನಿಮಗೆ ಕೇಡುಗಾಲ ತಪ್ಪದು! ನಿಮ್ಮ ಜಗತ್ತು ಕೊನೆಕಾಣಲಿದೆ! ಹಗಲಿನಲ್ಲೆ ಕತ್ತಲಾಗುವುದನ್ನು ಕಾಣುವಿರಿ! 'ಚಿರತೆ ಪಂಜ' (ಆದಿವಾಸಿ ಶೂರನ ಹೆಸರು) ನಿಮ್ಮನ್ನು ಕೊಲ್ಲುತ್ತಾನೆ!'' ಎಂದು ಮುಂತಾಗಿ ಭವಿಷ್ಯದರ್ಶನ ಅಥವಾ ಕಾಲಜ್ಞಾನವನ್ನು ನುಡಿಯುತ್ತಾಳೆ. ಹೊಸದಾಗಿ ಸೆರೆಹಿಡಿದ ಗುಲಾಮರನ್ನು ಆ ಸುವಿಶಾಲ ಕೇಂದ್ರೀಕೃತ ಪ್ರದೇಶಕ್ಕೆ ಕರೆತರಲಾಗುತ್ತದೆ. ಅಲ್ಲಿ ಹೆಂಗಸರನ್ನು ಮಾರುಕಟ್ಟೆಯಲ್ಲಿ ಮಾರಾಟಮಾಡುತ್ತಾರೆ. ಗಂಡಸರನ್ನು ಅತ್ಯಂತ ಎತ್ತರವಾದ ಬಲಿಪೀಠಕ್ಕೆ ಕರೆದೊಯ್ಯುತ್ತಾರೆ. ಅಲ್ಲಿ ರಾಜ-ರಾಣಿ-ಪುರೋಹಿತ-ಭೂತವೇಷಧಾರಿಗಳಿರುತ್ತಾರೆ. ಒಬ್ಬೊಬ್ಬ ಗುಲಾಮರನ್ನೆ ಬಲಿಗೊಟ್ಟು, ಹೃದಯವನ್ನು ಹಿರಿದು ತೆಗೆಯುವ, ತಲೆಗಳನ್ನು ಚೆಂಡಾಡುವ,

ವಿ. ಚಂದ್ರಶೇಖರ ನಂಗಲಿ

# ಅಪೊಕಾಲಿಪ್ಟೊದಲ್ಲಿರುವ ಭಂಡಾಟ

ಐಕಾನ್ ಪ್ರೊಡಕ್ಷನ್ ನಿರ್ಮಿಸಿದ ಮೆಲ್ ಗಿಬ್ಸನ್ ಅವರ 'ಅಪೋಕಾಲಿಪ್ಟೊ' ಎಂಬ ಇಂಗ್ಲಿಷ್ ಸಬ್ ಟೈಟಲ್‌ನ ಸಿನಿಮಾ ಬಗ್ಗೆ ಮಿತ್ರರಿಬ್ಬರು ತುಂಬ ಮೆಚ್ಚಿಕೊಂಡು ಮಾತನಾಡಿದ್ದರಿಂದ ನಾನೂ ನೋಡಿದೆ.

ಇದು ಸ್ಪಷ್ಟವಾಗಿ ವ್ಯಾಸ್ಪ್‌ನ ದೃಷ್ಟಿ-ಧೋರಣೆಗಳನ್ನು ಬಿಂಬಿಸುವ ಸಿನಿಮಾ. ವ್ಯಾಸ್ಪ್ ಎಂದರೆ ಬಿಳಿಯ ಆಂಗ್ಲೋ ಸ್ಯಾಕ್ಸನ್ ಪ್ರಾಟೆಸ್ಟಂಟ್ ಎಂದರ್ಥ. ಬಿಳಿಯರು ಭೂಮಿಗೆ ಬಂದ ಭಗವಂತನ ಪ್ರತಿನಿಧಿಗಳು; ಕತ್ತಲೆಯಲ್ಲಿ, ಅಜ್ಞಾನದಲ್ಲಿ ಮುಳುಗಿದ್ದವರನ್ನು ಉದ್ಧರಿಸಲೆಂದು ಬಂದವರು. ಇದನ್ನೆ 'ವೈಟ್ ಮ್ಯಾನ್ಸ್ ಬರ್ಡನ್' (ಬಿಳಿಯರ ಜವಾಬ್ದಾರಿ) ಎನ್ನುವರು. ಈ ಸಿನಿಮಾದ ಕೊನೆಯಲ್ಲಿ ಪವಿತ್ರವಾದ ಶಿಲುಬೆಯ ಲಾಂಛನವನ್ನು ಕೈಯಲ್ಲಿ ಹಿಡಿದು, ಹಡಗುಗಳಲ್ಲಿ ಪ್ರಯಾಣಿಸಿ ದಡಕ್ಕೆ ಬಂದು ನಿಲ್ಲುವ 'ವ್ಯಾಸ್ಪ್'ಗಳನ್ನು ಕಾಣಿಸಲಾಗಿದೆ. ಜಾತಿವೈರವನ್ನು ಮರೆತು ಬೆಕ್ಕಸಬೆರಗಾಗಿ ನೋಡುವ ಎರಡು ಬಣಗಳನ್ನು ತೋರಿಸಲಾಗಿದೆ.

ಈ ಚಿತ್ರದಲ್ಲಿ ತೋರಿಸಿರುವ ಎರಡು ಬಣಗಳಲ್ಲಿ ಕಾಡಿನ ಆದಿವಾಸಿಗಳು ವಿಕೇಂದ್ರೀಕೃತವಾಗಿದ್ದುಕೊಂಡು ಚಿಕ್ಕ ಚಿಕ್ಕ ಗುಂಪುಗಳಲ್ಲಿ ಬದುಕುತ್ತಿರುವವರು ಒಂದು ಪಕ್ಷವಾದರೆ, ಕಾನನ ಸಾಮ್ರಾಜ್ಯಶಾಹಿಗಳದ್ದು ಮತ್ತೊಂದು ಪಕ್ಷ. ಕಾಡುಗಳನ್ನು ಕಡಿದು ಕಲ್ಲಿನ ಕಟ್ಟಡಗಳನ್ನು ಗುಲಾಮರಿಂದ ಕಟ್ಟಿಸಿಕೊಳ್ಳುವ ಕೇಂದ್ರೀಕೃತ ಜೀವನ ವಿಧಾನ. ಕಾಡಿನ ಆದಿವಾಸಿಗಳು ಮತ್ತು ಕಾನನ ಸಾಮ್ರಾಜ್ಯಶಾಹಿಗಳು ಎಂಬ ವರ್ಗೀಕರಣವೇ ತೀರ ಸರಳವಾದ ಕಪ್ಪು-ಬಿಳುಪು ಎನ್ನಬಹುದಾದ ಸಾಧಾರಣೀಕರಣದ ಸಮೀಕರಣಗಳು. ವ್ಯವಸ್ಥಿತವಾದ ಹುನ್ನಾರದಂತೆ ರಚಿತವಾಗಿರುವ ಚಿತ್ರಕಥೆಯೂ ಪೂರ್ವಕಲ್ಪಿತವಾಗಿದೆ ಮತ್ತು ಬಿಳಿಯ ಪಾರಮ್ಯವಾದವನ್ನು ಹೇಳುತ್ತದೆ. ಚಿತ್ರದ ಆರಂಭದಲ್ಲಿ ಖ್ಯಾತ ಇತಿಹಾಸಜ್ಞ



ಮುಂಡಗಳನ್ನು ದಿಂಡುರುಳಿಸುವ ದೃಶ್ಯಗಳಿವೆ. ಈ ಕಾನನ ಸಾಮ್ರಾಜ್ಯಶಾಹಿಗಳು ಇಷ್ಟೆಲ್ಲ ಬಲಿದಾನ ಮಾಡುವುದು ಏಕೆ ಗೊತ್ತೆ? ತಮ್ಮನ್ನು ಪ್ಲೇಗು ಮಾರಿ ಪೀಡಿಸದಿರಲಿ ಎಂದು. (ಪ್ಲೇಗು ಎಂಬ ಬೇನೆ ಅದುವರೆಗೆ ನಾಗರಿಕರಾರೂ ಹೆಜ್ಜೆಯಿಡದ ಆ ಪ್ರದೇಶದಲ್ಲಿ ಹೇಗೆ ಅಡಿಯಿಟ್ಟಿತೊ ತಿಳಿಯದು!)

ನೊಂದ ಬಾಲಕಿಯ ಭವಿಷ್ಯವಾಣಿಯಂತೆಯೇ, ಹಗಲಿನಲ್ಲೆ ಕತ್ತಲಾಗುತ್ತದೆ (ಸೂರ್ಯಗ್ರಹಣ). ಆಗ ಆದಿವಾಸಿಗಳ ಶೂರ 'ಚಿರತೆಪಂಜ' ಸಹಿತ ಎಲ್ಲರನ್ನೂ ವಿಮೋಚನೆಗೊಳಿಸಲಾಗುತ್ತದೆ. ರೋಮನ್ ಅರೆನಾವನ್ನು ಹೋಲುವಂಥ ಬಯಲು ಪ್ರದೇಶಕ್ಕೆ ಕರೆತಂದು ತಮ್ಮ ಕಾಡಿಗೆ ತಾವು ಓಡಿಹೋಗಲು ವಿಮೋಚಿತ ಆದಿವಾಸಿಗಳಿಗೆ ಸೂಚಿಸಲಾಗುತ್ತದೆ. ಬದುಕಿದೆಯಾ ಬಡಜೀವವೆ ಎಂದು ಓಡಿಹೋಗುತ್ತಿದ್ದವರ ಮೇಲೆ ಬಿಲ್ಲು-ಬಾಣಗಳು, ಬರ್ಚಿಗಳು, ಕಲ್ಲು ಗುಂಡುಗಳನ್ನೆಸೆದು ಕೊಲ್ಲುವ ದೃಶ್ಯಗಳಿವೆ. ಇಷ್ಟೆಲ್ಲ ಅಪಾಯಗಳನ್ನು ಎದುರಿಸಿ, ಆದಿವಾಸಿಗಳ ಶೂರ 'ಚಿರತೆಪಂಜ' ತಪ್ಪಿಸಿಕೊಂಡು ತನ್ನ ಹಳ್ಳಿಯ ಕಡೆ ಓಡುತ್ತಾನೆ. ಇದನ್ನೊಂದು ಪ್ರತಿಷ್ಠೆಯನ್ನಾಗಿ ಸ್ವೀಕರಿಸುವ ಕಾನನ ಸಾಮ್ರಾಜ್ಯಶಾಹಿಗಳ ಪಡೆಯು 'ಚಿರತೆಪಂಜ'ನನ್ನು ಅಟ್ಟಿಸಿಕೊಂಡು ಬರುತ್ತಾರೆ. ಕಾಡಿನ ಮಗನಾದ 'ಚಿರತೆಪಂಜ' ಇದರಿಂದ ಧೃತಿಗೆಡದೆ ಶಕ್ತಿ-ಯುಕ್ತಿಗಳಿಂದ ಅವರನ್ನು ಎದುರಿಸಿ ಒಬ್ಬೊಬ್ಬರನ್ನಾಗಿ ಕೊಲ್ಲುತ್ತಾ ಬರುತ್ತಾನೆ. ತನ್ನ ಹಳ್ಳಿಯ ಬಳಿ ನೀರಿಲ್ಲದ ಬಾವಿಯೊಳಗೆ ಇಳಿಬಿಟ್ಟಿದ್ದ ತನ್ನ ತುಂಬು ಗರ್ಭಿಣಿಯಾದ ಪತ್ನಿ ಮತ್ತು ಮಗನನ್ನು ಉಳಿಸಿಕೊಳ್ಳುವ 'ಚಿರತೆಪಂಜ'ನ ಉದ್ದೇಶಕ್ಕೆ ಛಲದಂಕಮಲ್ಲನಾದ ಪಡೆಯೊಳಗೊಬ್ಬನು ಅಡ್ಡಿಯಾಗಿ ಕಡೆಗೆ ಮಿಗದ ಒಡ್ಡು ಬಾಣಕ್ಕೆ ಸಿಕ್ಕು ಸಾಯುತ್ತಾನೆ. ಇದೇ ವೇಳೆಗೆ ಮುಂಗಾರಿನ ಆರ್ಭಟಕ್ಕೆ ಸಿಕ್ಕು, ಮಳೆನೀರು ಹರಿಯುತ್ತಾ ಚಿರತೆಪಂಜನ ಪತ್ನಿ ತುಂಬುಗರ್ಭಿಣಿ ಮತ್ತು ಮಗ ಅಡಗಿದ್ದ ಬಾವಿ ತುಂಬುತ್ತಾ ಬಂದು ಕತ್ತಿನ ಮಟ್ಟದವರೆಗೆ ಏರಿದ ನೀರಲ್ಲೆ ಹೆರಿಗೆಯಾಗಿ ಮಗುವಿನ ಜನನವಾಗುತ್ತದೆ. ಚಿರತೆಪಂಜನನ್ನು ಅಟ್ಟಿಸಿಕೊಂಡುಬರುವ ಕಾನನ ಸಾಮ್ರಾಜ್ಯಶಾಹಿಗಳ ಪಡೆಯಲ್ಲಿ ಇಬ್ಬರು ಮಾತ್ರ ಉಳಿಯುತ್ತಾರೆ. ಚಿರತೆಪಂಜನು ಓಡಿ ಓಡಿ ಸಮುದ್ರ ತೀರಕ್ಕೆ ಬಂದು ಕುಸಿದು ಕುಳಿತುಕೊಳ್ಳುತ್ತಿದ್ದಂತೆಯೇ, ಆ ಇಬ್ಬರು ಪಡೆಯೊಳರು ಕೂಡ ಅದೇ ಸಮುದ್ರ ತೀರಕ್ಕೆ ಬರುತ್ತಾರೆ. ಆದರೆ, ಜಾತಿ ವೈರವನ್ನು ಮರೆತು ಬೆಕ್ಕಸಬೆರಗಾಗಿ ಸಮುದ್ರದ ಕಡೆ ನೋಡುತ್ತಿರುತ್ತಾರೆ. ಸಮುದ್ರ ತೀರದಲ್ಲಿ ವ್ಯಾಸ್ಪಗಳ ನೌಕಾದಳವೇ ಬಂದಿಳಿದಿರುತ್ತದೆ. ಚಿರತೆಪಂಜನನ್ನು ದಾಟಿಕೊಂಡು ನೌಕಾದಳದ ಬಳಿಗೆ ಸಾಗುವ ಪಡೆವಳರು ಮೂಕವಿಸ್ಮಿತರಾಗಿರುತ್ತಾರೆ. ವಿಸ್ಮಯಭಾವದಿಂದ ಎಚ್ಚೆತ್ತುಕೊಳ್ಳುವ 'ಚಿರತೆಪಂಜ' ಬಾವಿಯಬಳಿಗೆ ಹಿಂದಿರುಗಿ ತನ್ನ ಪತ್ನಿ-ಮಗ ಮತ್ತು ನವಜಾತ ಶಿಶು ಸಹಿತ ಹೊಸ ಹೆಜ್ಜೆ-ಹೊಸಬಾಳು-ಹೊಸಪಯಣದ ಸಂಕಲ್ಪದಿಂದ ಮರಳಿ ದಟ್ಟ ಕಾಡೊಳಕ್ಕೆ ವಾಪಸಾಗಲು ನಿರ್ಧರಿಸುತ್ತಾನೆ. ಪತ್ನಿಯಾದವಳು ಹೊಸದಾಗಿ ಬಂದ ನೌಕಾದಳದವರ ಜೊತೆ ಹೋಗೋಣವೇ ಎಂದು ಕೇಳಿದ್ದಕ್ಕೆ, ಬೇಡವೆಂದು ಹೇಳುವ ಚಿರತೆಪಂಜನು ತಮ್ಮ ಆಮೆಗತಿಯ ಪಯಣವೇ ಶ್ರೇಯಸ್ಕರವೆಂದು ತಿಳಿಸುತ್ತಾನೆ. ಇಲ್ಲಿಗೆ ಚಿತ್ರ




ಕೊನೆಗೊಳ್ಳುತ್ತದೆ. ಇಡೀ ಚಿತ್ರದಲ್ಲಿ ಬಿಳಿಯರ ಆಗಮನ, ಬಿಳಿಯರ ಜವಾಬ್ದಾರಿ, ಬಿಳಿಯರ ಪಾರಮ್ಯವಾದಗಳ ಸಮರ್ಥನೆ ಎದ್ದು ಕಾಣುತ್ತದೆ. ಈ ಎಲ್ಲ ಕಾರಣಗಳಿಂದ 'ಅಪೊಕಾಲಿಪ್ಟೊ' – ಎಂಬ ಸಿನಿಮಾ ನೋಡಿದಾಗ ಬಿಳಿಯರಿಂದ, ಬಿಳಿಯರಿಗಾಗಿ, ಬಿಳಿಯರೇ ತೆಗೆದ ಚಿತ್ರವೆಂಬ ವಿಚಾರದರ್ಶನವಾಗುತ್ತದೆ.

ಈ ಸಿನಿಮಾದ ಇಡೀ ಕತೆ/ಘಟನಾವಳಿಗಳು ನಡೆಯುವುದು ಒಂದು ವಾರದ ಅವಧಿಯಲ್ಲಿ ಎನ್ನಬಹುದು. ಚಿತ್ರದ ಆರಂಭದಲ್ಲಿ ಕಾನನ ಸಾಮ್ರಾಜ್ಯಶಾಹಿಗಳು ಆದಿವಾಸಿಗಳ ಹಳ್ಳಿಗೆ ಬಂದೆರಗಿದಾಗ, ಆದಿವಾಸಿ ಶೂರನಾದ 'ಚಿರತೆಪಂಜ'ನು ತನ್ನ ಪತ್ನಿ ತುಂಬುಗರ್ಭಿಣಿಯನ್ನೂ - ತನ್ನ ಪುಟ್ಟಮಗನನ್ನೂ ನೀರಿಲ್ಲದ ಬಾವಿಯೊಂದರಲ್ಲಿ ಇಳಿಬಿಟ್ಟು ಅಡಗಿಸಿಡುತ್ತಾನೆ. ನಂತರ ಕಾನನ ಸಾಮ್ರಾಜ್ಯಶಾಹಿಗಳು 'ಚಿರತೆಪಂಜ'ನನ್ನೂ ಒಳಗೊಂಡಂತೆ ಅನೇಕ ಆದಿವಾಸಿ ಗಂಡು ಹೆಣ್ಣುಗಳನ್ನು ಬಂಧಿಸಿ, ಗುಲಾಮರನ್ನಾಗಿ ಮಾಡಿಕೊಂಡು ಕಲ್ಲು ಕಟ್ಟಡಗಳನ್ನು ನಿರ್ಮಿಸುತ್ತಿದ್ದ ತಮ್ಮ ಕಾನನ ಸಾಮ್ರಾಜ್ಯಕ್ಕೆ ಕರೆದೊಯ್ಯುತ್ತಾರೆ. ಹೀಗೆ ಕರೆದೊಯ್ಯಲು ಮೂರು ದಿನಗಳೆಂದು ಭಾವಿಸಿದರೆ, ಅಲ್ಲಿಂದ ತಪ್ಪಿಸಿಕೊಂಡು 'ಚಿರತೆಪಂಜ'ನು ಹಿಂದಿರುಗಲು ಮೂರುದಿನಗಳೆಂದು ಲೆಕ್ಕಹಾಕಿದರೆ ಇಡೀ ಚಿತ್ರದ ಅವಧಿ ಒಂದು ವಾರವೆನಿಸುತ್ತದೆ. ಈ ಅವಧಿಯಲ್ಲೆ ಮೊದಲ ಮುಂಗಾರು ಶುರುವಾಗುತ್ತದೆ; ಹರಿಯುತ್ತಾ ಬಂದ ನೀರು ಬಾವಿಗಿಳಿದು ನೀರೊಳಗಡೆಯಲ್ಲೆ ಚಿರತೆಪಂಜನ ಪತ್ನಿ ತುಂಬು ಗರ್ಭಿಣಿಗೆ ಹೆರಿಗೆಯಾಗಿ, ಮಗುವೊಂದು ಜನಿಸುತ್ತದೆ.

ಈ ಚಿತ್ರದಲ್ಲಿರುವ ಅಸಾಂಗತ್ಯಗಳಲ್ಲಿ ಕೆಲವು ಹೀಗಿವೆ: ಕಾನನ ಸಾಮ್ರಾಜ್ಯಶಾಹಿಗಳ ಪಡೆವಳನು ಮೂಳೆಗಳು ಮತ್ತು ಮಣಿಗಳ ಹಾರವನ್ನು ತೊಟ್ಟಿರುತ್ತಾನೆ. ಮೃಗಗಳ ಮತ್ತು ಮನುಷ್ಯರ ದವಡೆಗಳನ್ನು ಕಂಠಹಾರದಂತೆ, ಭುಜಕೀರ್ತಿಯಂತೆ ಧರಿಸಿದ್ದರೂ ನವಶಿಲಾಯುಗದ ಆಯುಧಗಳನ್ನೂ ಲೋಹಯುಗದ ಮುಳ್ಳುಗುಂಡುಗಳನ್ನೂ ಬಳಸುತ್ತಿರುತ್ತಾನೆ. ಇಂಥ ಆಯುಧಗಳನ್ನು ಬಳಸದ ಆದಿವಾಸಿಗಳು ಸುಲಭವಾಗಿ ಇವರಿಗೆ ಸೆರೆಸಿಕ್ಕು ಗುಲಾಮರಾಗಿ ಬಾಳುವೆ ನಡೆಸುತ್ತಾರೆ. ಇಂಥ ಎರಡು ಬಣಗಳ ಮಧ್ಯೆ ಮೂರನೆಯವರಾಗಿ ಚಿತ್ರದ ಕೊನೆಯಲ್ಲಿ ಸಮುದ್ರತೀರದಲ್ಲಿ ಕಾಣಿಸಿಕೊಳ್ಳುವ (ಶಿಲುಬೆ ಲಾಂಛನದ ಸೂಟುಬೂಟು ತೊಟ್ಟ) ನೌಕಾದಳದ ವಿವರಗಳಿವೆ. ಸಮುದ್ರಮಾರ್ಗದ ಭೂ ಸಂಶೋಧನೆಗಳನ್ನು ಸೂಚಿಸುವ ಈ ನೌಕಾದಳದ ಕಾಲ ಕ್ರಿ.ಶ. ೧೯ನೇ ಶತಮಾನವೆಂದು ಭಾವಿಸಿದಲ್ಲಿ, ಕಾಲಚಕ್ರದ ಒಂದೇ ಬಿಂದುವಿನಲ್ಲಿ ಕಲ್ಲುಕಟ್ಟಡಗಳ ಕಾನನ ಸಾಮ್ರಾಜ್ಯಶಾಹಿಗಳು, ಚಿಕ್ಕ ಚಿಕ್ಕ ಪೊದೆಗುಗಳಲ್ಲಿ ವಾಸಿಸುವ ಆದಿವಾಸಿಗಳು, ಸೂಟು ಬೂಟು ತೊಟ್ಟ, ಹಡಗುಗಳನ್ನು ನಡೆಸುವ ವ್ಯಾಸ್ಪಗಳು – ಹೀಗೆ ಮೂರು ಬಗೆಯ ವಿಭಿನ್ನ ಸಮುದಾಯಗಳ ಅಸ್ತಿತ್ವವನ್ನು ಒಪ್ಪಿಕೊಳ್ಳಬೇಕಾಗುತ್ತದೆ.

ಅಮೆರಿಕಾ ದೇಶದ ಮೂಲನಿವಾಸಿಗಳಾದ ಮಾಯ, ಇಂಕಾ ಮೊದಲಾದ ಬುಡಕಟ್ಟುಗಳನ್ನು ವಾಸ್ಪಗಳು ಸದೆಬಡಿದು ಸರ್ವನಾಶ ಮಾಡಿದ್ದು ಇತಿಹಾಸವಾಗುಳಿದಿದೆ. ವಸ್ತುಸ್ಥಿತಿ ಹೀಗಿದ್ದರೂ, ಮೂಲ ನಿವಾಸಿಗಳಲ್ಲೆ ವರ್ಗಭೇದಗಳನ್ನು ಸೃಷ್ಟಿಸಿ, ವರ್ಗಕಲಹಗಳನ್ನು ನಡೆಸಿ, ಒಡೆಯರು ಗುಲಾಮರೆಂಬ ತಾರತಮ್ಯವನ್ನು ಸ್ವಕಪೋಲಕಲ್ಪನೆಯಿಂದ ಬಿಂಬಿಸುತ್ತಾ ಅಧಿಕ ಬಲರು ಹೀನಬಲರನ್ನು ನಾಶಮಾಡುತ್ತಿದ್ದರೆಂದು ಕತೆಕಟ್ಟಿ ಹೇಳುತ್ತಿರುವ ಈ ಸಿನಿಮಾದ ತಿರುಳು ನಿಜದುದಯ ವಿರುದ್ಧವಾಗಿದ್ದು ಬಗೆಬಗೆಯ ಹುಸಿನುಸುಳುಗಳಿಂದ ಕೂಡಿದೆ.

ಅಕಿರೊ ಕುರೋಸಾವ ಅವರ 'ರ್‍ಯಾನ್' ಚಿತ್ರದ ಆರಂಭದಲ್ಲಿರುವ ಹಂದಿಬೇಟೆಯಂತೆ, 'ಅಪೊಕಾಲಿಪ್ಟೊ' ಚಿತ್ರದ ಆರಂಭದಲ್ಲೂ ತಾಪಿರ್ ಪ್ರಾಣಿಯ ಬೇಟೆಯಿದೆ. ಸ್ಯಾಮ್ಸನ್ ಅಂಡ್ ಡಿಲೈಲ, ದಿ ಲ್ಯಾಂಡ್ ಆಫ್ ಫ್ಯಾರೋಸ್ ಮೊದಲಾದ ಚಿತ್ರಗಳಲ್ಲಿರುವಂತೆ ಒಡೆಯರು ಗುಲಾಮರನ್ನು ಹಿಂಸಿಸುವ ದೃಶ್ಯಗಳನ್ನು 'ಅಪೊಕಾಲಿಪ್ಟೊ'ದಲ್ಲೂ ಅಳವಡಿಸಿ, ವಿಜೃಂಭಿಸಲಾಗಿದೆ. 'ಫ್ಯುಜಿಟಿವ್' ಎಂಬ ಚಿತ್ರದಲ್ಲಿ ಮ್ಯಾನ್‌ಹೋಲಿನ ಸುರಂಗ ಮಾರ್ಗದಿಂದ ಹೊರಬಂದು ನೂರಾರು ಅಡಿಗಳಷ್ಟು ಕೆಳಕ್ಕೆ ಧುಮುಕುವ ಸ್ಟಂಟ್ ದೃಶ್ಯವಿರುವಂತೆಯೇ, ಈ ಸಿನಿಮಾದಲ್ಲಿ ಆದಿವಾಸಿ ಶೂರ 'ಚಿರತೆಪಂಜ'ನು ಕಾನನ ಸಾಮ್ರಾಜ್ಯಶಾಹಿಗಳಿಂದ ಪಾರಾಗಲು ನೂರಾರು ಅಡಿಗಳಷ್ಟು ಆಳವಾದ ಜಲಪಾತದ ಹೊಂಡಕ್ಕೆ ಧುಮುಕುವ ಸ್ಟಂಟ್ ದೃಶ್ಯವಿದೆ. ರ್‍ಯಾಂಬೊ ಚಿತ್ರದ ಹಲವು ದೃಶ್ಯಗಳು ಇಲ್ಲೂ ನೆನಪಾಗುತ್ತವೆ. ಹೀಗೆ ಹಲವಾರು ಚಿತ್ರಗಳಿಂದ ಆಯ್ದ ಮಸಾಲೆಯ ದೃಶ್ಯಗಳನ್ನು ಒಳಗೊಂಡಿರುವ 'ಅಪೊಕಾಲಿಪ್ಟೊ' ಏನೂ ಅರಿಯದ ಮುಗ್ಧರ ಮನಸೆಳೆಯಬಹುದೇ ಹೊರತು ಸ್ವಂತವಾಗಿ ಆಲೋಚಿಸುವ, ವಿಮರ್ಶಿಸುವ ಪ್ರೇಕ್ಷಕ ಸಮುದಾಯದ ಎದುರಿನಲ್ಲಿ ಅಪರಾಧಿ ಸ್ಥಾನದಲ್ಲಿ ನಿಲ್ಲುವುದು ಅನಿವಾರ್ಯವಾಗುತ್ತದೆ.

ವಿ. ಚಂದ್ರಶೇಖರ ನಂಗಲಿ
೧೬, ಶ್ರೀಗೌರಿ, ಕನಕನಗರ, ೨ನೇ ಕ್ರಾಸ್
ಹೊಸಕೋಟೆ - ೫೬೨ ೧೧೪

ಶ್ರೀ ಫ. ಶಿ. ಭಾಂಡಗೆ ಮತ್ತು ಅವರ ಗದಗಿನ ತ್ವರಿತ ಮುದ್ರಣ ಕನ್ನಡ ಓದುಗರಿಗೆ ಕಳೆದ ಐದಾರು ದಶಕಗಳಿಂದ ಚಿರಪರಿಚಿತ. ಸರಕಾರ, ವಿಶ್ವವಿದ್ಯಾಲಯಗಳು, ಪ್ರಸಿದ್ಧ ಪ್ರಕಾಶಕರು, ಲೇಖಕರು ಹೀಗೆ ಎಲ್ಲರ ಪುಸ್ತಕಗಳನ್ನು ಪ್ರಕಟ ಮಾಡಿದ ಶ್ರೇಯಸ್ಸು ಅವರದು. ೮೦ರ ಅಂಚಿನಲ್ಲಿರುವ ಭಾಂಡಗೆ ಅವರ ಜೀವನ ಕಥೆ ನಾಲ್ಕುನೂರು ಪುಟಗಳ ಕೊಂಡರು, ಮಕ್ಕಳಾದುವು. ಅಲ್ಲಿಗೆ ಮುಗಿಯಿತಲ್ಲ? ಇದರಲ್ಲಿ ಆತ್ಮ ಕಥೆ ಬರೆಯುವಂಥದ್ದೇನಿದೆ ?

ಆದರೆ, ಭಾಂಡಗೆ ಕೇವಲ ಗಿರಣಿಯಲ್ಲಿ ಬುಟ್ಟಿಗಳನ್ನು ಹಾಕಲಿಲ್ಲ, ಅಕ್ಷರ ಮೊಳೆಗಳನ್ನು ಜೋಡಿಸಲಿಲ್ಲ, ಬರೀ ಪುಸ್ತಕಗಳನ್ನು ಮುದ್ರಿಸಲಿಲ್ಲ, ದುಡಿಯುವ ಹತ್ತು ವರುಷದ ಬಾಲ್ಯದಿಂದ ಈ ಜಗತ್ತನ್ನು ತೆರೆದ ಕಣ್ಣಿನಿಂದ ನೋಡಲು



# ಸಣ್ಣವನ ದೊಡ್ಡ ಕಥೆ 'ಯಾರು ನಾನು ?'




**ಯಾರು ನಾನು ?**
ಜೀವನ ಕಥನ, ಫ.ಶಿ.ಭಾಂಡಗೆ
ಪುಟ : ೩೮೨ ಬೆಲೆ : ರೂ. ೨೦೦
ಪ್ರಕಾಶಕರು - ವಿವೇಕ ಪ್ರಕಾಶನ
ಕಾಗದಗೇರಿ ಓಣಿ, ಗದಗ - ೫೮೨೧೦೧

'ನಾನು ಯಾರು ?' ಒಂದು ಮಿನಿ ಗ್ರಾಮಾಯಣ.

ನಿಸ್ಸಹಾಯಕ ಬಡ ಕುಟುಂಬದಲ್ಲಿ ಜನಿಸಿ (೧೯೨೯) ನಾಲ್ಕನೆಯ ವರ್ಗದವರೆಗೆ ಶಿಕ್ಷಣ ಪಡೆದ ಭಾಂಡಗೆ, ಬಾಲ ಕಾರ್ಮಿಕನಾಗಿ ಉಪಜೀವನಕ್ಕಾಗಿ ಹಟ್ಟಿನ ಗಿರಣಿಯಲ್ಲಿ ಬುಟ್ಟಿ ಹಾಕುವ ಕೆಲಸದಿಂದ ವೃತ್ತಿಯನ್ನು ಪ್ರಾರಂಭಿಸಿದರು. ಅಂಥ ವ್ಯಕ್ತಿಗೂ ಒಂದು ಜೀವನ ಕಥೆಯನ್ನು ಬರೆಯುವಂಥದ್ದು ಏನಿರಬಹುದು ಎಂಬ ಕುತೂಹಲ ಯಾರಿಗೂ ಬರುವುದು ಸಹಜ.

ಗಿರಣಿಯಲ್ಲಿ ಬುಟ್ಟಿ ಹಾಕುವ ಕೆಲಸದಲ್ಲಿದ್ದಾಗಲೇ ಹತ್ತಿರದ ಮುದ್ರಣಾಲಯದ ಅಚ್ಚಿನ ಮೊಳೆ ಜೋಡಿಸುವವರ ಸಂಪರ್ಕ ಬಂದಿತು. ಸರಿ, ಅಕ್ಷರ ಮೊಳೆ ಜೋಡಿಸುವ ಕಲೆಯನ್ನು ಕರಗತ ಮಾಡಿಕೊಂಡರು. ಅನಂತರ ಅವಕಾಶ ದೊರೆತಾಗ ತಾವೇ ಒಂದು ಪುಟ್ಟ ಮುದ್ರಣಾಲಯವನ್ನು ಪ್ರಾರಂಭಿಸಿ ಪುಸ್ತಕಗಳನ್ನು ಮುದ್ರಿಸಹತ್ತಿದರು. ತಮ್ಮ ಅವಿರತ ಪರಿಶ್ರಮ, ಎಲ್ಲರೊಂದಿಗೆ ಬೆರೆಯುವ ಪ್ರವೃತ್ತಿಗಳಿಂದಾಗಿ ತಮ್ಮ ಯಶಸ್ಸು ಗಳಿಸಿದರು. ಮದುವೆ ಮಾಡಿ

ಪ್ರಾರಂಭಿಸಿದರು. ಕಲಿತದ್ದು ನಾಲ್ಕೇ ವರ್ಗಗಳಾದರೂ, ರದ್ದೀ ಪೇಪರ ಪುಸ್ತಕದ ಅಂಗಡಿಯಿಂದ ತೂಕಕ್ಕೆ ಪುಸ್ತಕಗಳನ್ನು ತಂದು ಓದಿದರು. ವಿಶ್ವದ ಎಲ್ಲ ಧರ್ಮಗಳ ತತ್ವಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದರು. ನಾಟಕಗಳನ್ನು ನೋಡುವ ಗೀಳಿನೊಂದಿಗೆ ವೃತ್ತಿ ರಂಗಭೂಮಿಯ ನಾಟಕಗಳ ಕಂಪನಿಗಳೊಂದಿಗೆ ಸಂಪರ್ಕ ಪಡೆದರು. ಸ್ವತಃ ಬಣ್ಣವನ್ನು ಹಚ್ಚಿಕೊಂಡರಲ್ಲದೆ ತಾವೇ ನಾಟಕಗಳನ್ನು ಬರೆದು ಅಂದಿನ ಪ್ರಸಿದ್ಧ ನಾಟಕ ಕಂಪನಿಗಳಿಗೆ ಆಡಲು ಕೊಟ್ಟರು. ತಾವೇ ನಾಟಕ ಕಂಪನಿಯನ್ನು ಕಟ್ಟಿ ನಾಟಕಗಳನ್ನು ಆಡಿದರು. ಇಂಗ್ಲಿಷ್, ಮರಾಠಿ ಮತ್ತು ಹಿಂದಿ ಭಾಷೆಗಳನ್ನು ಕರಗತ ಮಾಡಿಕೊಂಡರು. ಇಂಗ್ಲಿಷ್ ಶಬ್ದಕೋಶವನ್ನೆ ಕಂಠಪಾಠ ಮಾಡಿದರು !

ಭಾಂಡಗೆ ತಾವು ಬೆಳೆಯುತ್ತಿದ್ದಂತೆ ಒಬ್ಬ ಸಂವೇದನಾಶೀಲ ವ್ಯಕ್ತಿಯಾಗಿ ರೂಪುಗೊಂಡರು. ಕೆಳವರ್ಗದ ಜನರ, ನಿಸ್ಸಹಾಯಕ ಕುಟುಂಬಗಳ ಪರಿಸರದಲ್ಲಿ ತಮ್ಮ ಬಾಲ್ಯ ಯೌವನಗಳನ್ನು ಕಳೆಯುವ ದಿನಗಳಲ್ಲಿ ಫಕೀರಸಾ ಶಿವಣಸಾ ಭಾಂಡಗೆ, ಒಂದು ಶ್ರೀಮಂತ ಜೀವನಾನುಭವವನ್ನು ಪಡೆದರು. ಮತ್ತು ಆತ್ಮ ನಿರ್ಭರತೆಯಿಂದ ಬೆಳೆಯಲು ಸಾಧ್ಯ ಮಾಡಿಕೊಂಡರು.

ಈ ಶ್ರೀಮಂತ ಅನುಭವಗಳನ್ನು ತಮ್ಮ ಆತ್ಮಕಥನದಲ್ಲಿ ಉಲ್ಲೇಖಿಸಿದರು. ಹೂವಿನಹಡಗಲಿಯ ಬಾಳಪ್ಪಕಾಕಾ ಕುರುಬರವನಾದರೂ ಮಾಂಸಾಹಾರಿಯಲ್ಲ. ಮನೆಯಲ್ಲಿ ಕುರಿ ಕೊಯ್ಯುವುದನ್ನು ನೋಡಿ ತಾಳಲಾರದೆ ಮನೆಯನ್ನು ಬಿಟ್ಟು ಓಡಿಹೋಗಿ ಬಕ್ಕಾರಿಯ ಬಡಗನ ಮನೆಯಲ್ಲಿ ಆಶ್ರಯ ಪಡೆದು ಬಡಗತನವನ್ನು ಕಲಿತ. ಬಡಗಿಯ ಅಣ್ಣನ ಮಗಳು ತನಗಿಂತ ನಾಲ್ಕು ವರುಷ ಹಿರಿಯವಳಾದ ವಿಧವೆ ಹನುಮಿಯನ್ನು ಮದುವೆಯಾಗುತ್ತಾನೆ. ಉಪಜೀವನವನ್ನು ಅರಸುತ್ತ ಗದಗಿಗೆ ಬರುತ್ತಾರೆ. ಬಾಲ್ಯದಿಂದಲೂ ಕೃಷಿಕನಾಗುವ ಕನಸನ್ನು ಹೊತ್ತ ಬಾಳಪ್ಪಕಾಕಾ ದುಡಿದು ಉಳಿಸಿಟ್ಟ ಹಣದಿಂದ ಎರಡು ಎತ್ತುಗಳನ್ನು ಕೊಂಡು

**ಡಾ॥ ಕೃಷ್ಣ ಕೊಲ್ಹಾರಕುಲಕರ್ಣಿ**

ಕೊನೆಗೂ ಕೃಷಿಕನಾಗುತ್ತಾನೆ. ಮಕ್ಕಳಿಲ್ಲದ ಈ ದಂಪತಿಗಳ ಮನೆಯಲ್ಲೆ ಬೆಳೆದವರು ಫ. ಶಿ. ಭಾಂಡಗೆ !

'ಮತಾಂತರ' ಎಂಬುದು ಇಂದು ಎಂದೂ ಇಲ್ಲದ ಪ್ರಾಶಸ್ತ್ಯ ಪಡೆದು, ದಿನನಿತ್ಯದ ಚರ್ಚೆಯ ವಿಷಯವಾಗಿದೆಯಷ್ಟೆ. ಆದರೆ ಭಾರತದಲ್ಲಿ ಬಹುಕಾಲದಿಂದ ನಡೆದುಕೊಂಡು ಬಂದ ಸಂಗತಿಯನ್ನು ಭಾಂಡಗೆ ಅವರು ತಮ್ಮ ಸ್ನೇಹಿತರನ್ನು ನೆನೆಪಿಸಿಕೊಳ್ಳುವಾಗ, ಪರಿಶಿಷ್ಟ ಜಾತಿಯಿಂದ ಕ್ರಿಶ್ಚಿಯನ್ನಾದ ಜಾರ್ಜ, ಮುಸ್ಲಿಮ ಧರ್ಮಕ್ಕೆ ಸೇರಿದ ಆತನ ತಂಗಿ ಇವರ ಬಗ್ಗೆ ಹೇಳುವುದು ಇಂದಿನ ಮತಾಂತರ ಕುರಿತ ಚರ್ಚೆಗಳಿಗೆ ಹಿಡಿದ ಕನ್ನಡಿಯಂತಿವೆ. 'ನೀನು ಕ್ರೈಸ್ತಮತವನ್ನು ಯಾಕೆ ಸ್ವೀಕರಿಸಿದೆ ?' ಎಂದು ಭಾಂಡಗೆ ತಮ್ಮ ಸ್ನೇಹಿತನಿಗೆ ಕೇಳಿದಾಗ ಆತ ಉತ್ತರ ಕೊಡುತ್ತಾನೆ: ''ಖರೇನೇ ವಿಚಿತ್ರಾನೋ ಭಾಂಡಗೆ, ನಾವು ಗದಗಿದ ಕೆಳಗೇರ್‍ಯಾಗ ಇದ್ದಿವಿ, ಆವಾಗ 'ಹೊಲ್ಯಾರು' ಅಂತ ಊರಾನ ಮಂದಿ ನಮ್ಮನ್ನ ಮುಟ್ಟಿಸಿಗೊಂತಿದ್ದಿಲ್ಲ ಸೈತ. ಓಣಿ ಚಾದಂಗಡ್ಯಾಗೂ ನಾವು ಒಳಗ ಹೋಗೂ ಹಾಂಗ ಇಲ್ಲ, ಹೊರಗ ಬೈಲಿಗೆ ಕುಂತು ಚಾ ಕುಡೀಬೇಕು. ನೀರಿಲ್ಲ, ಚಾ ಸಹಿತ ಮ್ಯಾಲಿಂದ ಹನಸತಿದ್ರು ! ಕುಡದ ಮ್ಯಾಲ ನಮ್ಮ ಕಪ್ಪು ಬಸಿ ನಾವೇ ತೊಳದಿಟ್ಟು ಬರಬೇಕು ಕಟ್ಟಿ ಮ್ಯಾಲೆ. ಈಗ ನೋಡು, ನಾವು ಕ್ರಿಶ್ಚಿಯನ್ನಾಗಿ ಬೆಟಗೇರ್‍ಯಾಗ ಮನಿ ಮಾಡಿದಮ್ಯಾಗ ಹ್ಯಾಂಗ ಕುಂತಲ್ಲೆ ಚಾ ತಂದಕೊಡತಾರ್‍ನೋಡು. ಹೊಲ್ಯಾರಂದರ ಹಾಂಗ, ಕ್ರಿಶ್ಚಿಯನ್ರಂದ್ರ ಹೀಂಗ, ವಿಚಿತ್ರಲ್ಲೇನಿದು ?''

ಮುಂದುವರೆದು ಆತನ ತಂಗಿ ಮುಸ್ಲಿಮ ಧರ್ಮಕ್ಕೆ ಸೇರಿದ ಬಗ್ಗೆ ಜಾರ್ಜ ಹೇಳುತ್ತಾನೆ, ''ಇಲ್ಲೇ ನೋಡು, ನಮ್ಮ ಕೇರಿಗೆ ಎಲ್ಲಾ ಜಾತೀ ಜನರೂ ರಾತ್ರಿ ಕಳವಿಲೇ ಬರತಿದ್ರು. ಹಗಲೀ ಮಾತ್ರ ಮುಟ್ಟಿಸಿಗೊಂತಿದ್ದಿಲ್ಲ ತಿಳೀತ ? ಭಾಳ ದೂರ್‍ಯಾಕ, ನಮ್ಮ ತಂಗೀದ ನೋಡಲ್ಲ, ಒಬ್ಬ ಮುಸಲ್ಮಾನರ ಹುಡುಗ ನಮ್ಮ ತಂಗೀ ಹತ್ರ ಬರತಿದ್ದ, ಅದು ಹಂಗ ಗೆಳೆತನ ಬೆಳೀತು. ಅಂವ ನಮ್ಮ ತಂಗಿನ್ನ ಲಗ್ನಾ ಮಾಡಕೋತೀನಿ ಅಂತ ಕುಂತ. ನಮ್ಮಪ್ಪ ಜಾತಿ ಅಂತ ಹೆದರಿದ. ಅಂವ ''ಆಕಿನ್ನ ನಮ್ಮ ಜಾತ್ಯಾಗ ಕೂಡಿಸಿಕೊಂಡು ಲಗ್ನಾಕ್ಕೀನಿ'' ಅಂದ. ಸಾಕ, ನಮ್ಮ ತಂಗೀನೂ ಮ್ಯಾಲ ಇದ್ಲು, ಆಕಿನ್ನ ತಮ್ಮ ಧರ್ಮದಾಗ

## ಅವಳಿಗೆ

ನಿನ್ನ ಕಣ್ಣ ನೋಟದಲ್ಲಿ
ಮೂಕನಾದ ಹರಿಯಿತು
ಎದೆಗೆ
ಕೊಳಲನೂದುತ ನಲ್ಲೆ
ಕೊಳಲನೂದೂತ

ಸಂಜೆಗೆಂಪಿನ ಆಗಸದಲ್ಲಿ
ನಾದ ಕೇಳಿ ಬಂತು ಕಿವಿಗೆ
ಎದೆಯ ಮುಟ್ಟಿತು ನನ್ನ
ಹೃದಯ ತಟ್ಟಿತು

ದೊಡ್ಡದೊಂದು ಗುಡಿಯ ಕಟ್ಟಿ
ನಿನ್ನದೊಂದು ಪ್ರತಿಮೆ ನಿಲಿಸಿ
ಶೃಂಗರಿಸಿದೆ ನನ್ನ
ಹೃದಯದಂಗಳದಲ್ಲಿ

ಕಮಲಂ ಅರಸು



ಕೂಡಿಕೊಂಡು ಲಗ್ನಾ ಮಾಡಿಕೊಂಡುಬಿಟ್ಟ.''

ಹಿಂದು ಧರ್ಮದ ವಿಶಿಷ್ಟತೆಯನ್ನು ಹೇಳುವ ಸ್ವಾಮಿಗಳು, ಬುದ್ಧಿವಂತರು ಉತ್ತರ ಹೇಳಬೇಕು. ಭಾಂಡಗೆ ಅಷ್ಟಕ್ಕೆ ಬಿಡಲಿಲ್ಲ. ಜಾರ್ಜನ ತಂಗಿಯನ್ನು ಭೆಟ್ಟಿಯಾದಾಗ ಅವಳ ಮತಾಂತರದ ಬಗ್ಗೆ ಕೇಳುತ್ತಾರೆ: ''ಅಲ್ಲ ತಂಗಿ, ಏನ ಹಿಂದೂ ಛಲೋನೋ, ಮುಸ್ಲಿಮ ಛಲೋನೋ, ಏನ ಕ್ರಿಶ್ಚಿಯನ್ ಛಲೋನೋ ? ನಿನಗ ಯಾವ ಧರ್ಮ ಬೇಸ್ಯನಸತ್ತೈತಿ ಇದರಾಗ ?'' ಎಂದು ಕೇಳಿದರೆ, ಆಕೆ ಹೇಳುತ್ತಾಳೆ, ''ಹಿಂಗೆ, ನೋಡ್ರಿ ಗಂಡ ದುಡೀತಾನ, ರಾಮ ಲಕ್ಷ್ಮಣರಾಂಗ ಯಾಡ ಮಕ್ಕಳದಾವ, ಎಂಥಾ ಸುಮಾರ ವ್ಯಾಳ್ಯಾಕ್ಕೂ ನಮ್ಮೋಣೀ ಮಂದೀನೂ ಒಬ್ಬರಿಗೊಬ್ಬರಾಸರಾಗತಾರ, ಸಾಕಲ್ಲ. ಮತ್ತೇನು ಬೇಕು ?'' ಅವಳೇನೂ ಕಲಿತವಳಲ್ಲ. ಧರ್ಮ ಜಿಜ್ಞಾಸೆಯನ್ನೂ ಮಾಡಿದವಳಲ್ಲ. ಆದರೆ ಅವಳು ಕೊಟ್ಟ ಉತ್ತರ ಯಾವ ಧರ್ಮದ ಪ್ರಚಾರಕರನ್ನೂ ತಲೆ ತಗ್ಗಿಸುತ್ತದೆ.

ಹೀಗೆ ಭಾಂಡಗೆ ಅವರ ಆತ್ಮ ಕಥನವು ಒಂದು 'ಮಿನಿ ವಿಶ್ವಾಯಣವೂ' ಆಗುತ್ತದೆ. ಇಲ್ಲಿ ಸಮಾಜವಿದೆ. ಧರ್ಮವಿದೆ. ರಾಜಕಾರಣವಿದೆ. ಲಲಿತ ಕಲೆಗಳಿವೆ. ಸಾಹಿತ್ಯವಿದೆ. ಸಂಗೀತವಿದೆ. ನಾಟಕವಿದೆ. ನಾಟಕದ ಪಾತ್ರಗಳಿವೆ. ಬುದ್ಧಿವಂತರಿದ್ದಾರೆ. ದಡ್ಡರೂ ಇದ್ದಾರೆ. ಸಣ್ಣವರ ದೊಡ್ಡತನದೊಂದಿಗೆ, ದೊಡ್ಡವರ ಸಣ್ಣತನವನ್ನೂ ಬಿಚ್ಚಿಡಲು ಭಾಂಡಗೆ ಹಿಂದೆಮುಂದೆ ನೋಡಿಲ್ಲ. ಉತ್ತರ ಕರ್ನಾಟಕದ ಅದರಲ್ಲೂ ಗದಗ, ಹುಬ್ಬಳ್ಳಿ ಪರಿಸರದ ಕಳೆದ ಎಂಟು ದಶಕಗಳ ನೈಜ ಚಿತ್ರಣವಿದೆ. ಇಲ್ಲಿ ಬರುವ ಸಂಗೀತಗಾರ ಜಂಬಲದಿನ್ನಿ ಸಿದ್ಧರಾಮ, ಸಾಹಿತಿ ಶಾಂತರಸ, ವಿಮರ್ಶಕ ಗಿರಡ್ಡಿ ಗೋವಿಂದರಾಜ, ನಾಟಕಕಾರ ಮಹಾಂತೇಶ ಶಾಸ್ತ್ರಿ, ಹಿರಿಯರಾದ ಪಾಟೀಲ ಪುಟ್ಟಪ್ಪ, ಚೆನ್ನವೀರ ಕಣವಿ, ಶಿವರಾಮ ಕಾರಂತ, ನಿರಂಜನ, ಹಾಮಾನಾ ಒಬ್ಬರೇ ಇಬ್ಬರೇ, ಎಲ್ಲರ ದೊಡ್ಡತನ - ಸಣ್ಣತನಗಳನ್ನು ಬಿಚ್ಚಿ ತೋರಿಸಿದ್ದಾರೆ. ವಿಶ್ವವಿದ್ಯಾಲಯಗಳು ಪಠ್ಯಪುಸ್ತಕಗಳನ್ನು ಹೇಗೆ ಸಿದ್ಧಪಡಿಸುತ್ತಾರೆ ಎಂಬುದನ್ನೂ ಭಾಂಡಗೆ ತಮ್ಮ ಆತ್ಮಕಥನದಲ್ಲಿ ಹೇಳುತ್ತಾರೆ. ಗದಗಿನಲ್ಲಂತೂ ಮೂಲೆ ಮೂಲೆಗಳಲ್ಲಿ ಅವರ ಕಣ್ಣು ಹಾದಿದೆ. ವೀರನಾರಾಯಣನ ಗುಡಿ ಅವರ ಜೀವನದಲ್ಲಿ ಹಾಸುಹೊಕ್ಕಾಗಿದೆ.

ಜೀವನ ವ್ಯವಸ್ಥೆಯಲ್ಲಿ ವ್ಯಕ್ತಿ ಮತ್ತು ಸಮಾಜವನ್ನು ರೂಪಿಸುವ, ಬದಲಿಸುವ, ಬೆಳೆಸುವ ಶಕ್ತಿ ಯಾವುದು ? ರೂಢಿಗತ ನಂಬಿಕೆಗಳೆ ? ಸಂಪತ್ತಿನ ಅಧಿಕಾರವೆ ? ಅಗೋಚರ ದೈವವೆ ? ವ್ಯಕ್ತಿಯ ಧೈರ್ಯ ವಿಶ್ವಾಸಗಳೆ ? ವಿದ್ಯ, ಬುದ್ಧಿ, ಮನಶ್ಶಕ್ತಿಯೆ ? ಯಾವುದು ? ಪ್ರಶ್ನೆಗಳ ಗೊಂದಲಕ್ಕೆ ಮುಖಾಮುಖಿಯಾದವನಿಗೆ ಕಾಡಿಸುವ ಇನ್ನೊಂದು ಪ್ರಶ್ನೆ. ಯಾರು ನಾನು ? ಅದಕ್ಕೆ ಭಾಂಡಗೆ ಅವರ ಜೀವನ ಕಥೆಯಲ್ಲಿ ಆನುಭವಿಕ ಉತ್ತರಗಳಿವೆ. ಉತ್ತರ ಕರ್ನಾಟಕದ ಕೆಳ ಮಧ್ಯಮವರ್ಗದ ಆಡು ಭಾಷೆಯಲ್ಲಿ ಸಾಗುವ ಭಾಂಡಗೆ ಅವರ ಆತ್ಮ ಕಥನ ಒಂದು ಕಾದಂಬರಿಯಂತೆ ಓದಿಸಿಕೊಂಡು ಹೋಗುತ್ತದೆ. ಅವರ ವಿಶಿಷ್ಟ ನಿರೂಪಣಾ ಶೈಲಿ, ಆಸಕ್ತಿಯನ್ನುಂಟು ಮಾಡುತ್ತದೆ. ಇತ್ತೀಚಿನ ದಿನಗಳಲ್ಲಿ ಬಂದ ಒಂದು ನಿಷ್ಕಪಟ ಆತ್ಮ ಚರಿತ್ರೆ, 'ಯಾರು ನಾನು ?'

**ಡಾ॥ ಕೃಷ್ಣ ಕೊಲ್ಹಾರಕುಲಕರ್ಣಿ**
೬೩೩, ಮಹಿಪತಿ, ಕೀರ್ತಿ ನಗರ, ಬಿಜಾಪುರ - ೫೮೬೧೦೧

## ಸಾದರ ಸ್ವೀಕಾರ

**ಬದುವಲ್ಲಿಯ ಬದುಕು** (ಕಥಾ ಸಂಕಲನ)
ಹಣಮಂತ ತಾಸಗಾಂವಕರ
ಪುಟ : ೮೪ ಬೆಲೆ : ರೂ. ೫೦
ಎಂ. ಕೆ. ಪ್ರಕಾಶನ, ನಂ. ೪೧, ೩ನೇ ಮುಖ್ಯರಸ್ತೆ
೧ ನೇ ಹಂತ, ೨ನೇ ಘಟ್ಟ, ಮಂಜುನಾಥನಗರ
ಪಶ್ಚಿಮ ಕಾರ್ಡ್ ರಸ್ತೆ, ಬೆಂಗಳೂರು - ೫೬೦ ೦೧೦

**ಹಸಿವೆಂಬೋ ಮಾಯೆ** (ಕವನ ಸಂಕಲನ)
ಪ್ರೊ॥ ಉಷಾ ಕೃಷ್ಣಮೂರ್ತಿ
ಪುಟ : ೧೧೬ ಬೆಲೆ : ರೂ. ೭೦
ಸಿವಿಜಿ ಪಬ್ಲಿಕೇಷನ್ಸ್, ನಂ. ೭೦, ೨ನೇ ಮುಖ್ಯರಸ್ತೆ
ಜಬ್ಬಾರ್ ಬ್ಲಾಕ್, ವೈಯಾಲಿಕಾವಲ್
ಬೆಂಗಳೂರು - ೩

**ಎಷ್ಟೊಂದು ನಾವೆಗಳು** (ಕವನ ಸಂಕಲನ)
ಮಾಲತಿ ಪಟ್ಟಣಶೆಟ್ಟಿ
ಪುಟ : ೯೬ ಬೆಲೆ : ರೂ. ೬೦
ಸಾಹಿತ್ಯ ಪ್ರಕಾಶನ, ಕೊಪ್ಪೀಕರ್ ಬೀದಿ, ಹುಬ್ಬಳ್ಳಿ - ೨೦

**ಗಣೇಶನ ಕಥೆಗಳು** (ಮಕ್ಕಳ ನಾಟಕ) ಶಂಕರ ಲಮಾಣಿ
ಪುಟ : ೬೦ ಬೆಲೆ : ರೂ. ೫೦
ಸೇವಾಲಾಲ ಪ್ರಕಾಶನ, ಮುಚಖಂಡಿ ತಾಂಡಾ-೧
ಬಾಗಲಕೋಟೆ - ೫೮೭ ೧೦೧

**ದಾಸೋಹಿ ಶ್ರೀ ಶರಣಬಸವೇಶ ಕಾವ್ಯಂ** ಈಶ್ವರ ಹತ್ತಿ
ಪುಟ : ೧೬೬ ಬೆಲೆ : ರೂ. ೧೦೦
ಎಸ್.ಹೆಚ್.ಅಯ್. ಪ್ರಕಾಶನ, ಕೊಪ್ಪಳ

**ಭಾರತದಲ್ಲಿ ಸಾರ್ವಜನಿಕ ಗ್ರಂಥಾಲಯ ಚಳುವಳಿ ನಡೆದುಬಂದ ದಾರಿ**
ಹೆಚ್. ಆರ್. ನಾರಾಯಣಮೂರ್ತಿ
ಪುಟ : ೧೪೦ ಬೆಲೆ : ೭೦
ನಿರ್ದೇಶಕರು, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಭಯೋತ್ಪಾದನೆ ಸಿಐಎ ಜಿಹಾದಿ ಹಿಂದುತ್ವ ಇತ್ಯಾದಿ**
ಪ್ರಕಾಶ್ ಕೆ.
ಪುಟ : ೮೪ ಬೆಲೆ : ರೂ. ೨೦

**ಏನಿದು ಈ ಹಿಂದೂರಾಷ್ಟ್ರ ?** ಸೀತಾರಾಂ ಯೆಚೂರಿ
ಪುಟ : ೮೪ ಬೆಲೆ : ರೂ. ೨೦
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
ಕ್ರಿಯಾ ಪ್ರಕಾಶನ, ೧೨, ೧೮ನೇ ಕ್ರಾಸ್
ಸಂಪಂಗಿರಾಮ ನಗರ, ಬೆಂಗಳೂರು - ೫೬೦ ೦೨೭




# 'ನಾಲ್ವರು ಸಿದ್ಧಾಂತಿಗಳು' ಎಂಬ ಅಪೂರ್ವ ಕೃತಿ ಪರಿಚಯ

**ಪಾ**ಶ್ಚಿಮಾತ್ಯರ ಗಣಿತ ಶಾಸ್ತ್ರಕ್ಕೆ ಭಾರತದ ಕೊಡುಗೆಯನ್ನು ಗುರುತಿಸುವಲ್ಲಿ ಈ ವೇಳೆಗೆ ನಾಲ್ವರು ಸಿದ್ಧಾಂತಿಗಳು ಆಗಿಹೋಗಿದ್ದಾರೆ. ಅವರನ್ನು ಆರ್ಯಭಟ, ವರಾಹಮಿಹಿರ, ಬ್ರಹ್ಮಗುಪ್ತ ಮತ್ತು ಭಾಸ್ಕರಾಚಾರ್ಯರೆಂದು ಗುರುತಿಸಲಾಗಿದೆ. ಇವರಿಂದ ನಮ್ಮ ಗಣಿತಶಾಸ್ತ್ರ ಪರಂಪರೆಯು ಜಗತ್ಪ್ರಸಿದ್ಧವಾಗಿದೆ. ಕ್ರಿಸ್ತಪೂರ್ವದಲ್ಲಿಯೇ ಗ್ರೀಕರು ಪ್ರಸಿದ್ಧರಾಗಿದ್ದರು. ಭಾರತೀಯರ ಮೇಲೂ ಅವರ ಪ್ರಭಾವವಿದೆಯೆಂದು ಗುರುತಿಸಲಾಗಿದೆ. ಆದರೆ ಭಾರತೀಯ ವಿದ್ವಾಂಸರು ಈ ನಿಟ್ಟಿನಲ್ಲಿ 'ಸಿದ್ಧಾಂತಗಳು' ಎನ್ನುವ ಗ್ರಂಥಗಳ ಮೂಲಕ ಪ್ರಪಂಚದ ಜ್ಞಾನಕ್ಕೆ ಕೊಡುಗೆಯನ್ನು ನೀಡಿದ್ದಾರೆ. ಉದಾಹರಣೆಗೆ, ಸೊನ್ನೆ ಮತ್ತು ಅದರ ಬಳಕೆಯು ಭಾರತೀಯರದೇ ಆಗಿದೆಯಷ್ಟೆ. ಅಂತಹ ಅರಿವನ್ನು ಕುರಿತ ಗ್ರಂಥವು 'ನಾಲ್ವರು ಸಿದ್ಧಾಂತಿಗಳು.'

ಈ ಕೃತಿಯು ಸುಮಾರು ೧೫೦ ಪುಟಗಳಲ್ಲಿದ್ದು ಆರ್ಯಭಟ, ವರಾಹಮಿಹಿರ, ಬ್ರಹ್ಮಗುಪ್ತ ಮತ್ತು ಭಾಸ್ಕರಾಚಾರ್ಯ ಎಂಬವರ ಕಾಲ ಮತ್ತು ಸಾಧನೆಗಳನ್ನು ಪ್ರೊ॥ ಎಸ್. ಕೆ. ನರಸಿಂಹಮೂರ್ತಿ (ಎಂ.ಎಸ್‌ಸಿ.) ಎಂಬ ಗಣಿತಶಾಸ್ತ್ರಜ್ಞರು ಕೂಲಂಕಷವಾಗಿ ಪರಿಚಯಿಸಿದ್ದಾರಲ್ಲದೆ ಅಂಥ ಶಾಸ್ತ್ರ ವಿಮರ್ಶೆಯನ್ನು ತಿಳಿಸಿದ್ದಾರೆ. ಅಂದರೆ ಶಾಸ್ತ್ರಜ್ಞಾನದ ಪೂರ್ಣ ಅರಿಮೆಯನ್ನುಳ್ಳವರೆಂದು ಗುರುತಿಸಲು ಸಾಕಷ್ಟು ವಿಷಯವು ಈ ಕೃತಿಯಲ್ಲಿದೆ.

ಇದರಲ್ಲಿ ಭಾರತೀಯ ಕೃತಿಗಳ ಆಧಾರದಿಂದ ಸಂಸ್ಕೃತ ಶ್ಲೋಕಗಳನ್ನೂ (ಕನ್ನಡ ಲಿಪಿಯಲ್ಲಿ) ಉದಾಹರಿಸಿ ವಿವರಣಾತ್ಮಕವಾದ ವಿಚಾರಗಳನ್ನು ನೀಡುತ್ತಾರೆ. ಇದರಿಂದಾಗಿ ನಮಗೆ ಆರ್ಯಭಟೀಯ ಮೊದಲಾಗಿ ಸಿದ್ಧಾಂತ ಶಿರೋಮಣಿಯವರೆಗೆ ಬೆಳೆದುಬಂದ ಮೌಲಿಕ ವಿಚಾರ (ಸಿದ್ಧಾಂತ)ಗಳನ್ನು ತಿಳಿಯಲು ಸಾಧ್ಯವಾಗುತ್ತದೆ. ಅಂದರೆ ವಿಶ್ವಸನೀಯ ವಿಚಾರಧಾರೆಗೆ ಭಾರತದ ಕೊಡುಗೆಯನ್ನು ಗುರುತುಮಾಡಿ ತೋರಿಸುವಂತೆ ಆಗಿದೆ.

ಆದರೆ ಈ ಕೃತಿಕಾರರು ತಮ್ಮ ಬಗ್ಗೆ ವಿವರಗಳನ್ನು ನೀಡಿಲ್ಲ. ಇದನ್ನು ಪ್ರಕಟಿಸಿದ ಕಾಲವನ್ನು ಮುನ್ನುಡಿಯಿಂದ ನವೆಂಬರ್ ೧೯೩೫ ಎಂದೂ ಅವರು ಮೈಸೂರು ಇಂಟರ್‌ಮೀಡಿಯೇಟ್ ಕಾಲೇಜಿನ ಪ್ರಾಧ್ಯಾಪಕರೆಂದೂ (ಮಾತ್ರ) ತಿಳಿಯಬಹುದಾಗಿದೆ. ಒಟ್ಟಿನಲ್ಲಿ ಈ ಕಾಲದಲ್ಲಿಯೂ ಆರ್ಯಭಟನ ಪರಂಪರೆಗೆ ಸೇರಬಹುದಾದ ಒಬ್ಬ ವಿದ್ವಾಂಸರನ್ನು ಇಲ್ಲಿ ಗುರುತಿಸಲು ಸಾಧ್ಯವಾಗಿದೆ. (ಇವರ ವಾರಸುದಾರರು ಯಾರಾದರೂ ಇದ್ದಲ್ಲಿ ದಯವಿಟ್ಟು ತಿಳಿಸಬೇಕಾಗಿ ವಿನಂತಿಸುತ್ತಾ) ಇಷ್ಟು ಮಹತ್ವವನ್ನು ಈ ಗ್ರಂಥದಿಂದ ಗುರುತಿಸಲು ಸಾಧ್ಯವಾಗಿದೆ.

ಇನ್ನು, ಈ ಕೃತಿಯ ಸ್ಥೂಲ ಪರಿಚಯವನ್ನು ಇಲ್ಲಿ ಮಾಡಿಕೊಡಬಹುದು. – 'ಪ್ರಸ್ತಾವನೆ'ಯಲ್ಲಿ ''ಆರ್ಯಭಟ ಎಂಬ ಲೇಖನವನ್ನಷ್ಟೇ ಬರೆದು ಮಾಸಪತ್ರಿಕೆಯಲ್ಲಿ ಪ್ರಕಟಿಸಿ ಸುಮ್ಮನಾಗುತ್ತಿದ್ದ ನನ್ನನ್ನು ಈ ನಾಲ್ವರು ಸಿದ್ಧಾಂತಿಗಳ ವಿಷಯವಾಗಿಯೂ ಬರೆಯ ಬೇಕೆಂದು ಪ್ರೋತ್ಸಾಹ ದೊರಕಿರುವುದರಿಂದ ಈ ಸಣ್ಣ ಗ್ರಂಥವನ್ನು'' ರಚಿಸಿರುವುದಾಗಿ ಹೇಳಿದ್ದಾರೆ – ಕೃತಜ್ಞತೆಯಿಂದ :

ವಿಶ್ವ ಸ್ಥಿತಿ ಪ್ರಳಯ ಸರ್ಗ ಮಹಾವಿಭೂತಿ
ವೃತ್ತಿ ಪ್ರಕಾಶನಿಯಮಾವೃತಿ ಬಂಧ ಮೋಕ್ಷಾಃ।
ಯಸ್ಯಾ ಅಪಾಂಗ ಲವಮಾತ್ರತ ಊರ್ಜಿತಾ ಸಾ
ಶ್ರೀಮತ್ಕಟಾಕ್ಷ ಬಲವತ್ಯಜಿತಂ ನಮಾಮಿ ॥

ಮುಂದೆ ಆರ್ಯಭಟ-ವರಾಹಮಿಹಿರಾಚಾರ್ಯರು, ಬ್ರಹ್ಮಗುಪ್ತ ಮತ್ತು ಭಾಸ್ಕರಾಚಾರ್ಯರು ಎಂಬ ನಾಲ್ಕು ಭಾಗದಲ್ಲಿ ಭಾರತೀಯವಾದ ಚಿಂತನ ವಿಕಾಸದ ಇತಿಹಾಸವನ್ನು ವಿಮರ್ಶಾತ್ಮಕವಾಗಿ ಸಂಸ್ಕೃತ ಗ್ರಂಥಗಳಿಂದ ಆಧರಿಸಿದ್ದಾರೆ. ಉದಾಹರಣೆಗೆ ''ಈ ಭೂಮಿಗೆ ಬೆಳಕನ್ನು ಒದಗಿಸುವ ಸೂರ್ಯ ಚಂದ್ರರು, ಇವುಗಳ ಸ್ಥಾನ ನಿರ್ದೇಶನ, ಚಲನಕ್ರಮ, ಅಂತಃ ಪರಿಸ್ಥಿತಿ ಮುಂತಾದ ವಿಷಯಗಳನ್ನು ತಿಳಿಸುವ ಶಾಸ್ತ್ರವೇ ಖಗೋಳಶಾಸ್ತ್ರ'' ಎಂದಿದ್ದಾರೆ. ''ಹಿಂದೂ ಖಗೋಳಶಾಸ್ತ್ರವನ್ನು ಹೋರಾ ಶಾಸ್ತ್ರದ ಸಂಪರ್ಕವಿಲ್ಲದೆಯೇ ಸಿದ್ಧಾಂತ ರೂಪವಾಗಿ ಬರೆದಿಟ್ಟಿರುವವರಲ್ಲಿ ಆರ್ಯಭಟನೇ ಮೊದಲನೆಯವನೆನ್ನಬಹುದು. ಆರ್ಯಭಟನಿಗೂ ಮೊದಲು ಲಾಟಾಚಾರ್ಯ, ಸಿಂಹಾಚಾರ್ಯ ಮುಂತಾದ ಸಿದ್ಧಾಂತಿಗಳು ಶಾಸ್ತ್ರ ಪ್ರಚಾರವನ್ನು ಮಾಡಿದ್ದರು. ಕ್ರಿ. ಶ. ೬ನೇ ಶತಮಾನದಲ್ಲಿದ್ದ ವರಾಹಮಿಹಿರನು ಪಂಚ ಸಿದ್ಧಾಂತಿಕಾ ಎಂಬ ಗ್ರಂಥವನ್ನು ಬರೆದು ತನ್ನ ಕಾಲದಲ್ಲಿ ಪ್ರಸಿದ್ಧವಾಗಿದ್ದ ಸೌರ, ಪೈತಾಮಹ, ರೋಮಕ, ಪೌಲಿಶ, ವಾಸಿಷ್ಠಗಳೆಂಬ ಐದು ಸಿದ್ಧಾಂತಗಳನ್ನು ಕ್ರೋಡೀಕರಿಸಿರುವುದನ್ನು ವಿವರಿಸಿದ್ದಾರೆ. ಆರ್ಯಭಟ ಮತ್ತು ವರಾಹಮಿಹಿರರಿಗೆ ಮುಂಚೆ ೧೮ ಜನರು ಜ್ಯೋತಿಶ್ಶಾಸ್ತ್ರವನ್ನು ಪ್ರಚಾರ ಮಾಡಿರುವರೆಂದು ತಿಳಿಸಿದ್ದಾರೆ'' – ಅಲ್ಲದೆ ಅನೇಕ ಗ್ರಂಥಗಳಾಗಲಿ ಮತಗಳಾಗಲಿ ಉಳಿದಿಲ್ಲ ಎಂದಿದ್ದಾರೆ.

ಮುಂದೆ ಆರ್ಯಭಟನ ಹುಟ್ಟಿದ ಸ್ಥಳ, ಕಾಲ ಮುಂತಾದ ವಿಷಯಗಳನ್ನು ಚರ್ಚಿಸಲಾಗಿದೆ. ಆರ್ಯಭಟನ ಕಾಲವನ್ನು ನಿರ್ಧರಿಸಲು 'ಆರ್ಯಭಟೀಯ'ದಿಂದ ಕಾಲ, ಕ್ರಿಯಾಪದವೆಂಬ ಎರಡನೇ ಭಾಗದ ಹತ್ತನೆಯ ಶ್ಲೋಕವನ್ನು ಕೊಟ್ಟಿದ್ದಾರೆ.

ಷಷ್ಟ್ಯಬ್ದಾನಾಂ ಷಷ್ಟಿರ್ಯದಾ ವ್ಯತೀತಾಸ್ತ್ರಯಶ್ಚ
ಯುಗಪಾದಾಃ।

ತ್ರ್ಯಧಿಕಾ ವಿಂಶತಿರಬ್ದಾಸ್ತದೇಹ ಮಮ ಜನ್ಮತ್ಯೋತೀತಾಃ॥ ಇದರ ಅರ್ಥವನ್ನು ವಿವರಿಸಲಾಗಿದೆ. ಈಗಿನ ಕಲಿಯುಗದ ೩೬೦೦ ವರ್ಷಗಳು ಕಳೆದಾಗ ಆರ್ಯಭಟನ ಆಯಸ್ಸು ೨೩. ಆದುದರಿಂದ ಅವನ ಜನ್ಮಕಾಲ ಕಲಿಯುಗದ ೩೫೭೭ ವರ್ಷವೆಂದು ಗೊತ್ತಾಗುವುದು. ಕಲಿ ೩೧೦೧ರಿಂದ ಕ್ರಿಸ್ತಶಕವು ಆರಂಭವಾಗುವುದರಿಂದ ಆರ್ಯಭಟನ ಜನನಕಾಲವು ಕ್ರಿ.ಶ. ೪೭೬ ಎಂದು ಹೇಳಬಹುದು. – ಹೀಗೆ ಈ ಕೃತಿಯ ಕರ್ತೃವು ಪ್ರಯತ್ನಶೀಲರಾಗಿದ್ದಾರೆ. – ''ತನ್ನ ೨೩ನೇ ವಯಸ್ಸಿನಲ್ಲೇ ಗ್ರಂಥರಚನೆ ಮಾಡಿದನೆಂದೂ ಆಗ್ಗೆ ಕಲಿಯುಗದ ೩೬೦೦ ವರ್ಷಗಳಾಗಿದ್ದವು (ಕ್ರಿ. ಶ. ೪೯೯) ಎಂದೂ ಗೊತ್ತಾಗುವುದು.'' –

ಈ ಉದಾಹರಣೆಯನ್ನು ಗಮನಿಸಿದಲ್ಲಿ ಇಡೀ ಗ್ರಂಥದ ಶೈಲಿಯ ಮನವರಿಕೆಯಾದೀತು. – ಆರ್ಯಭಟೀಯವು ೮೦೦ ಶ್ಲೋಕಗಳುಳ್ಳ ಒಂದು ನಷ್ಟಪ್ರಾಯವಾದ ಗ್ರಂಥರತ್ನವೆಂದು ಪಾಶ್ಚಾತ್ಯ ವಿದ್ವಾಂಸರು ಅಭಿಪ್ರಾಯಪಟ್ಟರು ಇತ್ಯಾದಿ ಅಧಿಕೃತ ವಿವರಗಳಿಂದ ಕೂಡಿದ ಈ ಸಣ್ಣ ಕೃತಿಯಲ್ಲಿ ನಮ್ಮ ಶಾಸ್ತ್ರ ಪರಂಪರೆಯನ್ನು ಖಚಿತವಾಗಿ ವಿವರಿಸಲಾಗಿದೆ. ''ಈ ಹಿರಿಯ ಆರ್ಯಭಟನು ಮೊದಲಿನ ಆರ್ಯಭಟನಿಗೆ ಸಮನಾದ ಬುದ್ಧಿಶಾಲಿಯೂ ಅಲ್ಲ. ಆ ಪೂರ್ವ ಸಿದ್ಧಾಂತವನ್ನು ಇವನು ಮುಂದುವರಿಸಿ ತಿದ್ದಿ ಚೆನ್ನಾಗಿ ಬರೆಯಲೂ ಇಲ್ಲ'' ಎಂಬುದು ಡಾಕ್ಟರ್ ಕರ್ನ್ ಮುಂತಾದವರ ಅಭಿಪ್ರಾಯವಾಗಿದೆ. ಆದುದರಿಂದ ಮುಖ್ಯವಾದ ಸಿದ್ಧಾಂತ ಪ್ರವರ್ತಕನು ಮೊದಲಿನ ಆರ್ಯಭಟನೇ ಎಂದು ನಿಶ್ಚಿತವಾಗುವುದು ಎಂದಿದ್ದಾರೆ ಪ್ರೊ॥ ಎಸ್. ಕೆ. ನರಸಿಂಹಮೂರ್ತಿಯವರು. ಹೀಗಲ್ಲದೆ ಆರ್ಯಭಟೀಯದ ತಿರುಳನ್ನೂ ಮೂಲ ಶ್ಲೋಕಗಳ ಆಧಾರದಿಂದ ವಿವರಿಸಲಾಗಿದೆ. ಆರ್ಯಭಟನ ಮತ್ತೊಂದು ಕೃತಿ 'ದಶಗೀತಿಕೆ' ಎಂಬುದು. ಅದರಲ್ಲಿ ಸಂಜ್ಞೆಗಳ ಆಧಾರದಿಂದ ೧೮ ಸ್ಥಾನಗಳುಳ್ಳ ಸಂಖ್ಯೆಯನ್ನು ನಿರಾತಂಕವಾಗಿ ಉಪಯೋಗಿಸಲು ಅರ್ಹವಾಗಿದೆ ಎಂದು ಇವರು ಖಚಿತಪಡಿಸಿದ್ದಾರೆ. ಇಷ್ಟಕ್ಕೇ ಬಿಡದೆ ನಮ್ಮ ಗಣಿತ ಶಾಸ್ತ್ರದ ಇತಿಹಾಸವನ್ನು ಗುರುತಿಸುತ್ತಾ ಹೋಗಿದ್ದಾರೆ. ಮುಂದೆ ವರಾಹಮಿಹಿರ, ಬ್ರಹ್ಮಗುಪ್ತ ಮತ್ತು ಭಾಸ್ಕರಾಚಾರ್ಯರ ಕೃತಿಗಳನ್ನೂ ಅವುಗಳಿಂದ ಆಗುವ ಪ್ರಯೋಜನವನ್ನೂ ಕೂಲಂಕಷವಾಗಿ ಪರಿಶೀಲಿಸಿದ್ದಾರೆ. ಹೀಗೆ ಈ ಗ್ರಂಥವು 'ಸಣ್ಣ'ದಾದರೂ ಅಪೂರ್ವವೂ 'ತಾರ್ಕಿಕಬದ್ಧತೆ'ಯಿಂದ ಕೂಡಿದ ಉಪಯುಕ್ತವಾದ, ಅಧ್ಯಯನಕ್ಕೆ ತಕ್ಕುದಾದ ಒಂದು ಹೆಮ್ಮೆಯ ಕೃತಿಯಾಗಿದೆ. ವಿಶೇಷವಾಗಿ ಭಾಸ್ಕರಾಚಾರ್ಯನ ನೆಲೆವೀಡು ಕರ್ನಾಟಕದ ಸಹ್ಯಾದ್ರಿ ಎಂಬುದನ್ನು ಇಲ್ಲಿ ಖಚಿತಪಡಿಸಲಾಗಿದೆ.

**ಕ. ವೆಂ. ರಾಜಗೋಪಾಲ**
ಎಂ.ಐ.ಜಿ. ೪೦, ೮೦ ಫೀಟ್ ರೋಡ್, ಕೆಂಗೇರಿ ಸ್ಯಾಟಲೈಟ್ ಟೌನ್
೨ನೇ ಹಂತ, ಬೆಂಗಳೂರು - ೬೦

# ನವಕರ್ನಾಟಕ ೩೦ರ ಸಂಭ್ರಮದಲ್ಲಿ

## ನಾಲ್ಕು ಕೃತಿಗಳ ಅನಾವರಣ

12-7-2009

ಭಾನುವಾರ

ಬೆಳಗ್ಗೆ 10 ಗಂಟೆಗೆ

ನಯನ ಸಭಾಂಗಣ

ಕನ್ನಡ ಭವನ

ಜೆ. ಸಿ. ರಸ್ತೆ

ಬೆಂಗಳೂರು

ಪ್ರೊ|| ಜಿ. ವೆಂಕಟಸುಬ್ಬಯ್ಯ — ಇಗೋ ಕನ್ನಡ — ಸಾಮಾಜಿಕ ನಿಘಂಟು

ಬೆಲೆ : ರೂ. 275

ಸೀತಾಕಾವ್ಯ ಕಥನ — ಡಾ|| ಎಂ. ಎನ್. ಕೇಶವ ರಾವ್

ಬೆಲೆ : ರೂ. 45

ವೈಚಾರಿಕ ಕವನಗಳು — ಎಸ್. ಮಂಜುನಾಥ

ಬೆಲೆ : ರೂ. 45

ಜೀವೋಪನಿಷತ್ — ಕವನ ಸಂಕಲನ — ಡಾ|| ಎಂ. ಎನ್. ಕೇಶವರಾವ್

ಬೆಲೆ : ರೂ. 45

ಅಧ್ಯಕ್ಷತೆ ಮತ್ತು ಕೃತಿಗಳ ಅನಾವರಣ

**ಪ್ರೊ|| ಎಂ. ಎಚ್. ಕೃಷ್ಣಯ್ಯ**

ಉಪಸ್ಥಿತಿ

**ಪ್ರೊ|| ಜಿ. ವೆಂಕಟಸುಬ್ಬಯ್ಯ**

**ಡಾ|| ಎಂ. ಎನ್. ಕೇಶವರಾವ್**

**ಎಸ್. ಮಂಜುನಾಥ**

ಅಂಚೆ/ಕೊರಿಯರ್ ಮೂಲಕ ಬೇಕಾದಲ್ಲಿ ಪುಸ್ತಕದ ಬೆಲೆಯ ಜೊತೆಯಲ್ಲಿ ರೂ. 20 ಸೇರಿಸಿ ಎಂ.ಓ./ಡಿ.ಡಿ. ಕಳಿಸಿ

## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಅಂ. ಪೆ. ಸಂಖ್ಯೆ : 5159, ಬೆಂಗಳೂರು - 560 001

ಫೋನ್ : 22203580, 30578022, ಫ್ಯಾಕ್ಸ್ : 30578023 e-mail: navakarnataka@dataone.in

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly /JULY 2009 Rs. 12
Regd. KRNA / BGE / 7 / 2009-2011. WPP No. 14. Posted at Bangalore PSO Mysore Road BG-26
on the 28th of every month Licenced to post without prepayment. RNI Regn. No. KARKAN/1999/614.